ಶ್ರೀ ಶಂಕರ ಭಗವತ್ಪಾದಾಯತೇ ನಮಃ



(ಅಷ್ಟೋಪನಿಷತ್ ಪ್ರಥಮಭಾಗ)

# ಚತುರುಪನಿಷತ್

(ಕನ್ನಡ ತಾತ್ಪರ್ಯ ಸಹಿತ)


ಎಂ. ಸಿ. ರಾಮರಾವ್

ಉಪನಿಷತ್ ಲೇಖಕ

ಶ್ರೀ ಶಂಕರ ಭಗವತ್ಪಾದಾಚಾರ್ಯೇಭ್ಯೋ ನಮಃ

(ಅಷ್ಟೋಪನಿಷತ್ ಪ್ರಥಮಭಾಗ)

# ಚತುರುಪನಿಷತ್

(ಕನ್ನಡ ತಾತ್ಪರ್ಯ ಸಹಿತ)

ಎಂ. ಸಿ. ರಾಮರಾವ್
ಉಪನಿಷತ್ ಲೇಖಕ

CHATURUPANISHAT by Sri M. C. Ramrao, Published by
M. C Ramrao, Ramamurthy Nagar, Bangalore-16,
Printed at ILA Printers, Chamrajpet, Bangalore-18

ಪ್ರಥಮ ಮುದ್ರಣ : ೧೯೮೦

ಈ ಪುಸ್ತಕಕ್ಕೆ ಬೇಕಾಗುವಷ್ಟು ಕಾಗದವನ್ನು ರಿಯಾಯಿತಿ ಬೆಲೆಗೆ ಸರ್ಕಾರದವರು ಕರ್ನಾಟಕ ಪಬ್ಲಿಷರ್ಸ್ ಮತ್ತು ಬುಕ್ ಸೆಲ್ಲರ್ಸ್ ಅಸೋಸಿಯೇಷನ್ ಮೂಲಕ ಒದಗಿಸಿರುತ್ತಾರೆ.

**ಬೆಲೆ : ಆರು ರೂಪಾಯಿಗಳು**

ಮುದ್ರಕರು :
ಇಳಾ ಪ್ರಿಂಟರ್ಸ್
ಚಾಮರಾಜಪೇಟೆ, ಬೆಂಗಳೂರು-೧೮

# ಅರ್ಪಣೆ

ನಿರಂತರವಾಗಿ ಶೃಂಗೇರಿ ಶಾರದಾಪೀಠಸ್ಥರಾದ ಶ್ರೀ ಶಂಕರಾಚಾರ್ಯ ಸ್ವಾಮಿಗಳವರ ಸೇವೆಯನ್ನು ಮಾಡಿ ಗುರುಭಕ್ತ ತಿಲಕರೆಂಬ ಗೌರವವನ್ನೂ, ಮೈಸೂರು ಮಹಾರಾಜಾ ಸರ್ಕಾರದಲ್ಲಿ ಉತ್ಕೃಷ್ಟವಾದ ಸೇವೆಯನ್ನು ಮಾಡಿ ರಾವ್‌ಬಹದ್ದೂರ್ ಬಿರುದನ್ನೂ ಸಂಪಾದಿಸಿ ವಿಪುಲವಾದ ಸಂತಾನ ಶ್ರೀಗಳ ಪಡೆಯುರಾಗಿ ವಿರಾಜಿಸಿದ ಹಾಸನದ ಶ್ರೀ ಎನ್. ಎಸ್. ನಂಜುಂಡಯ್ಯನವರ ವಂಶಾಭಿವೃದ್ಧಿಯನ್ನು ಹಾರೈಸಿ ಈ ಗ್ರಂಥವನ್ನು ಅವರಿಗೆ ಅರ್ಪಣೆ ಮಾಡಿರುತ್ತೇನೆ.

ಮಿ|| ಚೌ|| ರಾಮರಾವ್
ಗ್ರಂಥಕರ್ತ

## ಶ್ರೀ ಶ್ರೀ ಜಗದ್ಗುರು ಶಂಕರಾಚಾರ್ಯ ಮಹಾಸಂಸ್ಥಾನಂ
## ಶಾರದಾಪೀಠಂ, ಶೃಂಗೇರಿ

*Private Secretary*
To His Holines Sri Jagadguru
Sri Shankaracharya Dakshinamnaya
Sri Sharada Peetham

Ref. No. 6901
(Camp)
Hyderabad
Date 21-8-77

**ಶ್ರೀ ಎಂ. ಸಿ. ರಾಮರಾವ್ ರವರಿಗೆ ವಂದನೆಗಳು**

ನಿಮ್ಮ ತಾ॥ 13-8-77ರ ಪತ್ರ ತಲುಪಿತು. ನೀವು ಉಪನಿಷತ್ತುಗಳನ್ನು ಕನ್ನಡಕ್ಕೆ ಅನುವಾದಿಸಿ ಅಚ್ಚಿಗೆ ಕೊಡಲಾಗಿರುವ ವಿಷಯವನ್ನು ಶ್ರೀ ಶ್ರೀಗಳವರಲ್ಲಿ ಅರಿಕೆಮಾಡಲಾಯ್ತು.

ವಿಷಯವನ್ನು ತಿಳಿದು ಶ್ರೀ ಶ್ರೀಗಳವರು ಸಂತೋಷಪಟ್ಟರು, ತಮ್ಮ ಉದ್ದೇಶವು ಸಫಲವಾಗಲೆಂದು ಶ್ರೀಗಳವರು ಆಶೀರ್ವದಿಸಿರುತ್ತಾರೆ.

ಶ್ರೀ ಶ್ರೀಗಳವರ ನಾರಾಯಣ ಸ್ಮರಣಪೂರ್ವಕ ಆಶೀರ್ವಾದಗಳನ್ನು ತಿಳಿಸುತ್ತಿದ್ದೇನೆ.

ಇತಿ

Sd/–
GIRIDHARA SASTRY
*Private Secretary*

# ಶ್ರೀ ಶಕ್ತಿ ವಿಶಿಷ್ಟಾದ್ವೈತ ಅಖಂಡ ಕಲ್ಯಾಣಪುರ ವಿಶ್ವಜ್ಯೋತಿ ಶೂನ್ಯಸಿಂಹಾಸನಾಧೀಶ್ವರ

ಪರಮಪೂಜ್ಯ

ಶ್ರೀ ಗುರು ಆನಂದಸ್ವಾಮಿ ಗುರುರಾಮಲಿಂಗಸ್ವಾಮಿ ಮಂಟೂರು ಮಠ

ಇವರು ಸದಾಕಾಲ ಮಾಡುವ ಹೃತ್ಪೂರ್ವಕ ಶುಭಾಶೀರ್ವಾದಗಳು.

ತರುವಾಯ ಈ ಪತ್ರ ಬರೆಯಲು ಕಾರಣವೇನೆಂದರೆ ನಿಮ್ಮ "ಅಷ್ಟೋಪನಿಷತ್" ಪುಸ್ತಕವನ್ನು ನಮ್ಮ ಶಿಷ್ಯರಾದ ಶ್ರೀ ಗೌರೀಮಠ ಸ್ವಾಮಿಗಳವರು ಸ್ವತಃ ತಮ್ಮಲ್ಲಿ ಬಂದು ತಮ್ಮಿಂದ ಅದನ್ನು ಸ್ವೀಕರಿಸಿ ನಮಗೆ ಮುಟ್ಟಿಸಿದ್ದಾರೆ. ಓದಿ ಅತ್ಯಾನಂದವಾಗಿದೆ.

ಅದೆಷ್ಟೋದಿನಗಳಿಂದ ಕನ್ನಡ ಜನತೆ ನಿರೀಕ್ಷಿಸಿದ ಈ ಮಹಾ ಕಾರ್ಯ ತಮ್ಮಿಂದ ನೆರವೇರಲ್ಪಟ್ಟಿತು. ನಿಮಗೆ ಕನ್ನಡ ಜನತೆ ಎಂದೆಂದಿಗೂ ಋಣಿಗಳು. ತಮ್ಮಿಂದ ಇನ್ನಷ್ಟು ಅಮೂಲ್ಯ ಸೇವೆಯನ್ನು ನಮ್ಮ ಸಮಾಜ ಈ ಮೂಲಕ ಪಡೆಯಲಿ. ಇನ್ನೂ ಅಮೂಲ್ಯ ಗ್ರಂಥಗಳೆಲ್ಲಾ ತಮ್ಮಿಂದ ಮೂಡಿ ಬರಲೆಂದು ಪ್ರಾರ್ಥಿಸಿ ಸಧ್ಯಕ್ಕೆ ಪ್ರೀತ್ಯರ್ಥವಾಗಿ ಅತ್ಯಲ್ಪ ಕಾಣಿಕೆ 10 ರೂ. M.O. ಮಾಡಿದೆ ಸ್ವೀಕರಿಸಬೇಕು ಪ್ರೀತಿ ಇರಲಿ.

ಇತಿ ಸಮಸ್ತಸನ್ಮಂಗಳಾನಿಭವನ್ತು

14-8-1978

(Sd)

ಸ್ವಾಮಿಜಿ

# ಮುನ್ನುಡಿ

Sri Ramakrishna Ashrama
Bull Temple Road
Bangalore-560 019

18-10-1979

ಈ ಹೊತ್ತಿಗೆಯು ನಾಲ್ಕು ಉಪನಿಷತ್ತುಗಳ ಮುಖ್ಯ ಭಾಗಗಳನ್ನೊಡಗೊಂಡಿದೆ–ಶ್ವೇತಾಶ್ವತರೋಪನಿಷತ್, ಕೌಶೀತಕೀ ಉಪನಿಷತ್, ಜಾಬಾಲೋಪನಿಷತ್ ಮತ್ತು ಮೈತ್ರಾಯಣ್ಯುಪನಿಷತ್. ಇವುಗಳಲ್ಲಿ ಕೌಶೀತಕೀ ಉಪನಿಷತ್ ಮತ್ತು ಮೈತ್ರಾಯಣ್ಯುಪನಿಷತ್ ಬಹಳ ಪ್ರಾಚೀನವಾದುವು. ಈ ಉಪನಿಷತ್ತುಗಳು ಬಹಳ ರಮಣೀಯವಾದ, ಮೋಕ್ಷ ಹೇತುಗಳಾದ ಮತ್ತು ಸ್ಫೂರ್ತಿದಾಯಕವಾದ ಮಂತ್ರಗಳನ್ನೊಡಗೊಂಡಿದೆ.

ಶ್ರೀಮಾನ್ ಎಂ. ಸಿ. ರಾಮರಾಯರು ಮೂಲ ಸಮೇತ ಈ ಉಪನಿಷತ್ತುಗಳ ಕೆಲವು ಮಂತ್ರಗಳನ್ನು ಕನ್ನಡಕ್ಕೆ ಸರಳ ಶೈಲಿಯಲ್ಲಿ ಅರ್ಥವಾಗುವ ಹಾಗೆ ಭಾಷಾಂತರಿಸಿದ್ದಾರೆ. ಈ ಭಾಷಾಂತರವು ಮನೋಹರಿಯೂ, ಲಲಿತವೂ ಆಗಿದೆ, ಈ ಪುಸ್ತಕದಿಂದ ಓದುಗರಿಗೆ ಉಪನಿಷತ್ತುಗಳ ಪರಿಚಯವಾಗಲಿ ಎಂದು ಹಾರೈಸುತ್ತೇನೆ.

(Sd/)
ಸ್ವಾಮಿ ಆದಿದೇವಾನಂದ
ಅಧ್ಯಕ್ಷ

# ಅನುಕ್ರಮಣಿಕೆ

## ಪೀಠಿಕೆ

ಉಪನಿಷತ್ತಿನ ಅರ್ಥವನ್ನು ಸಂಗ್ರಹವಾಗಿ ತಿಳಿಸಬಹುದಾದರೆ "ವಿದ್ಯೆ ಮತ್ತು ಅವಿದ್ಯೆ ಎಂಬ ವಿವರಗಳನ್ನು ತಿಳಿಯುವುದು" ನಾನು ಎಂಬುದು ದ್ರಷ್ಟೃ ಶ್ರೋತ್ರಾದಿರೂಪಗಳೆಲ್ಲೆಲ್ಲಿಯೂ ವ್ಯಾಪಿಸಿರುವ ಚೈತನ್ಯ ಸ್ವರೂಪನಾದ ಆತ್ಮನೇ ಎಂದು ಪೂರ್ಣರೂಪದಿಂದ ಅರಿತುಕೊಳ್ಳುವುದೇ ವಿದ್ಯೆ. ಮಿಗಿಲಿಲ್ಲದಷ್ಟು ಪ್ರಿಯವಾಗಿರುವ ಈ ಬ್ರಹ್ಮವೇ ನನ್ನ ಆತ್ಮನು ಎಂಬ ತಿಳುವಳಿಕೆಯ ರೂಪವಾದ ವಿದ್ಯೆಯು ಬಂದರೆ ಎಲ್ಲವನ್ನೂ ತಿಳಿದಂತೆ ಭಾವಿಸಬಹುದು. ಇದನ್ನರಿಯದವನು ದೇವಾದಿದೇವತೆಗಳಿಗೆ ಪಶುಗಳಂತೆ ಉಪಕಾರಮಾಡಿಕೊಂಡಿರಬೇಕಾಗುತ್ತದೆ. ಇದೇ ಅವಿದ್ಯೆ. ವೇದಗಳಲ್ಲಿನ ಪ್ರತ್ಯಕ್ಷಾನುಮಾನಗಳಿಂದಗೊತ್ತಾಗದೆ ಇರುವ ಇಷ್ಟಾನಿಷ್ಟಪ್ರಾಪ್ತಿ ಪರಿಹಾರಗಳಿಗೆ ಉಪಾಯವನ್ನು ಕಂಡುಕೊಳ್ಳಬೇಕಾಗಿರುವುದು ಎಲ್ಲರಿಗೂ ಅವಶ್ಯಕ ಆದರೆ ಜನ್ಮಾಂತರಕ್ಕೆ ಸಂಬಂಧಪಟ್ಟ ಆತ್ಮನು ಇರುವನೆಂಬ ಅರಿವು ಇಲ್ಲದಿದ್ದರೆ ಜನ್ಮಾಂತರದಲ್ಲಿ ಇಷ್ಟಾನಿಷ್ಟಪ್ರಾಪ್ತಿ ಪರಿಹಾರಗಳು ಉಂಟಾಗಲಾರದು. ಏಕೆಂದರೆ ಸತ್ತಮಾನವನ ವಿಚಾರದಲ್ಲಿ ಇದ್ದಾನೆಂದು ಕೆಲವರು, ಇಲ್ಲವೆಂದು ಕೆಲವರು ಹೀಗೆ ಸಂಶಯ ಪಡುತ್ತಾರಷ್ಟೆ. ಇದಕ್ಕೆ ತಕ್ಕ ಉತ್ತರವನ್ನು ಉಪನಿಷತ್ತುಗಳು ಒದಗಿಸುತ್ತವೆ. ಹೀಗೆಯೇ ಕೆಲವರು ಜೀವಿಗಳು ಶರೀರತ್ವವನ್ನು ಪಡೆಯುವುದಕ್ಕೆ ಯೋನಿಯನ್ನು ಆಶ್ರಯಿಸುವರೆಂದೂಮತ್ತೆ ಕೆಲವರು ಅವರವರ ಕರ್ಮಗಳಿಗೆ ಅನುಗುಣವಾಗಿಯೂ, ಜ್ಞಾನಕ್ಕೆ ಅನುಗುಣವಾಗಿಯೂ ಸ್ಥಾಣುವನ್ನು ಸೇರುವರು ಮತ್ತು ಜನ್ಮಾಂತರವನ್ನು ಪಡೆಯುವರು ಎಂದು ನಿರ್ಧರಿಸಿರುತ್ತಾರೆ. ಪುಣ್ಯಕರ್ಮದಿಂದ ಪುಣ್ಯಫಲವೂ, ಪಾಪಕರ್ಮದಿಂದ ಪಾಪದ ಫಲವೂ ಲಭಿಸುತ್ತದೆಂದು ಶೃತಿಗಳು ಸಾರುತ್ತವೆ.

ಹೇಗೇ ಆಗಲಿ ದೇಹಾಂತರ ಸಂಬಂಧಿಯಾದ ಆತ್ಮನಿರುವನು ಎಂದು ತಿಳಿದು ಕೊಂಡವರಿಗೆ ಉಪಾಯ ವಿಶೇಷಗಳನ್ನು ಕರ್ಮಕಾಂಡವು ತಿಳಿಸಿಕೊಡುತ್ತದೆ. ಎಲ್ಲಿಯವರೆಗೆ ಬ್ರಹ್ಮಾತ್ಮಸ್ವರೂಪದ ಜ್ಞಾನದಿಂದ ಕರ್ಮಕಾಂಡವನ್ನು ಕಳೆದು ಹಾಕಿರುವುದಿಲ್ಲವೋ ಅಲ್ಲಿಯವರೆಗೂ ಈ ಜೀವನು ಕರ್ಮಫಲದಲ್ಲಿ ರಾಗದ್ವೇಷಾದಿಗಳಿಂದ ಪ್ರೇರಿತನಾಗಿ ಅಧರ್ಮಗಳೆಂಬ ಕರ್ಮಗಳನ್ನು ಬಹಳವಾಗಿ ಕೂಡಿ ಹಾಕಿಕೊಳ್ಳುತ್ತಿರುತ್ತಾನೆ. ಒಂದೊಂದುವೇಳೆ ಶಾಸ್ತ್ರದಿಂದಾದ ಸಂಸ್ಕಾರವು ಪ್ರಬಲವಾಗಿರುತ್ತದೆ. ಆಗ ಧರ್ಮವೆಂಬ ಇಷ್ಟಸಾಧನವಾದ ಕರ್ಮವನ್ನು ಕೂಡಿಹಾಕಿಕೊಳ್ಳುತ್ತಾನೆ. ಅದರಿಂದ ಪಿತೃಲೋಕವೇ ಮುಂತಾದುವುಗಳ ಪ್ರಾಪ್ತಿಯ ಫಲ ಮತ್ತು ದೇವಲೋಕಾದಿಯಾಗಿ ಬ್ರಹ್ಮಲೋಕಾಂತರವಾದ ಫಲಗಳು ದೊರೆಯುತ್ತವೆ.

ಉಪನಿಷತ್ತಿನಲ್ಲಿ ಗುರುಶಿಷ್ಯ ಸಂಬಂಧವಾದ ವಿಷಯಗಳು ಅನೇಕವಿವೆ. ಯಾವ ವಿದ್ಯಾಭ್ಯಾಸಗಳಲ್ಲಾಗಲೀ ಗುರುಶಿಷ್ಯರ ಸಂಬಂಧ ಅತ್ಯಂತ ಮುಖ್ಯವಾದುದು. ಆದರಲ್ಲೂ ಅಧ್ಯಾತ್ಮ ವಿದ್ಯೆಯನ್ನು ಕಲಿಯಬೇಕಾದರೆ ಈ ಸಂಬಂಧವು ಅತಿಮಧುರವಾಗಿರಬೇಕು. ಇಲ್ಲಿ ಬರೀ ಜ್ಞಾನವನ್ನು ಮಾತ್ರ ಗುರುವು ಕೊಡುತ್ತಿರುವುದಲ್ಲ ; ತನ್ನ ಸಾಕ್ಷಾತ್ಕಾರದ ಶಕ್ತಿಯನ್ನೂ ದಾನ ಮಾಡುತ್ತಾನೆ. ಆದ್ದರಿಂದ ಗುರುಶಿಷ್ಯರ ಸಂಬಂಧವು ಅತೀ ಪವಿತ್ರವಾದ ಸಂಬಂಧ. ಇದರಿಂದಲೇ ವೇದೋಪನಿಷತ್ತುಗಳ ಶ್ರೇಷ್ಠವಾದ ಜ್ಞಾನವು ಪ್ರಪಂಚಕ್ಕೆ ಬಂದಿತು ಮತ್ತು ನಮ್ಮವರೆಗೆ ಉಳಿದುಕೊಂಡುಬರಲೂ ಸಾಧ್ಯವಾಯಿತು. ಶಿಷ್ಯನು ಯಾರೇ ಆಗಿರಲಿ ಜ್ಞಾನಾರ್ಜನೆಯನ್ನು ಮಾಡಬೇಕಾದರೆ ದೈನ್ಯದಿಂದ ಕೈಯ್ಯಲ್ಲಿ ಸಮಿತ್ತುಗಳನ್ನು ಹಿಡಿದುಕೊಂಡು ಗುರುವಿನ ಬಳಿಗೆ ಹೋಗುತ್ತಿದ್ದನು. ಗುರುವಿನ ಮನೆಯಲ್ಲಿ ಯಾವ ಕೆಲಸವನ್ನಾದರೂ ಮಾಡಿ, ಏನು ನೀಡಿದರೂ ಅದನ್ನು ಭಕ್ಷಿಸಿ, ಸೇವಿಸಲು ಸಿದ್ಧನಾಗಿರುತ್ತಿದ್ದನು. ಗುರುವುಕೂಡ ಶಿಷ್ಯನನ್ನು ಅತ್ಯಂತ ಪ್ರೀತಿಯಿಂದ ಸ್ವಾಗತಿಸುತ್ತ ಅವನ ಸೌಕರ್ಯಗಳನ್ನು ವೀಕ್ಷಿಸುತ್ತ ವಿದ್ಯೆಯನ್ನು ಹೇಳಿಕೊಡುತ್ತಿದ್ದನು. ಯೋಗ್ಯನಾದ ಶಿಷ್ಯನನ್ನು ತನ್ನ ಸ್ವಂತಮಗನಿಗಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದನು. ಆಗ ಗುರುವು ಆಶಿಸುತ್ತಿದ್ದುದು ತಾನು ಕಲಿತ ವಿದ್ಯೆಯು ತನ್ನ ತರುವಾಯವೂ ಮಾನವ ಕೋಟಿಯ ಕಲ್ಯಾಣಕ್ಕಾಗಿ ಎಂದೆಂದಿಗೂ ಇರಬೇಕೆಂಬುವುದೇ ಆಗಿತ್ತು.. ಜೀವನದಲ್ಲಿ ನಾವು ಏನನ್ನು ಕಲಿಯು

ತ್ತೀವೋ ಅದು ಕೇವಲ ನನಗೆ ಮಾತ್ರವೇ ಅಲ್ಲ ಆದನ್ನು ಇತರರಿಗೆ ದಾನಮಾಡ ಬೇಕು ಮತ್ತು ಹಾಗೆ ದಾನಮಾಡುವುದಕ್ಕಾಗಿಯೇ ಕಲಿಯಬೇಕು ಎಂಬ ಭಾವನೆ ಆಗಿನ ಗುರುಗಳಲ್ಲಿತ್ತು. ಯಾವಾಗ ವಿದ್ಯಾರ್ಥಿಗಳು ಬಂದರೂ ಅವ ರನ್ನು ಮೊದಲು ಗುರುವು ಕಠಿಣವಾಗಿ ಕಾಣುವ ಕೆಲವು ಪರೀಕ್ಷೆಗಳ ಮೂಲಕ ಅವನ ಸ್ಥೈರ್ಯವನ್ನು ವೀಕ್ಷಿಸುತ್ತಿದ್ದನು. ಏಕೆಂದರೆ ಆಧ್ಯಾತ್ಮ ವಿದ್ಯೆಯನ್ನು ಸ್ವೀಕರಿಸಲು ಶಿಷ್ಯನು ಯೋಗ್ಯನಾಗಿರಬೇಕು. ಅಪಾತ್ರನಿಗೆ ಕಲಿಸಿದ ವಿದ್ಯೆಯೂ ಮತ್ತು ಮಾಡಿದ ದಾನವೂ ಬೂದಿಯಲ್ಲಿ ಮಾಡಿದ ಹೋಮದಂತಾಗುವುದು. ಯಾರಿಗೆ ತಾವು ಪರಮ ಸತ್ಯವನ್ನು ಉಪದೇಶಿಸುತ್ತಾರೋ ಅದು ವ್ಯರ್ಥವಾಗ ದಂತೆ ನೋಡಿಕೊಳ್ಳುವುದು ತಮ್ಮ ಜವಾಬ್ದಾರಿ ಎಂದು ಆಗಿನ ಗುರುಗಳು ಭಾವಿಸಿದ್ದರು. ಶಿಷ್ಯರು ಬಂದು ಗಹನವಾದ ಪ್ರಶ್ನೆಯನ್ನು ಕೇಳಿದ ತಕ್ಷಣವೇ ಗುರುಗಳು ಉತ್ತರಿಸುತ್ತಿರಲಿಲ್ಲ. ಶಿಷ್ಯನನ್ನೇ ಕೆಲವು ಸಾಧನೆಗಳ ಮೂಲಕ ಸ್ವಯಂವೇದ್ಯವಾಗುವಂತೆ ಮಾಡುತ್ತಿದ್ದರು. ಆಸಕ್ತಿಇದ್ದ ಶಿಷ್ಯನು ಅದರಂತೆ ಆಚರಿಸುತ್ತಲೂ ಇದ್ದನು.

ಉಪನಿಷತ್ತಿನಲ್ಲಿ ಗುರುವು ಶಿಷ್ಯನಿಗೆ ಬೋಧಿಸುವ ವಿಧಾನವು ಅದ್ಭುತವಾ ದುದು ಇದು ಅವರಿಬ್ಬರ ಪರಿಶ್ರಮದ ಮೇಲೆ ಅವಲಂಬಿಸಿರುತ್ತಿತ್ತು. ಇದಕ್ಕೆ ಇಬ್ಬರೂ ಅಣಿಯಾಗಿರುತ್ತಿದ್ದರು. ಗುರುವು ಯಾವಾಗಲೂ ತಾನು ದಾತೃ ಮಾತ್ರ ಎಂದು ಭಾವಿಸದೆ ಕೆಲವು ಸಮಯಗಳಲ್ಲಿ ಪರಿಗ್ರಾಹಿಯೂ ಎಂಬುದಾಗಿ ಭಾವಿಸುತ್ತಿದ್ದನು. ಅಧ್ಯಯನಕ್ಕೆ ಮುಂಚೆ ಗುರು ಶಿಷ್ಯರಿಬ್ಬರೂ ಪಠಿಸಬೇಕಾ ಗಿದ್ದ ಶಾಂತಿಶ್ಲೋಕ ಯಾ ಮಂತ್ರಗಳಿಂದ ಅವರ ಉದಾತ್ತಧ್ಯೇಯವು ಕಂಡು ಬರುತ್ತದೆ. "ನಮ್ಮಿಬ್ಬರನ್ನೂ ಜೊತೆಯಲ್ಲಿ ಕಾಪಾಡಲಿ ; ನಮ್ಮಿಬ್ಬರನ್ನೂ ಜೊತೆಯಲ್ಲಿ ಪೋಷಿಸಲಿ ; ನಾವಿಬ್ಬರೂ ಜೊತೆಯಲ್ಲಿ ಸಾಧನೆ ಮಾಡುವಂತಾ ಗಲಿ ; ನಮ್ಮಿಬ್ಬರ ಅಧ್ಯಯನವು ತೇಜಸ್ವಿಯಾಗಿರಲಿ ; ನಾವು ಪರಸ್ಪರ ದ್ವೇಷಿಸದೆ ಇರುವಂತಾಗಲಿ ;" ಇದು ಎಂತಹ ಉದಾರವಾದ ಭಾವನೆ. ಅಜ್ಞಾನದಿಂದ ಪಾರುಮಾಡಿದ ಗುರುವನ್ನು ಶಿಷ್ಯನು ನೀನೇ ಬ್ರಹ್ಮ ; ನೀನೇ ವಿಷ್ಣು ; ನೀನೇ ಮಹೇಶ್ವರ ;" ಎಂದುಸ್ತುತಿಸುತ್ತಿದ್ದನು, ಬ್ರಹ್ಮವಿದ್ಯೆಯನ್ನಿತ್ತ ಗುರುವಿನ ಋಣವನ್ನು ಯಾರೂ ತೀರಿಸಲಾರರು ಎಂದು ಅರಿತಿದ್ದ ಶಿಷ್ಯನು ತನ್ನ ಬಾಳೆಲ್ಲ ಗುರುವಿನ ಆಶೀರ್ವಾದದ ಫಲ ಎಂದು ಭಾವಿಸುತ್ತಿದ್ದನು.

ನನ್ನ ಈ ಆಧ್ಯಾತ್ಮ ಸೇವೆಗಾಗಿ ನಾನಾ ರೀತಿಯಲ್ಲಿ ಸಹಾಯ ಸೌಲಭ್ಯ ಗಳು ದೊರೆತು ಈ ಗ್ರಂಥವನ್ನು ಪ್ರಚುರಪಡಿಸಲು ಸಾಧ್ಯವಾಯಿತು. ಅವು ಗಳನ್ನು ಸ್ಮರಿಸಿಕೊಳ್ಳುವುದು ನನ್ನ ಪ್ರಥಮ ಕರ್ತವ್ಯವಾಗಿರುತ್ತೆ.

ವಯೋವೃದ್ಧನಾದ ನನಗೆ ಕಿವಿಕೇಳಿಸುತ್ತಿರಲಿಲ್ಲವಾಗಿ ಕರ್ಣಾಟಕ ಸರ್ಕಾರ ದವರು ನನಗೆ ಮಾಸಿಕ ವೃದ್ಧಾಪ್ಯವೇತನವನ್ನು ದಯಪಾಲಿಸಿದ್ದಾರೆ ; ಕಿವಿಗೆ ಕೇಳುವ ಯಂತ್ರವನ್ನೂ ಕಣ್ಣಿಗೆ ಸುಲೋಚನವನ್ನೂ ವದಗಿಸಿದ್ದಾರೆ : ಉಪನಿಷ ತ್ತುಗಳಿಗೆ ಬೇಕಾಗುವ ಕಾಗದವನ್ನು ರಿಯಾಯ್ತಿ ಬೆಲೆಯಲ್ಲಿವದಗಿಸಿದ್ದಾರೆ. ಅಚ್ಚಾದ ಪುಸ್ತಕಗಳನ್ನು ಮುಜರಾಯಿ ಇಲಾಖೆಯವರೂ, ಗ್ರಂಥಾಲಯ ಇಲಾಖೆಯವರೂ, ವಿದ್ಯಾಭ್ಯಾಸ ಇಲಾಖೆಯವರೂ ವಟ್ಟಾರೆಯಾಗಿ ಪುಸ್ತಕಗ ಳನ್ನು ಕೊಂಡಿದ್ದಾರೆ ; ಸಾಹಿತ್ಯಪರಿಷತ್ತು ನನ್ನನ್ನು ಹಿರಿಯ ಸಾಹಿತಿ ಎಂದು ಪರಿಗಣಿಸಿ ಸನ್ಮಾನಿಸಿದ್ದಾರೆ. ಕೆಲವು ಮಹನೀಯರು ಕೆಳಗೆಕಂಡಂತೆ ದ್ರವ್ಯ ಸಹಾಯವನ್ನೂ ಮಾಡಿರುತ್ತಾರೆ. ಇಷ್ಟಾಗಿ ಖಾಸಗಿಯಾಗಿ ಯಾರೂ ಹಣ ಕೊಟ್ಟು ಉಪನಿಷತ್ತುಗಳನ್ನು ಕೊಳ್ಳುತ್ತಿಲ್ಲ. ಅನೇಕ ಪುಸ್ತಕಗಳನ್ನು ಪುಕ್ಕಟೆ ಯಾಗಿ ಕೊಡಬೇಕಾಗಿಬಂದಿದ್ದು ಈ ಹವ್ಯಾಸದಿಂದ ನನಗೆ ಸಾಕಾದಷ್ಟು ಆರ್ಥಿಕ ನೆರವುದೊರಕದೆ ಪುಸ್ತಕಗಳನ್ನು ಹೊರತರುವುದು ಬಹಳ ಕಷ್ಟಕರವಾಗಿಯೂ ನಿಧಾನವಾಗಿಯೂ ಆಗುತ್ತಿದೆ. ಕೊನೆಗೆ ಈ ಪುಸ್ತಕಗಳನ್ನು ಪ್ರಕಾಶ ಪಡಿಸಿ ಮಾರಾಟಕ್ಕೆ ಸಹಕರಿಸಲು ಯಾರೂ ಮುಂದು ಬರದೆ ಇರುವುದರಿಂದ ಉಪನಿಷ ತ್ತುಗಳ ಮೇಲೆ ನಾನು ಇನ್ನೂ ಬರದಿರುವ ಪುಸ್ತಕಗಳನ್ನು ಅಚ್ಚಿಗೆ ಕೊಡಲು ಸಂಕೋಚಿಸುತ್ತಿದ್ದೇನೆ. ಭಗವಂತನು ತೋರಿಸಬೇಕಾಗುವ ಮಾರ್ಗದ ನಿರೀ ಕ್ಷಣೆಯಲ್ಲಿದ್ದೇನೆ.

ಚತುರುಪನಿಷತ್ತುನ್ನು ಅಚ್ಚುಮಾಡಿ ಪ್ರಚುರಪಡಿಸುತ್ತಿರುವ ಬಾಪ್ಕೋ ಪ್ರಕಾಶನ ಇವರಿಗೆ ನನ್ನ ವಂದನೆಗಳು. ಮೊದಲು ಸಲ್ಲ ಬೇಕಾಗಿದೆ. ನನ್ನ ದೊಡ್ಡ ಜವಾಬ್ದಾರಿಯಿಂದ ನನ್ನನ್ನು ನಿವೃತ್ತಿಗೊಳಿಸಿ ಇನ್ನೂ ಹೆಚ್ಚಿನ ಉತ್ತೇ ಜನದಿಂದ ಬೇರೆ ಬೇರೆ ಉಪನಿಷತ್ತುಗಳನ್ನು ಬರೆಯಲು ಅನುಕೂಲಮಾಡಿ ಕೊಟ್ಟಿರುತ್ತಾರೆ. ನಾನು ಬರೆದಂತೆಲ್ಲ ಇದನ್ನು ಪ್ರಕಾಶನ ಪಡಿಸಲೂ ಒಪ್ಪಿ ಕೊಂಡಿರುವುದು ನನ್ನ ಭಾಗ್ಯ.

ಈ ಆಧ್ಯಾತ್ಮ ಸೇವೆಗಾಗಿ ಈ ಕೆಳಗೆ ಕಂಡಂತೆ ದ್ರವ್ಯಸಹಾಯ ಮಾಡಿರು

ವವರನ್ನು ಸ್ಮರಿಸಿಕೊಂಡು ಅವರಿಗೆಲ್ಲಾ ಬ್ರಹ್ಮಜ್ಞಾನವು ಸಿದ್ಧಿಸಲಿ ಎಂದು ಹಾರೈಸುತ್ತೇನೆ.

(1) ಎಂ. ಆರ್. ಸಿ. ನಾಗರಾಜರ್ ರೂ. 500 (2) ವಿರೇಂದ್ರ ಹೆಗ್ಗಡೆಯವರು ರೂ. 250 (3) ಬಿ. ಡಿ. ಜತ್ತಿಯವರು, ಲಕ್ಷ್ಮಿಮೂರ್ತಿಯವರು, ಬಾಲಸುಬ್ರಮಣ್ಯಂ, ಬಿ. ಎ. ಲಕ್ಷ್ಮಿನಾರಾಯಣಸ್ವಾಮಿಯವರು ತಲಾ ಒಂದು ನೂರು ರೂಪಾಯಿಗಳು. (4) ಎನ್. ಆರ್. ಸುಬ್ರಹ್ಮಣ್ಯ, ಎಂ. ಎ. ಚೌಡಪ್ಪ ಇವರು ತಲಾ ಐವತ್ತು ರೂಪಾಯಿಗಳನ್ನು (5) ಪೇಜಾವರಸ್ವಾಮಿಗಳು, ಬಿ. ಕೆ. ಪಾಂಡುರಂಗ, ದೆಹಲಿಯ ಮೂರ್ತಿಯವರು ತಲಾ ಇಪ್ಪತ್ತೈದು ರೂಪಾಯಿಗಳು.

ದೂರವಾಣಿನಗರದ ವಿದ್ಯಾಮಂದಿರದಲ್ಲಿ ಅಧ್ಯಾಪಕರಾಗಿರುವ ಶ್ರೀ ಎನ್. ವಿ. ಅನಂತರಾಮಯ್ಯನವರು ತ್ರಿಭಾಷಾ ಪಂಡಿತರು. ತಮ್ಮ ಮನೆಯಲ್ಲಿ ಶೃಂಗೇರಿಯ ಸುರಸರಸ್ವತಿ ಸಭೆಯ ಆಶ್ರಯದಲ್ಲಿ ಸಂಸ್ಕೃತ ಶಾಲೆಯನ್ನಿಟ್ಟುಕೊಂಡು ಪತ್ನೀ ಸಮೇತರಾಗಿ ಪಾಠಗಳನ್ನು ಹೇಳಿಕೊಡುತ್ತ ನೂರಾರು ವಿದ್ಯಾರ್ಥಿಗಳನ್ನು ಸಂಸ್ಕೃತ ಜ್ಞಾನಿಗಳಾಗಿ ಮಾಡುತ್ತಿದ್ದಾರೆ. ನನಗೆ ನನ್ನ ಉಪನಿಷತ್ತಿನ ಅನುವಾದ ಕಾರ್ಯದಲ್ಲಿ ತುಂಬಾ ಸಹಾಯ ಮಾಡುತ್ತಿದ್ದಾರೆ. ನಾನು ರಾಮಮೂರ್ತಿ ನಗರದಲ್ಲಿ ವಾಸಿಸಲು ಬಂದಾಗ ಅವರ ಮನೆಯನ್ನೇ ಬಿಟ್ಟುಕೊಟ್ಟು ನನಗೆ ಪರಮ ಮಿತ್ರರಾಗಿದ್ದಾರೆ. ಅವರಿಗೆ ಕೃತಜ್ಞತೆಗಳನ್ನರ್ಪಿಸಿ ಬ್ರಹ್ಮಜ್ಞಾನವು ಸಿದ್ಧಿಸಲು ಹಾರೈಸುತ್ತೇನೆ.

ವಿಶ್ವಾಸಿ

**ಎಂ. ಸಿ. ರಾಮರಾವ್**



ಓಂ ಸಹನಾವವತು । ಸಹನೌಭುನಕ್ತು । ಸಹವೀರ್ಯಂಕರವಾವಹೈ
ತೇಜಸ್ವಿನಾವಧೀತಮಸ್ತು । ಮಾವಿದ್ವಿಷಾವಹೈ ।
ಓಂ ಶಾಂತಿಃ ಶಾಂತಿಃ ಶಾಂತಿಃ ॥

# ಶ್ವೇತಾಶ್ವತರೋಪನಿಷತ್

ಓಂ ಬ್ರಹ್ಮವಾದಿನೋವದನ್ತಿ :–

ಕಿಂ ಕಾರಣಂ ? ಬ್ರಹ್ಮಕುತಃ ? ಸ್ಮಜಾತಾಜೀವಾಮಃ ?
ಕೇನ ಕ್ವಚ ಸಂಪ್ರತಿಷ್ಠಾ ।
ಅಧಿಷ್ಠಿತಾಃ ಕೇನಸುಖೇತರೇಷು ವರ್ತಾಮಹೇ
ಬ್ರಹ್ಮವಿದೋ ವ್ಯವಸ್ಥಾಂ ॥೧॥

ಬ್ರಹ್ಮವಾದಿಗಳು ಹೇಳುತ್ತಾರೆ :—ಏನು ಕಾರಣ ? ಅದು ಬ್ರಹ್ಮನೇ ? ನಾವು ಹೇಗೆ ಜನಿಸಿದೆವು ? ಯಾವುದರಿಂದ ಜೀವಿಸುತ್ತಿದ್ದೇವೆ ? ನಾವು ಯಾವುದರ ಮೇಲೆ ಪ್ರತಿಷ್ಠಾಪಿತರಾಗಿದ್ದೇವೆ ? ಓ ಬ್ರಂಹಜ್ಞಾನಿಗಳೇ ಯಾರ ನೇತೃತ್ವದಲ್ಲಿ ನಾವು ಸುಖ ದುಃಖಗಳೆರಡನ್ನೂ ಅನುಭವಿಸುತ್ತ ಜೀವಿಸಿರುತ್ತೇವೆಂಬುದನ್ನು ತಿಳಿಸಿರಿ.

ಕಾಲಃ ಸ್ವಭಾವೋ ನಿಯತಿರ್ಯದೃಚ್ಛಾಂ ಭೂತಾನಿಯೋನಿಃ
ಪುರುಷ ಇತಿ ಚಿಂತ್ಯಂ ।
ಸಂಯೋಗ ಏಷಾಂ ನತ್ವಾತ್ಮಭಾವಾದಾತ್ಮಾ
ಪ್ಯನೀಶಃ ಸುಖ ದುಃಖಹೇತೋಃ ॥೨॥

ಕಾಲ, ಸ್ವಭಾವ, ಪ್ರಕೃತಿ, ಅವಶ್ಯಕತೆ, ಸಮಯ, ಭೂತಗಳು, ಯೋನಿ ಅಥವಾ ಪುರುಷ ಇವುಗಳಲ್ಲಿ ಯಾವುದನ್ನು ಕಾರಣವೆಂದು ಅರಿಯಬೇಕು ? ಆತ್ಮನ ಇರುವಿಕೆ ಇಂದ ಇವುಗಳೆಲ್ಲವುಗಳ ಸಂಯೋಜನೆ ಎಂದು ಹೇಳಲಾಗದು. ಆತ್ಮನೂ ಕೂಡ ಸುಖ ದುಃಖಗಳಿಗೆ ಕಾರಣವಾಗಲಾರ.

ತೇ ಧ್ಯಾನಯೋಗಾನುಗತಾ ಅಪಶ್ಯನ್ ದೇವಾತ್ಮಶಕ್ತಿಂ ಸ್ವಗುಣೈರ್ನಗೂಢಾಂ |
ಯಃ ಕಾರಣಾನಿ ನಿಖಿಲಾನಿ ತಾನಿ ಕಲಾತ್ಮಯುಕ್ತಾನ್ಯಧಿ ತಿಷ್ಠಂತ್ಯೇಕಃ ||೩||

ನಿರಂತರವಾದ ಧ್ಯಾನ ಮತ್ತು ಯೋಗಾಭ್ಯಾಸ ಮಾಡಿದವರು ತನ್ನದೇ ಗುಣಗಳಿಂದ ಮರೆಮಾಡಲ್ಪಟ್ಟಿರುವ ದೈವಿಕವಾದ ಆತ್ಮಶಕ್ತಿಯನ್ನು ಕಂಡಿರುತ್ತಾರೆ. ಅವನೇ ಕಾಲನಿಂದ ಆತ್ಮದವರೆಗಿನ ಎಲ್ಲಾ ಕಾರಣಗಳ ಮೇಲೆ ಅಧಿಕಾರವುಳ್ಳವನು.

ತಮೇಕನೇಮಿಂ ತ್ರಿವೃತಂ ಷೋಡಶಾನ್ತಂ ಶತರ್ಧಾರಂ ವಿಂಶತಿ ಪ್ರತ್ಯರಾಭಿಃ |
ಅಷ್ಟಕೈಃ ಷಡ್ಭಿರ್ವಿಶ್ವರೂಪೈಕ ಪಾಶತ್ರಿಮಾರ್ಗಭೇದಂ
ದ್ವಿ ನಿಮಿತ್ತೈಕಮೋಹಂ ||೪||

ಒಂದೇ ಕುಂಭವುಳ್ಳ, ಮೂರು ಪಟ್ಟಿಗಳುಳ್ಳ, ಹದಿನಾರು ಅಂಕಗಳುಳ್ಳ, ಐವತ್ತು ಆರೇಕಾಲುಗಳುಳ್ಳ, ಇಪ್ಪತ್ತು ಪ್ರತಿ ಆರೇಕಾಲುಗಳುಳ್ಳ, ಆರು ಅಷ್ಟಕಗಳುಳ್ಳ ವಿಶ್ವ ರೂಪವಾದ, ಒಂದೇ ಪಾಶವುಳ್ಳ, ಮೂರು ಭಿನ್ನಮಾರ್ಗಗಳಲ್ಲಿ ಹೋಗುತ್ತಿರುವ. ಎರಡಕ್ಕೆ ನಿಮಿತ್ತವಾಗಿರುವ ಒಂದೇ ಚಕ್ರದಂತಿರುವ ಅವನನ್ನು ಧ್ಯಾನಿಸುತ್ತೇನೆ.

ಪಂಚ ಸ್ರೋತೋಂಬುಂ ಪಂಚಯೋನ್ಯುಗ್ರವಕ್ರಾಂ
ಪಂಚಪ್ರಾಣೋರ್ಮಿಂ ಪಂಚ ಬುದ್ಧ್ಯಾದಿಮೂಲಾಂ |
ಪಂಚವರ್ತಾಂ ಪಂಚ ದುಃಖೌಗವೇಗಾಂ ಪಂಚಾಶದ್ಭೇದಾಂ
ಪಂಚಪರ್ವಾ ಮಧೀಮಃ ||೫||

ಸರ್ವಾತ್ಮಕನಾದ ಬ್ರಹ್ಮನಿಗೆ ಐದು ಹೊಳೆಗಳೇ (ಪಂಚೇಂದ್ರಿಯಗಳು) ನೀರು, ಇದು ಪಂಚಭೂತಗಳಿಂದ ಉಗ್ರವೂ ವಕ್ರವೂ ಆಗಿದೆ. ಐದು ಪ್ರಾಣಗಳೇ (ಕರ್ಮೇಂದ್ರಿಯಗಳು) ಇದರ ಅಲೆಗಳು. ಇದು ಐದು ಜ್ಞಾನಗಳಿಗೆ ಕಾರಣವಾದ ಮನಸ್ಸನ್ನೇ ಮೂಲವಾಗಿ ಉಳ್ಳದ್ದು. ಇದಕ್ಕೆ ಐದು ಸುಳಿಗಳಿವೆ. ಐದು ದುಃಖ ಗಳೇ ಇದರ ಪ್ರವಾಹಗಳು. ಇದಕ್ಕೆ ಐವತ್ತು ಭೇದಗಳೂ ಐದು ಪರ್ವಗಳೂ ಇವೆ.

ಸರ್ವಾಜೀವೇ ಸರ್ವಸಂಸ್ಥೇ ಬೃಹಂತೇ ಅಸ್ಮಿನ್ ಹಂಸೋ
ಭ್ರಾಮ್ಯತೇ ಬ್ರಹ್ಮಚಕ್ರೇ |
ಪೃಥಗಾತ್ಮಾನಂ ಪ್ರೇರಿತಾರಂ ಚಮತ್ವಾ ಜುಷ್ಟಸ್ತುತಸ್ತೇ ನಾ
ಮೃತತ್ವಮೇತಿ ||೬||

ಯಾವುದರಲ್ಲಿ ಸರ್ವಪ್ರಾಣಿಗಳೂ ಜೀವಿಸುತ್ತವೆಯೋ ಮತ್ತು ಲಯವಾಗು

ತ್ರವೆಯೋ ಆ ಬೃಹತ್ತಾದ ಬ್ರಹ್ಮಚಕ್ರದಲ್ಲಿ ಜೀವನು ತಾನು ಬೇರೆ, ಈಶ್ವರನು ಬೇರೆ ಎಂದು ತಿಳಿದುಕೊಂಡು ಸುತ್ತುತ್ತಿರುತ್ತಾನೆ. ಯಾವಾಗ ಅವನು ಈಶ್ವರನಿಂದ ಅನುಗ್ರಹಿಸಲ್ಪಡುವನೋ ಆಗ ಅಮೃತತ್ವವನ್ನು ಹೊಂದುತ್ತಾನೆ.

ಉದ್ಗೀಥಮೇ ತತ್ಪರಮಂ ತು ಬ್ರಹ್ಮ ತಸ್ಮಿಂ ಸ್ತ್ರಯಂ ಸುಪ್ರತಿಷ್ಠಾಽಕ್ಷರಂಚ |
ಅತ್ರಾಂತರಂ ಬ್ರಹ್ಮವಿದೋವಿದಿತ್ವಾ ಲೀನಾಬ್ರಹ್ಮಣಿ ತತ್ಪರಾಯೋನಿ
ಮುಕ್ತಾಃ ||೭||

ಆದರೆ ಈ ಪರಬ್ರಹ್ಮವು ಪ್ರಪಂಚಕ್ಕಿಂತ ಬೇರೆಯಾಗಿ ಉಪದೇಶಿಸಲ್ಪಟ್ಟಿದೆ. ಇದರಲ್ಲಿ ಮೂರು ಪ್ರತಿಷ್ಠಿತವಾಗಿದೆ. ಇದು ಸುಪ್ರತಿಷ್ಠೆ ಮತ್ತು ಅಕ್ಷರ. ಬ್ರಹ್ಮ ಜ್ಞಾನಿಗಳು ಇದರ ಒಳಗುಟ್ಟನ್ನು ಅರಿತುಕೊಂಡು, ತತ್ಪರರಾಗಿ, ಬ್ರಹ್ಮನಲ್ಲಿ ಲೀನರಾಗಿ ಜನ್ಮಾದಿಗಳಿಂದ ಬಿಡುಗಡೆಯನ್ನು ಹೊಂದುತ್ತಾರೆ.

ಸಂಯುಕ್ತಮೇತತ್ ಕ್ಷರ ಮಕ್ಷರಂಚ ವ್ಯಕ್ತಾವ್ಯಕ್ತಂ ಭರತೇ ವಿಶ್ವಮೀಶಃ |
ಅನೀಶಶ್ಚಾತ್ಮಾ ಬಧ್ಯತೇ ಭೋಕ್ತೃಭಾವಾ ಜ್ಞಾತ್ವಾದೇವಂ ಮುಚ್ಯತೇ
ಸರ್ವಪಾಶೈಃ ||೮||

ಪರಸ್ಪರವಾಗಿ ಸೇರಿಕೊಂಡಿರುವ ಕ್ಷರವೂ, ಅಕ್ಷರವೂ, ವ್ಯಕ್ತವೂ, ಅವ್ಯಕ್ತವೂ ಆದ ಈ ಜಗತ್ತನ್ನು ಈಶ್ವರನು ಧರಿಸುತ್ತಾನೆ. ಅಸ್ವತಂತ್ರನಾದ ಜೀವನು ತಾನು ಭೋಕ್ತೃ ಎಂಬ ಭಾವನೆಇಂದ ಸಂಸಾರದಲ್ಲಿ ಬಂಧಿಸಲ್ಪಡುತ್ತಾನೆ. ಆದರೆ ದೇವರನ್ನು ಅರಿತುಕೊಂಡಾಗ ಸರ್ವಪಾಶಗಳಿಂದಲೂ ಮುಕ್ತನಾಗುತ್ತಾನೆ.

ಜ್ಞಾ ಜ್ಞೌ ದ್ವಾವಜಾ ವೀಶನೀಶಾ ವಜಾಹ್ಯೇಕಾ ಭೋಕ್ತೃ
ಭೋಗ್ಯಾರ್ಥಯುಕ್ತಾ |
ಅನಂತಶ್ಚಾತ್ಮಾ ವಿಶ್ವರೂಪೋ ಹ್ಯ ಕರ್ತಾ ತ್ರಯಂಯದಾ ವಿಂದತೇ
ಬ್ರಹ್ಮಮೇತತ್ ||೯||

ಸರ್ವಜ್ಞನೂ, ಸಮರ್ಥನೂ ಆದ ಈಶ್ವರನೂ; ಅಸಮರ್ಥನೂ, ಅಜ್ಞಾನಿಯೂ ಆದ ಜೀವನೂ; ಜನ್ಮರಹಿತರು. ಭೋಕ್ತೃವಾದ ಜೀವನಿಗೆ ಭೋಗ್ಯವನ್ನುಂಟು ಮಾಡಲು ನಿಯುಕ್ತವಾಗಿರುವ ಪ್ರಕೃತಿಯೂ ಜನ್ಮರಹಿತವೇ. ವಿಶ್ವರೂಪನಾದ ಆತ್ಮನು ಅನಂತನೂ, ಅಕರ್ತೃವೂ, ಆಗಿರುತ್ತಾನೆ. ಯಾವಾಗ ಈ ಮೂರನ್ನೂ ಬ್ರಹ್ಮರೂಪವೆಂದು ಅರಿಯುತ್ತಾನೆಯೋ ಆಗ ಕೃತಕೃತ್ಯನಾಗುತ್ತಾನೆ.

ಕ್ಷರಂ ಪ್ರಧಾನ ಮಮೃತಾಕ್ಷರಂ ಹರಃ ಕ್ಷರಾತ್ಮಾನಾ ವೀಶತೇ ದೇವ ಏಕಃ |
ತಸ್ಯಾಭಿ ಧ್ಯಾನಾ ದ್ಯೋಜನಾ ತ್ತತ್ತ್ವಭಾವಾ ದ್ಭೂಯಶ್ಚಾನ್ತೇ ವಿಶ್ವಮಾಯಾ
ನಿವೃತ್ತಿಃ ||೧೦||

ಪ್ರಧಾನವು ವಿನಾಶ ಸ್ವಭಾವವುಳ್ಳದ್ದು. ಪರಮೇಶ್ವರನಾದರೋ ಅಮೃತನು ಮತ್ತು ಅವಿನಾಶಿಯು. ಅದ್ವಿತೀಯನಾದ ಪರಮೇಶ್ವರನು ಪ್ರಧಾನವನ್ನೂ, ಜೀವರನ್ನೂ ನಿಯಮಿಸುತ್ತಾನೆ. ಪದೇಪದೇ ಪರಮಾತ್ಮನನ್ನು ಧ್ಯಾನಿಸುವುದ ರಿಂದಲೂ, ಅವನನ್ನು ಸೇವಿಸುವುದರಿಂದಲೂ, ಅವನ ತತ್ವವನ್ನು ಅರಿಯುವುದ ರಿಂದಲೂ ಕೊನೆಗೆ ಪ್ರಪಂಚ ರೂಪವಾದ ಮಾಯೆಯು ತೊಲಗುತ್ತದೆ.

ಜ್ಞಾತ್ವಾ ದೇವಂ ಸರ್ವ ಪಾಶಾಪಹಾನಿಃ ಕ್ಷೀಣೈಃ ಕ್ಲೇಶೈಃ ಜನ್ಮಮೃತ್ಯು
ಪ್ರಹಾಣಿಃ |
ತಸ್ಯಾಭಿಧ್ಯಾನಾತ್ ತೃತೀಯಂ ದೇಹ ಭೇದೇ ವಿಶ್ವೈಶ್ವರ್ಯಂ ಕೇವಲ
ಆಪ್ತಕಾಮಃ ||೧೧||

ಪರಮೇಶ್ವರನನ್ನು ಅರಿತುಕೊಂಡಾಗ ಸರ್ವಪಾಶಗಳೂ ಹರಿದುಹೋಗುತ್ತವೆ. ಅವಿದ್ಯಾದಿ ಕ್ಲೇಶಗಳು ಕ್ಷೀಣವಾಗುವುದರ ಮೂಲಕ ಜನನ-ಮರಣಗಳು ನಾಶ ವುಂಟಾಗುತ್ತವೆ. ಅವನ ಅಭಿಧ್ಯಾನದಿಂದ ಸರ್ವೈಶ್ವರ್ಯ ಲಕ್ಷಣವುಳ್ಳ ಮೂರನೆಯ ಅವಸ್ಥೆಯನ್ನು ಮರಣಾಂತದಲ್ಲಿ ಹೊಂದಿ ಆನಂತರ ಕೇವಲನೂ ಆಪ್ತಕಾಮನೂ ಆಗುತ್ತಾನೆ.

ಏತಜ್ಞೇಯಂ ನಿತ್ಯಮೇ ವಾತ್ಮ ಸಂಸ್ಥಂ ನಾತಃಪರಂ ವೇದಿತ
ವ್ಯಂ ಹಿ ಕಿಂಚಿತ್ |
ಭೋಕ್ತಾಭೋಗ್ಯಂ ಪ್ರೇರಿತಾರಂಚ ಮತ್ವಾಸರ್ವಂಪ್ರೋಕ್ತಂ ತ್ರಿವಿಧಂ
ಬ್ರಹ್ಮಮೇತತ್ ||೧೨||

ನಿತ್ಯವೂ ತನ್ನ ಆತ್ಮನಲ್ಲಿಯೇ ಇರುವ ಈ ಬ್ರಹ್ಮನನ್ನು ಅರಿತುಕೊಳ್ಳಬೇಕು. ಏಕೆಂದರೆ ಇದಕ್ಕಿಂತ ವಿಶೇಷವಾಗಿ ತಿಳಿಯಲ್ಪಡಬೇಕಾದ ಯಾವ ವಸ್ತುವೂ ಇಲ್ಲ. ಭೋಕ್ತೃಭೋಗ್ಯ ಮತ್ತು ಇವಕ್ಕೆ ಪ್ರೇರಕನಾದ ಈಶ್ವರ ಇವರನ್ನು ಅರಿತು ಕೊಂಡಾಗ ಎಲ್ಲವೂ ಹೇಳಲ್ಪಟ್ಟಂತೆಯೇ, ಇದೇ ತ್ರಿವಿಧವಾದ ಬ್ರಹ್ಮ.

ವಹ್ನೇರ್ಯಥಾ ಯೋನಿಗತಸ್ಯಮೂರ್ತಿ ರ್ನದೃಶ್ಯತೇನೈ ವ ಚ ಲಿಂಗನಾಶಃ |

ಸಭೂಯ ಏವೇಂಧನ ಯೋನಿ ಗೃಹ್ಯಸ್ತ್ತದ್ವೋಭಯಂ ವೈ ಪ್ರಣವೇ
ನದೇಹೇ ||೧೩||

ಹೇಗೆ ಅಧರಾರಣಿಯನ್ನು ಹೊಕ್ಕಿರುವ ಅಗ್ನಿಯು ಮೊದಲು ಕಾಣಿಸುವುದಿಲ್ಲವೋ ; ಆದರೂ ಅದರ ಸೂಕ್ಷ್ಮ ರೂಪವು ನಾಶವಾಗುವುದಿಲ್ಲ. ಏಕೆಂದರೆ ಉತ್ತರಾರಣಿ ಇಂದ ಮಥಿಸಿದಾಗ ಅಗ್ನಿಯು ವ್ಯಕ್ತವಾಗುತ್ತದೆ. ಇವೆರಡರಂತೆ ಓಂಕಾರದಿಂದ ದೇಹದಲ್ಲಿಯೇ ಆತ್ಮನು ಗ್ರಹಿಸಲ್ಪಡುತ್ತಾನೆ.

ಸ್ವದೇಹ ಮರಣಿಂಕೃತ್ವಾ ಪ್ರಣವಂಚೋತ್ತರಾರಣಿಂ |
ಧ್ಯಾನ ನಿರ್ಮಥನಾಭ್ಯಾಸಾದ್ದೇವಂ ಪಶ್ಯೇನ್ನಿಗೂಢವತ್ ||೧೪||

ತನ್ನ ದೇಹವನ್ನು ಅಧರಾರಣಿಯನ್ನಾಗಿಯೂ ಮತ್ತು ಓಂಕಾರವನ್ನು ಉತ್ತರಾರಣಿ ಯನ್ನಾಗಿಯೂ ಮಾಡಿಕೊಂಡು ಧ್ಯಾನವೆಂಬ ಮಂಥನದ ಮೂಲಕ ಗೂಢವಾದ ಮತ್ತು ಅಗ್ನಿಯಂತೆ ಜ್ಯೋತೀ ರೂಪನಾದ ಪರಮೇಶ್ವರನನ್ನು ಸಾಕ್ಷಾತ್ಕರಿಸಿಕೊಳ್ಳ ಬೇಕು.

ತಿಲೇಷು ತೈಲಂ ದಧನೀವ ಸರ್ಪಿ ರಾಪಃ ಸ್ರೋತಸ್ಸ್ವರಣೀಷು ಚಾಗ್ನಿಃ |
ಏವಮಾತ್ಮಾಽಽ ತ್ಮನಿಗೃಹ್ಯತೇಽ ಸೌ ಸತ್ಯೇನ್ಯೈನಂ ತಪಸಾಯೋಽನು
ಪಶ್ಯತಿ ||೧೫||

ಯಾವ ರೀತಿ ಎಳ್ಳಿನಲ್ಲಿ ಎಣ್ಣೆ ಇರುತ್ತದೆಯೋ, ಮೊಸರಿನಲ್ಲಿ ತುಪ್ಪವಿರು ತ್ತದೆಯೋ, ನದೀ ತಳಗಳಲ್ಲಿ ನೀರಿರುತ್ತವೆಯೋ, ಆರಣಿಗಳಲ್ಲಿ ಅಗ್ನಿ ಇರು ತ್ತವೆಯೋ ಹಾಗಿರುವ ಇವನನ್ನು ಸತ್ಯದಿಂದಲೂ, ತಪಸ್ಸಿನಿಂದಲೂ, ಪುನಃ ಪುನಃ ನೋಡಿ ಅವನಿಂದ ಈ ಆತ್ಮನು ತನ್ನಲ್ಲಿಯೇ ಗ್ರಹಿಸಲ್ಪಡುತ್ತಾನೆ.

ಸರ್ವವ್ಯಾಪಿ ನಮಾತ್ಮಾನಂ ಕ್ಷೀರೇಸರ್ಪಿರಿ ವಾರ್ಪಿತಂ |
ಆತ್ಮವಿದ್ಯಂ ತಪೋಮೂಲಂ ತದ್ಬ್ರಹ್ಮೋಪನಿಷತ್ಪರಂ
ತದ್ಬ್ರಹ್ಮೋಪನಿಷತ್ಪರಂ ||೧೬||

ಸರ್ವವ್ಯಾಪಿಯಾದ, ಹಾಲಿನಲ್ಲಿ ತುಪ್ಪದಂತಿರುವ, ಆತ್ಮವಿದ್ಯೆ ಮತ್ತು ತಪಸ್ಸುಗಳಿಗೆ ಕಾರಣನಾದ ಆತ್ಮನನ್ನು ನೋಡುತ್ತಾನೆ. ಈ ಆತ್ಮನೇ ಪರಮ ಶ್ರೇಯಸ್ಸಿಗೆ ಆಶ್ರಯನಾದ ಬ್ರಹ್ಮ ; ಈ ಆತ್ಮನೇ ಪರಮ ಶ್ರೇಯಸ್ಸಿಗೆ ಆಶ್ರಯನಾದ ಬ್ರಹ್ಮ.

## ಎರಡನೆಯ ಅಧ್ಯಾಯ

ಯುಂಜಾನಃ ಪ್ರಥಮಂ ಮನಸ್ತತ್ತ್ವಾಯ ಸವಿತಾಧಿಯಃ ।
ಅಗ್ನೇರ್ಜ್ಯೋತಿ ರ್ನಿಚಾಯ್ಯ ಪೃಥಿವ್ಯಾಅದ್ಯಾಭರತ್ ॥೧॥

ಸವಿತೃವು ಧ್ಯಾನಾರಂಭದಲ್ಲಿ ಮನಸ್ಸನ್ನೂ, ಪ್ರಾಣಗಳನ್ನೂ, ತತ್ತ್ವಜ್ಞಾನಕ್ಕೋಸ್ಕರ ನಿಯೋಜಿಸಿ, ಅಗ್ನಿಯ ಪ್ರಕಾಶವನ್ನು ಕಂಡುಕೊಂಡು ಅದನ್ನು ಮೇಲಕ್ಕೆ ತಂದನು.

ಯುಕ್ತೇನ ಮನಸಾವಯಂ ದೇವಸ್ಯ ಸವಿತುಃ ।
ಸವೇ ಸುವರ್ಗೇಯಾಯಶಕ್ತ್ಯಾ ॥೨॥

ಸವಿತೃದೇವನ ಅನುಜ್ಞೆ ಇರಲಾಗಿ ನಾವು ಯುಕ್ತವಾದ ಮನಸ್ಸಿನದ್ವಾರಾ ಸ್ವರ್ಗ ಪ್ರಾಪ್ತಿಗೆ ಕಾರಣವಾದ ಧ್ಯಾನದಲ್ಲಿ ಯಥಾಶಕ್ತಿ ಪ್ರಯತ್ನಿಸೋಣ.

ಯುಕ್ತ್ವಾಯ ಮನಸಾ ದೇವಾನ್ ಸುವರ್ಯತೋಧಿಯಾದಿವಂ ।
ಬೃಹಜ್ಜ್ಯೋತಿಃ ಕರಿಷ್ಯತಃ ಸವಿತಾ ಪ್ರಸುವಾತಿತಾನ್ ॥೩॥

ಬ್ರಹ್ಮದ ಕಡೆಗೆ ಹೋಗುತ್ತಿರುವ ಜ್ಯೋತಿ ಸ್ವರೂಪವೂ ಬೃಹತ್ತೂ ಆದ ಬ್ರಹ್ಮವನ್ನು ಸಮ್ಯಗ್ದರ್ಶನದ ಮೂಲಕ ಪ್ರಕಾಶಪಡಿಸುತ್ತಿರುವ ಮನಸ್ಸನ್ನು ಮತ್ತು ಇಂದ್ರಿಯಗಳನ್ನು ಸವಿತೃದೇವನು ಯೋಜಿಸಿ ಅವುಗಳಿಗೆ ಸಾಮರ್ಥ್ಯವನ್ನು ಕೊಡಲಿ.

ಯುಂಜತೇ ಮನ ಉತಯುಂಜತೇಧಿಯೋ ವಿಪ್ರಾವಿಪ್ರಸ್ಯ ಬೃಹತೋ ವಿಪಶ್ಚಿತಃ ।
ವಿಹೋತ್ರಾದಧೇ ವಯುನಾವಿದೇಕ ಇನ್ಮಹೀದೇವಸ್ಯ ಸವಿತುಃ
ಪರಿಷ್ಟುತಿಃ ॥೪॥

ಯಾವ ವಿಪ್ರರು ತಮ್ಮ ಮನಸ್ಸನ್ನೂ, ಇಂದ್ರಿಯಗಳನ್ನೂ ಪರಮಾತ್ಮನಲ್ಲಿ ಸೇರಿಸುತ್ತಾರೋ, ಅವರು ವಿಶೇಷ ರೂಪದಿಂದ ವ್ಯಾಪಕನಾದ, ಬೃಹತ್ತಾದ ಮತ್ತು ಸರ್ವಜ್ಞನಾದ ಸವಿತೃದೇವನ ಮಹತ್ ಸ್ತುತಿಯನ್ನು ಮಾಡಬೇಕು. ಅದ್ವಿತೀಯನೂ, ಪ್ರಜ್ಞಾವಂತನೂ, ಆದ ಆ ಸವಿತೃದೇವನೇ ಯಜ್ಞಾದಿಕ್ರಿಯೆಗಳನ್ನು ವಿಧಿಸಿರುತ್ತಾನೆ.

ಯುಜೇವಾಂ ಬ್ರಹ್ಮಪೂರ್ವ್ಯಂ ನಮೋಭಿರ್ವಿಶ್ಲೋಕ ಏತುಪಥ್ಯೇವ ಸೂರೇಃ ।
ಶೃಣ್ವಂತು ವಿಶ್ವೇ ಅಮೃತಸ್ಯಪುತ್ರಾ ಆಯೇಧಾಮಾನಿ ದಿವ್ಯಾನಿತಸ್ಥುಃ ॥೫॥

ನಿಮ್ಮಿಬ್ಬರ ಸಂಬಂಧವನ್ನು ಹೊಂದಿರುವ ಸನಾತನ ಬ್ರಹ್ಮನಲ್ಲಿ ನನ್ನ ಚಿತ್ತವನ್ನು ನಮಸ್ಕಾರಗಳ ಮೂಲಕ ತೃಪ್ತಿಪಡಿಸುತ್ತೇನೆ. ಹೀಗೆ ನನ್ನಿಂದ ಹೇಳಲಾಗುವ ಈ ಸ್ತೋತ್ರವು ವಿದ್ವಾಂಸರ ಕೀರ್ತಿಯಂತೆ ಹರಡಲಿ. ಯಾರು ದಿವ್ಯಧಾಮಗಳಲ್ಲಿ ಆಳುತ್ತಿರುವರೋ ಆ ಅಮೃತದ ಪುತ್ರರೆಲ್ಲರೂ ಕೇಳಲಿ.

ಅಗ್ನಿರ್ಯತ್ರಾಭಿಮಥ್ಯತೇ ವಾಯುರ್ಯತ್ರಾಧಿರುಧ್ಯತೇ ।
ಸೋಮೋ ಯತ್ರಾತಿರಿಚ್ಯತೇ ತತ್ರಸಂಜಾಯತೇಮನಃ ॥೬॥

ಎಲ್ಲಿ ಅಗ್ನಿಯು ಮಥಿಸಲ್ಪಡುವುದೋ, ಎಲ್ಲಿ ವಾಯುವು ತಡೆಯಲ್ಪಡುವುದೋ, ಎಲ್ಲಿ ಸೋಮರಸವು ತುಂಬಿ ಹರಿಯುವುದೋ ಅಲ್ಲಿ ಮನಸ್ಸು ಆಸಕ್ತವಾಗುತ್ತದೆ.

ಸವಿತ್ರಾ ಪ್ರಸವೇನ ಜುಷೇತ ಬ್ರಹ್ಮ ಪೂರ್ವ್ಯಂ ।
ತತ್ರಯೋನಿಂ ಕೃಣ ವಸೇ ನಹಿತೇ ಪೂರ್ತಮಕ್ಷಿಪತ್ ॥೭॥

ಸಸ್ತೋತ್ಪತ್ತಿಯನ್ನು ಮಾಡುವ ಸವಿತೃದೇವನ ಅನುಜ್ಞೆಯನ್ನು ಪಡೆದು ಸನಾತನ ಬ್ರಹ್ಮವನ್ನು ಸೇವಿಸಬೇಕು, ಆ ಬ್ರಹ್ಮನಲ್ಲಿ ನಿಷ್ಠೆಯನ್ನಿಡು. ಹೀಗೆ ಮಾಡಿದರೆ ನಿನ್ನ ಪೂರ್ವಕರ್ಮಗಳು ನಿನ್ನನ್ನು ಬಂಧಿಸುವುದಿಲ್ಲ.

ತ್ರಿರುನ್ನತಂ ಸ್ಥಾಪ್ಯ ಸಮಂ ಶರೀರಂ ಹೃದೀಂದ್ರಿಯಾಣಿ ಮನಸಾ ಸಂನಿವೇಶ್ಯ ।
ಬ್ರಹ್ಮೋಡುಪೇನ ಪ್ರತರೇತ ವಿದ್ವಾನ್ ಸ್ರೋತಾಂಸಿ ಸರ್ವಾಣಿ
ಭಯಾವಹಾನಿ ॥೮॥

ವಿದ್ವಾಂಸನನ್ನು ಉನ್ನತವಾದ ಮೂರು ಅಂಗಗಳಾದ ತಲೆ, ಕೊರಳು, ಎದೆ, ಇವು ಗಳನ್ನು ಸಮನಾಗಿನಿಲ್ಲಿಸಿ ಮನಸ್ಸಿನ ಮೂಲಕ ಇಂದ್ರಿಯಗಳನ್ನು ಹೃದಯದಲ್ಲಿ ಸ್ಥಾಪಿಸಿ ಭಯಾನಕವಾದ ಸಮಸ್ತ ಸಂಸಾರ ಪ್ರವಾಹಗಳನ್ನು ಬ್ರಹ್ಮವೆಂಬ ದೋಣಿಯ ಮೂಲಕ ದಾಟಬೇಕು.

ಪ್ರಾಣಾನ್ ಪ್ರಪೀಡ್ಯೇಹ ಸಂಯುಕ್ತ ಚೇಷ್ಟಃ ಕ್ಷೀಣೇಪ್ರಾಣೇ ನಾಸಿಕಯೋ
ಚ್ಛ್ವಸೀತ ।
ದುಷ್ಟಾಶ್ವಯುಕ್ತಮಿವ ವಾಹಮೇನಂ ವಿದ್ವಾನ್ ಮನೋಧಾರಯೇ ತಾ
ಪ್ರಮತ್ತಃ ॥೯॥

ವಿದ್ವಾಂಸನು ಯೋಗಮಾರ್ಗದಲ್ಲಿ ಯುಕ್ತಾಹಾರವಿಹಾರನಾಗಿ ಪ್ರಾಣಗಳನ್ನು ನಿರೋಧಿಸಿ ಪ್ರಾಣಶಕ್ತಿಯು ದುರ್ಬಲವಾದಾಗ ಪ್ರಾಣವಾಯುವನ್ನು ಮೂಗಿನ

ಮೂಲಕ ಹೊರಹಾಕಬೇಕು. ಕೆಟ್ಟಕುದುರೆಗಳನ್ನು ಕಟ್ಟಿದ ರಥವನ್ನು ಹೇಗೆ ನಿಗ್ರಹಿಸುವನೋ ಹಾಗೆ ತನ್ನ ಮನಸ್ಸನ್ನು ನಿಗ್ರಹಿಸಬೇಕು.

ಸಮೇಶುಚೌ ಶರ್ಕರಾ ವಹ್ನಿ ವಾಲುಕಾ ವಿವರ್ಜಿತೇ ಶಬ್ದ ಜಲಾಶ್ರಯಾದಿಭಿಃ ।
ಮನೋಽನುಕೂಲೇ ನತು ಚಕ್ಷು ಪೀಡನೇ ಗುಹಾನಿವಾತಾಶ್ರಯಣೇ
ಪ್ರಯೋಜಯೇತ್ ॥೧೦॥

ಹಳ್ಳತಿಟ್ಟುಗಳಿಲ್ಲದ, ಸಮನಾದ, ಶುಚಿಯಾದ, ಗೊರಜು, ಬೆಂಕಿ, ಧೂಳು, ಶಬ್ದ, ನೀರು, ಜನರವಾಸಸ್ಥಾನ ಇವುಗಳಿಲ್ಲದ, ಮನಸ್ಸಿಗೆ ಅನುಕೂಲವಾದ, ಕಣ್ಣಿಗೆ ಪೀಡೆಯನ್ನುಂಟುಮಾಡದ ಗುಹೆಯೇ ಮೊದಲಾದ ವಾಯುಪ್ರವಾಹವಿಲ್ಲದ ಸ್ಥಳದಲ್ಲಿ ಕುಳಿತು ಮನಸ್ಸನ್ನು ಪರಮಾತ್ಮನಲ್ಲಿ ನಿಯೋಜಿಸಬೇಕು.

ನೀಹಾರ ದೂಮಾರ್ಕಾನಿಲ ನಲಾನಾಂ ಖದ್ಯೋತ ವಿದ್ಯುತ್ ಸ್ಫಟಿಕ ಶಶೀನಾಂ ।
ಏತಾನಿರೂಪಾಣಿ ಪುರಸ್ಸರಾಣಿ ಬ್ರಹ್ಮಣ್ಯಭಿವ್ಯಕ್ತಿ ಕರಾಣಿಯೋಗೇ ॥೧೧॥

ಯೋಗಾಭ್ಯಾಸದ ಕಾಲದಲ್ಲಿ ಹಿಮ, ಹೊಗೆ, ಸೂರ್ಯ, ಗಾಳಿ, ಬೆಂಕಿ, ಮಿಂಚುಹುಳು, ಸ್ಫಟಿಕ, ಚಂದ್ರ, ಇವುಗಳ ರೂಪಗಳು ಬ್ರಹ್ಮನ ಅಭಿವ್ಯಕ್ತಿಯನ್ನು ಸೂಚಿಸುತ್ತ ಕಾಣಿಸಿಕೊಳ್ಳುತ್ತವೆ.

ಪೃಥಿವ್ಯಪ್ತೇ ಜೋಽನಿಲ ಖೇ ಸಮುತ್ಥಿತೇ ಪಂಚಾತ್ಮಕೇ ಯೋಗ ಗುಣೇ
ಪ್ರವೃತ್ತೇ ।
ನತಸ್ಯರೋಗೋ ನಜರಾ ನಮೃತ್ಯುಃ ಪ್ರಾಪ್ತಸ್ಯಯೋಗಾಗ್ನಿ ಮಯಂ
ಶರೀರಂ ॥೧೨॥

ಪೃಥ್ವಿ, ನೀರು, ತೇಜಸ್ಸು, ವಾಯು, ಆಕಾಶ, ಇವು ಅಭಿವ್ಯಕ್ತವಾದಾಗ ; ಮತ್ತು ಪಂಚಭೂತಮಯವಾದ ಯೋಗ ಗುಣಗಳು ಪ್ರಕಟಿತವಾದಾಗ ; ಯೋಗಾಗ್ನಿಮಯವಾದ ಶರೀರವನ್ನು ಹೊಂದಿರುವ ಯೋಗಿಗೆ ರೋಗವಾಗಲೀ, ಮುಪ್ಪಾಗಲೀ, ಮೃತ್ಯುವಾಗಲೀ, ಇರುವುದಿಲ್ಲ.

ಲಘುತ್ವಮಾರೋಗ್ಯ ಮಲೋಲುಪತ್ವಂ ವರ್ಣಪ್ರಸಾರಂ ಸ್ವರಸೌಷ್ಟವಂಚ ।
ಗಂಧಃಶುಭೋ ಮೂತ್ರ ಪುರೀಷ ಮಲ್ಪಂ ಯೋಗಪ್ರವೃತ್ತಿಂ
ಪ್ರಥಮಾಂವದನ್ತಿ ॥೧೩॥

ಶರೀರಲಾಘವ, ಆರೋಗ್ಯ, ವಿಷಯಾಸಕ್ತಿಇಲ್ಲದಿರುವಿಕೆ, ಉಜ್ವಲವಾದ ಶರೀರ ಕಾಂತಿ, ಸ್ವರಮಾಧುರ್ಯ, ಶರೀರದ ಮಧುರವಾಸನೆ, ಅಲ್ಪವಾದಮೂತ್ರಪುರೀಷ, ಇವು ಮೊದಲುಂಟಾಗುವ ಯೋಗಪ್ರವೃತ್ತಿ ಎಂದು ಹೇಳುತ್ತಾರೆ.

ಯಥೈವಬಿಂಬಂ ಮೃದಯೋಪಲಿಪ್ತಂ, ತೇಜೋಮಯಂ ಭ್ರಾಜತೇ
ತತ್ಸುಧಾಂತಂ ।
ತದ್ವಾಽಽತ್ಮ ತತ್ತ್ವಂ ಪ್ರಸಮೀಕ್ಷ್ಯದೇಹೀ ಏಕಃ ಕೃತಾರ್ಥೋಭವತೇ
ವೀತಶೋಕಃ ॥೧೪॥

ಹೇಗೆ ಮಣ್ಣಿಂದ ಮುಚ್ಚಲ್ಪಟ್ಟ ಚಿನ್ನ ಅಥವಾ ಬೆಳ್ಳಿಯಚೂರು ತೊಳೆಯಲ್ಪಟ್ಟಾಗ ತೇಜೋಮಯವಾಗಿ ಹೊಳೆಯುತ್ತದೆಯೋ ಹಾಗೆಯೇ ದೇಹಧಾರಿಯಾದ ಜೀವನೂ ಆತ್ಮತತ್ವವನ್ನು ಸಾಕ್ಷಾತ್ಕರಿಸಿಕೊಂಡಾಗ ಪರಮಾತ್ಮನಿಂದ ಅಭಿನ್ನನೂ, ಕೃತಾರ್ಥನೂ, ಶೋಕರಹಿತನೂ ಆಗುತ್ತಾನೆ.

ಯದಾಽಽತ್ಮ ತತ್ತ್ವೇನ ತು ಬ್ರಹ್ಮ ತತ್ತ್ವಂ ದೀಪೋಪಮೇ ನೇಹಯುಕ್ತಃ
ಪ್ರಪಶ್ಯೇತ್
ಅಜಂ ಧೃವಂ ಸರ್ವತತ್ತ್ವೈ ರ್ವಿಶುದ್ಧಂ ಜ್ಞಾತ್ವಾದೇವಂ ಮುಚ್ಯತೇ
ಸರ್ವಪಾಶೈಃ ॥೧೫॥

ಯಾವಾಗ ಆತ್ಮತತ್ವದ ಮೂಲಕ ಬ್ರಹ್ಮತತ್ವವನ್ನು ಇಲ್ಲಿರುವ ದೀಪದಂತೆ ವೀಕ್ಷಿಸಿ ಇನ್ನೂ ಜನಿಸದೆ ಇರುವ ದೇವರನ್ನು ನೋಡಿ ತಿಳಿದುಕೊಳ್ಳುವಂತೆ ಅಜನೂ, ಧೃವನೂ, ಸರ್ವಸ್ವತಂತ್ರನೂ ಪರಿಶುದ್ಧನೂ ಆದ ಪರಮಾತ್ಮನನ್ನು ಅರಿತು ಕೊಂಡಲ್ಲಿ ಸರ್ವಪಾಶಗಳಿಂದ ಮುಕ್ತನಾಗುತ್ತಾನೆ.

ಏಷಹ ದೇವಃ ಪ್ರದಿಶೋಽನು ಸರ್ವಾಃ ಪೂರ್ವೋಹಜಾತಃ ಸಉಗರ್ಭೇ
ಅಂತಃ ।
ಸಏವಜಾತಃ ಸಜನಿಷ್ಯಮಾಣಃ ಪ್ರತ್ಯಜ್ಞನಾಂ ಸ್ತಿಷ್ಠತಿ
ಸರ್ವತೋಮುಖಃ ॥೧೬॥

ಎಲ್ಲಾ ದಿಕ್ಕುಗಳನ್ನೂ ವ್ಯಾಪಿಸಿಕೊಂಡಿರುವ ದೇವನೇ ಇವನು. ಇವನು ಮುಂಚೆ ಹಿರಣ್ಯಗರ್ಭರೂಪದಿಂದ ಹುಟ್ಟಿರುತ್ತಾನೆ, ಇವನು ಬ್ರಂಹ್ಮಾಂಡದ ಮಧ್ಯದಲ್ಲಿರುತ್ತಾನೆ. ಇವನೇ ಈಗ ಶಿಶುವಾಗಿಯೂ ಹುಟ್ಟಿರುತ್ತಾನೆ, ಮುಂದೂಹುಟ್ಟುವವ

ನಾಗಿರುತ್ತಾನೆ, ಇವನು ಅಂತರ್ಯಾಮಿಯಾಗಿದ್ದು ಸರ್ವತೋಮುಖನಾಗಿರು ತ್ತಾನೆ.

ಯೋ ದೇವೋ ಅಗ್ನೌಯೋಅಪ್ಸುಯೋ ವಿಶ್ವಂ ಭುವನಮಾವಿವೇಶ ।
ಯಓಷಧೀಷು ಯೋ ವನಸ್ಪತಿಷು ತಸ್ಮೈದೇವಾಯ ನಮೋನಮಃ ||೧೭||

ಯಾವ ದೇವನು ಅಗ್ನಿಯಲ್ಲಿಯೂ, ನೀರಿನಲ್ಲಿಯೂ, ಔಷಧಿಗಳಲ್ಲಿಯೂ, ವನ ಸ್ಪತಿಗಳಲ್ಲಿಯೂ ಇರುವನೋ ಯಾವನು ಸಂಸಾರಮಂಡಲವನ್ನೆಲ್ಲಾ ವ್ಯಾಪಿಸಿ ಕೊಂಡಿರುವನೋ ಅಂತಹ ದೇವನಿಗೆ ಪುನಃ ಪುನಃ ನಮಸ್ಕರಿಸುತ್ತೇನೆ.

## ಮೂರನೆಯ ಅಧ್ಯಾಯ

ಯ ಏಕೋ ಜಾಲವಾನೀಶತ ಈಶನೀಭಿಃ ಸರ್ವಾಂ ಲೋಕಾನೀಶತ
ಈಶನೀಭಿಃ ।
ಯಏವೈಕ ಉದ್ಭವೇ ಸಂಭವೇಚಯ ಏತದ್ವಿದುರ ಅಮೃತಾಸ್ತೇಭವಂತಿ ||೧||

ಯಾವನು ಅದ್ವಿತೀಯನೂ, ಮಾಯಾವಿಯೂ ಆಗಿದ್ದು ತನ್ನ ಶಕ್ತಿಗಳಿಂದ ಆಳು ತ್ತಾನೆ ಮತ್ತು ಅದ್ವಿತೀಯನಾಗಿದ್ದರೂ ಉದ್ಭವ ಕಾಲದಲ್ಲಿ ಮತ್ತು ಸಂಭವ ಕಾಲ ದಲ್ಲಿ ಲೋಕಗಳನ್ನೆಲ್ಲಾ ತನ್ನ ಶಕ್ತಿಯ ಮೂಲಕ ಆಳುತ್ತಾನೆ ಇದನ್ನು ಅರಿತ ವರು ಅಮರರಾಗುತ್ತಾರೆ.

ಏಕೋ ಹಿ ರುದ್ರೋ ನ ದ್ವಿತೀಯಾಯ ತಸ್ಥುರ್ಯ ಇಮಾಂಲ್ಲೋಕಾನಿ
ಶತಈಶ ನೀಭಿಃ।
ಪ್ರತ್ಯಙ್ಞನಾಂ ಸ್ತಿಷ್ಠತಿ ಸಂಚುಕೋಚಾಂತಕಾಲೇ ಸಂಸೃಜ್ಯ ವಿಶ್ವಾ
ಭುವನಾನಿಗೋಪಾಃ ||೨||

ಯಾವ ಕಾರಣದಿಂದ ರುದ್ರನು ಒಬ್ಬನೇ ಆಗಿರುವನೋ ಆ ಕಾರಣದಿಂದ ಬ್ರಹ್ಮವಿ ದರು ಎರಡನೆಯವನನ್ನು ಅಪೇಕ್ಷಿಸಲಿಲ್ಲ. ಇವನು ತನ್ನ ಶಕ್ತಿಗಳಿಂದ ಲೋಕಗ ಳನ್ನು ಆಳುತ್ತಾನೆ. ಮತ್ತು ಜನರಲ್ಲಿ ಅಂತರ್ಯಾಮಿಯಾಗಿ ನೆಲೆಸಿರುತ್ತಾನೆ. ಇವನೇ ಲೋಕಗಳನ್ನೆಲ್ಲಾ ಸೃಷ್ಟಿಸಿ ಅದರ ರಕ್ಷಕನಾಗಿರುತ್ತಾನೆ ಮತ್ತು ಪ್ರಳಯ ಕಾಲದಲ್ಲಿ ಸಂಹಾರಕನಾಗಿರುತ್ತಾನೆ.

ವಿಶ್ವತ ಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋ ಬಾಹುರುತ ವಿಶ್ವತಸ್ಪಾತ್ |
ಸಂಬಾಹುಭ್ಯಾಂ ಧಮತಿ ಸಂಪತತ್ರೈರ್ದ್ಯಾವಾ ಪೃಥ್ವೀಜನಯನ್ದೇವ
ಏಕಃ ||೩||

ಪರಮೇಶ್ವರನು ಎಲ್ಲಾ ಕಡೆಯಲ್ಲೂ ಕಣ್ಣುಗಳನ್ನೂ, ಮುಖಗಳನ್ನೂ, ಬಾಹುಗಳನ್ನೂ, ಪಾದಗಳನ್ನೂ ಹೊಂದಿರುತ್ತಾನೆ, ಆ ದೇವನೊಬ್ಬನೇ ದ್ಯುಲೋಕ ಭೂಲೋಕಾದಿಗಳನ್ನು ಸೃಷ್ಟಿಸಿ ಮನುಷ್ಯರನ್ನು ಬಾಹುಗಳಿಂದಲೂ, ಪಕ್ಷಿಗಳನ್ನು ರೆಕ್ಕೆಗಳಿಂದಲೂ ಸೇರಿಸುತ್ತಾನೆ.

ಯೋದೇವಾನಾಂ ಪ್ರಭವಶ್ಚೋದ್ಭವಶ್ಚ ವಿಶ್ವಾಧಿಪೋ ರುದ್ರೋಮಹರ್ಷಿಃ
ಹಿರಣ್ಯಗರ್ಭಂ ಜನಯಾಮಾಸಪೂರ್ವಂ ಸನೋಬುದ್ಧ್ಯಾ
ಶುಭಯಾ ಸಂಯುನಕ್ತು ||೪||

ಯಾವ ರುದ್ರನು ಇಂದ್ರಾದಿ ದೇವತೆಗಳ ಉತ್ಪತ್ತಿಗೆ ಮತ್ತು ಅವರ ವಿಭೂತಿಗೆ ಕಾರಣನೋ ಅವನು ವಿಶ್ವಪಾಲಕನೂ ಸರ್ವಜ್ಞನೂ ಆಗಿದ್ದು ಸೃಷ್ಟಿಗೆ ಮೊದಲು ಹಿರಣ್ಯಗರ್ಭನಿಗೆ ಜನ್ಮವನ್ನು ಕೊಟ್ಟವನಾಗಿದ್ದನು. ಅವನು ನಮಗೆ ಶುಭ ಬುದ್ಧಿಯನ್ನು ಕೊಡಲಿ.

ಯಾತೇ ರುದ್ರಾ ಶಿವಾತನೂ ರಘೋರಾಽ ಪಾಪಕಾಶಿನೀ |
ತಯಾನಸ್ತನುವಾ ಶಂತಮಯಾಗಿರಿ ಶಂತಾಭಿಚಾಕಶೀಹಿ ||೫||

ಹೇ ರುದ್ರನೇ ಗಿರಿಯಲ್ಲಿದ್ದುಕೊಂಡು ಸುಖವನ್ನುಂಟುಮಾಡುವವನೇ ಮಂಗಲಮಯವೂ, ಅಘೋರವೂ, ಪುಣ್ಯಪ್ರಕಾಶಕವೂ, ಪೂರ್ಣಾನಂದಕರವೂ ಆದ ನಿನ್ನ ಶರೀರದ ಮೂಲಕ ನಮ್ಮನ್ನು ನೋಡು.

ಯಾಮಿಷುಂ ಗಿರಿಶಂತಹಸ್ತೇ ಬಿಭರ್ಷ್ಯಸ್ತವೇ |
ಶಿವಾಂ ಗಿರಿತ್ರತಾಂ ಕುರು ಮಾಹಿಂಸೀಃ ಪುರುಷಂಜಗತ್ ||೬||

ಹೇ ಗಿರಿಶಂತ ಮತ್ತು ಗಿರಿತ್ರನೇ ನೀನು ಯಾವ ಬಾಣವನ್ನು ಮಾನವರ ಮೇಲೆ ಬಿಡುವುದಕ್ಕಾಗಿ ನಿನ್ನ ಕೈಯಲ್ಲಿ ಧರಿಸಿರುವೆಯೋ ಅದನ್ನು ಮಂಗಲಮಯವನ್ನಾಗಿ ಮಾಡು. ಮನುಷ್ಯರನ್ನಾಗಲೀ ಜಗತ್ತನ್ನಾಗಲೀ ಹಿಂಸಿಸಬೇಡ.

ತತಃಪರಂ ಬ್ರಹ್ಮಪರಂ ಬೃಹಂತಂ ಯಥಾನಿಕಾಯಂ
ಸರ್ವಭೂತೇಷು ಗೂಢಂ |
ವಿಶ್ವಸ್ಯೈಕಂ ಪರಿವೇಷ್ಟಿತಾರ ಮೀಶಂ ಜ್ಞಾತ್ವಾಽ ಮೃತಾಭವನ್ತಿ ||೭||

ಅದಕ್ಕಿಂತ ಶ್ರೇಷ್ಠನಾದ, ಹಿರಣ್ಯಗರ್ಭನಿಗಿಂತ ಶ್ರೇಷ್ಠನಾದ, ಬೃಹತ್ತಾದ, ಬೇರೆ ಬೇರೆ ಪ್ರಾಣಿಗಳ ಶರೀರಾನುಸಾರವಾಗಿ ಎಲ್ಲ ಪ್ರಾಣಿಗಳಲ್ಲೂ ಅಡಗಿರುವ, ವಿಶ್ವಕ್ಕೆಲ್ಲಾ ಅದ್ವಿತೀಯನಾಗಿರುವ ಆ ಪರಮೇಶ್ವರನನ್ನು ಅರಿತುಕೊಂಡವರು ಅಮೃತರಾಗುತ್ತಾರೆ.

ವೇದಾಹಮೇತಂ ಪುರುಷಂಮಹಾನ್ತಂ ಆದಿತ್ಯವರ್ಣಂ ತಮಸಃ ಪರಸ್ತಾತ್ |
ತಮೇವ ವಿದಿತ್ವಾಽತಿ ಮೃತ್ಯುಮೇತಿ ನಾನ್ಯಃಪಂಥಾ ವಿದ್ಯತೇಽಯನಾಯ ||೮||

ನಾನು ಅಜ್ಞಾನವೆಂಬ ಅಂಧಕಾರಕ್ಕಿಂತ ಆಚೆಗಿರುವ ಪ್ರಕಾಶ ಸ್ವರೂಪನಾದ ಈ ಪುರುಷನನ್ನು ಅರಿತಿರುತ್ತೇನೆ. ಹೀಗೆ ಯಾವನು ಅವನನ್ನು ಅರಿತುಕೊಂಡಿರುತ್ತಾನೋ ಅವನು ಮೃತ್ಯುವನ್ನು ದಾಟುತ್ತಾನೆ. ಪರಮಪದ ಪ್ರಾಪ್ತಿಗೆ ಇದಕ್ಕಿಂತ ಬೇರೆ ದಾರಿ ಇಲ್ಲ.

ಯಸ್ಮಾತ್ಪರಂ ನಾ ಪರಮಸ್ತಿ ಕಿಂಚಿದ್ಯಸ್ಮಾನ್ನಾಣೀಯೋ ನ ಜ್ಯಾಯೋಸ್ತಿ
ಕಶ್ಚಿತ್
ವೃಕ್ಷ ಇವ ಸ್ತಬ್ಧೋ ದಿವಿತಿಷ್ಟತ್ಯೇಕ ಸ್ತೇನೇದಂ ಪೂರ್ಣಂ ಪುರುಷೇಣ
ಸರ್ವಂ ||೯||

ಯಾವ ಪುರುಷನಿಗಿಂತ ಉತ್ಕೃಷ್ಟವಾದ ಬೇರೆ ಯಾವುದೂ ಇಲ್ಲವೋ, ಯಾವನಿಗಿಂತ ಅಣುರೂಪದ್ದಾಗಲೀ, ಮಹದ್ರೂಪದ್ದಾಗಲೀ ಯಾವುದೂ ಇಲ್ಲವೋ, ಯಾವ ಅದ್ವಿತೀಯನಾದ ಪರಮಾತ್ಮನು ದ್ಯುಲೋಕದಲ್ಲಿ ವೃಕ್ಷದಂತೆ ನಿಶ್ಚಲಭಾವದಿಂದ ನೆಲೆಸಿರುವನೋ ಅವನಿಂದ ಇವೆಲ್ಲವೂ ತುಂಬಿದೆ.

ತದೋಯದುತ್ತರತರಂ ತದರೂಪಮನಾಮಯಂ |
ಯ ಏತದ್ವಿದುರ ಮೃತಾಸ್ತೇಭವಂತಿ ಅಥೇತರೇ ದುಃಖಮೇ ವಾಪಿಯನ್ತಿ ||೧೦||

ಯಾವುದು ಹಿಂದೆ ಹೇಳಿದ ಜಗತ್ತಿಗಿಂತ ಉತ್ತಮ ತರವಾದುದೋ ಅದು ರೂಪವಿಲ್ಲದ್ದಾಗಿಯೂ, ಅನಾಮಯವಾಗಿಯೂ ಇರುತ್ತದೆ. ಇದನ್ನು ಅರಿತವರು ಅಮೃತರಾಗುತ್ತಾರೆ. ಅರಿಯದವರು ದುಃಖವನ್ನೇ ಹೊಂದುತ್ತಾರೆ.

ಸರ್ವಾನನ ಶಿರೋಗ್ರೀವಃ ಸರ್ವಭೂತ ಗುಹಾಶಯಃ |
ಸರ್ವವ್ಯಾಪೀ ಸ ಭಗವಾಂ ಸ್ತಸ್ಮಾತ್ಸರ್ವ ಗತಃ ಶಿವಃ ||೧೧||

ಸರ್ವ ಪ್ರಾಣಿಗಳ ಮುಖ, ತಲೆ, ಕುತ್ತಿಗೆ, ವಗೈರೆ ಇವನವು. ಇವನು ಎಲ್ಲಾ ಪ್ರಾಣಿಗಳ ಬುದ್ಧಿಯಲ್ಲೂ ಇರುವನು. ಅವನು ಸರ್ವ ವ್ಯಾಪಿಯಾದ ಭಗವಂತ ನಾಗಿದ್ದಾನೆ. ಆದುದರಿಂದ ಸರ್ವಗತನೂ, ಮಂಗಳ ಸ್ವರೂಪನೂ, ಆಗಿರು ತ್ತಾನೆ.

ಮಹಾನ್ ಪ್ರಭುರ್ವೈ ಪುರುಷಃ ಸತ್ತ್ವಸ್ಯೈಷ ಪ್ರವರ್ತಕಃ |
ಸುನಿರ್ಮಲಾಮಿಮಾಂ ಪ್ರಾಪ್ತಿ ಮೀಶಾನೋ ಜ್ಯೋತಿರವ್ಯಯಃ ||೧೨||

ಇವನು ಮಹಾನ್ ಪ್ರಭುವು. ಶರೀರವೆಂಬ ಪುರುಷದಲ್ಲಿರುವವನು. ಇವನು ವಿಶುದ್ಧವಾದ ಪ್ರಾಪ್ತಿಯನ್ನುದ್ದೇಶಿಸಿ ಅಂತಃಕರಣವನ್ನು ಪ್ರೇರಿಸುತ್ತಾನೆ. ಇವನೇ ಈಶ್ವರನೂ, ಪ್ರಕಾಶ ಸ್ವರೂಪನೂ, ಅವಿನಾಶಿಯೂ ಆಗಿರುತ್ತಾನೆ.

ಅಂಗುಷ್ಠ ಮಾತ್ರಃ ಪುರುಷೋಽಂತರಾತ್ಮಾ ಸದಾಜನಾನಾಂ ಹೃದಯೇ ಸನ್ನಿವಿಷ್ಟಃ |
ಹೃದಾಮನ್ವೀಶೋ ಮನಸಾಽಭಿಕ್ಲೃಪ್ತೋ ಯಏತದ್ವಿದುರ ಮೃತಾಸ್ತೇ ಭವತಿ ||೧೩||

ಇವನು ಅಂಗುಷ್ಠ ಪರಿಮಾಣವುಳ್ಳವನೂ, ಪೂರ್ಣನೂ, ಅಂತರಾತ್ಮನೂ ಆಗಿದ್ದು ಯಾವಾಗಲೂ ಜನರ ಹೃದಯದಲ್ಲಿ ಪ್ರತಿಷ್ಠಿತನಾಗಿರುತ್ತಾನೆ. ಜ್ಞಾನೇಶನಾದ ಇವನು ಹೃದಯದಲ್ಲಿರುವ ಮನಸ್ಸಿನಿಂದ ಅಭಿರಕ್ಷಿತನಾಗಿರುತ್ತಾನೆ. ಯಾರು ಇದನ್ನರಿತು ಇರುವರೋ ಅವರು ಅಮೃತರಾಗುತ್ತಾರೆ.

ಸಹಸ್ರ ಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ |
ಸ ಭೂಮಿಂ ವಿಶ್ವತೋ ವೃತ್ವಾಽತ್ಯತಿಷ್ಠ ದ್ದಶಾಂಗುಲಂ ||೧೪||

ಈ ಪುರುಷನಿಗೆ ಸಾವಿರಾರು ತಲೆಗಳು, ಸಾವಿರಾರು ಕಣ್ಣುಗಳು, ಸಾವಿರಾರು ಪಾದಗಳು. ಇವನು ಭುವನವನ್ನು ಎಲ್ಲ ಕಡೆಗಳಿಂದಲೂ ಆವರಿಸಿಕೊಂಡು ಅದನ್ನು ಹತ್ತು ಅಂಗುಲದಷ್ಟು ಮೀರಿನಿಂತಿರುತ್ತಾನೆ.

ಪುರುಷ ಏವೇದಗ್ಂ ಸರ್ವಂ ಯದ್ಭೂತಂಯ ಚ್ಚಭವ್ಯಂ |
ಉತಾಮೃತತ್ವಸ್ಯೇಶಾನೋ ಯದನ್ನೇ ನಾ ತಿರೋಹತಿ ||೧೫||

ಯಾವುದು ಹಿಂದೆ ಇದ್ದಿತೋ, ಈಗ ಇರುವುದೋ, ಮುಂದೆ ಉಂಟಾಗಬಹುದೋ ಅವೆಲ್ಲವೂ ಈ ಪುರುಷನೇ. ಹಾಗೆಯೇ ಅವನೇ ಕೈವಲ್ಯದ ಒಡೆಯನು ಮತ್ತು ಯಾವುದು ಅನ್ನದಿಂದ ವರ್ಧಿಸುವುದೋ ಅದಕ್ಕೂ ಒಡೆಯನು.

ಸರ್ವತಃ ಪಾಣಿ ಪಾದಂ ತತ್ ಸರ್ವತೋಕ್ಷಿ ಶಿರೋ ಮುಖಂ |
ಸರ್ವತಃ ಶೃತಿ ಮಲ್ಲೋಕೇ ಸರ್ವಮಾವೃತ್ಯತಿಷ್ಠತಿ ||೧೬||

ಅದು ಎಲ್ಲೆಲ್ಲಿಯೂ ಕೈಕಾಲುಗಳನ್ನೂ, ಕಣ್ಣು, ತಲೆ, ಬಾಯಿಗಳನ್ನೂ, ಕಿವಿಗಳನ್ನೂ, ಉಳ್ಳದುದು ಮತ್ತು ಲೋಕದಲ್ಲಿ ಎಲ್ಲವನ್ನೂ ಆವರಿಸಿಕೊಂಡಿರುತ್ತದೆ.

ಸರ್ವೇಂದ್ರಿಯ ಗುಣಾಭಾಸಂ ಸರ್ವೇಂದ್ರಿಯ ವಿವರ್ಜಿತಂ |
ಸರ್ವಸ್ಯ ಪ್ರಭು ಮೀಶಾನಂ ಸರ್ವಸ್ಯ ಶರಣಂ ಬೃಹತ್ ||೧೭||

ಈಜ್ಞೇಯ ವಸ್ತುವು ಎಲ್ಲ ಇಂದ್ರಿಯ ಗುಣಗಳಿಂದ ಬೆಳಗಲ್ಪಡತಕ್ಕದ್ದು. ಸರ್ವೇಂದ್ರಿಯ ರಹಿತವಾದದ್ದು. ಇದು ಎಲ್ಲಕ್ಕೂ ಪ್ರಭು, ಈಶಾನ, ಎಲ್ಲಕ್ಕೂ ಕಾರಣ ಮತ್ತು ಪರಾಯಣ,

ನವದ್ವಾರೇ ಪುರೇ ದೇಹೀ ಹಂ ಸೋ ಲೇಲಾಯತೇ ಬಹಿಃ |
ವಶೀ ಸರ್ವಸ್ಯ ಲೋಕಸ್ಯ ಸ್ಥಾವರಸ್ಯ ಚರಸ್ಯಚ ||೧೮||

ಸ್ಥಾವರ ಮತ್ತು ಜಂಗಮ ರೂಪವಾದ ಈ ಸಮಸ್ತ ಲೋಕಗಳನ್ನೂ ವಶದಲ್ಲಿಟ್ಟು ಕೊಂಡಿರುವ ಆ ಪರಮಾತ್ಮನು ಜೀವಭಾವವನ್ನು ಹೊಂದಿ ನವದ್ವಾರಗಳುಳ್ಳ ಈ ದೇಹವೆಂಬ ಪಟ್ಟಣದಲ್ಲಿದ್ದುಕೊಂಡು ಹೊರಗಿನ ವಿಷಯ ಗ್ರಹಣಕ್ಕಾಗಿ ಚಲಿಸುತ್ತಾನೆ.

ಅಪಾಣಿ ಪಾದೋ ಜವನೋ ಗೃಹೀತಾ ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ |
ಸವೇತ್ತಿ ವೇದ್ಯಂ ನ ಚತಸ್ಯಾಸ್ತಿ ವೇತ್ತಾ ತಮಾ, ಹುರಗ್ರ್ಯಂ ಪುರುಷಂ
ಮಹಾನ್ತಂ ||೧೯||

ಅವನು ಕಾಲುಗಳಿಲ್ಲದಿದ್ದರೂ ವೇಗವಾಗಿ ದೂರ ಹೋಗಬಲ್ಲವನು ; ಕೈಗಳಿಲ್ಲದಿದ್ದರೂ ಎಲ್ಲವನ್ನೂ ತೆಗೆದುಕೊಳ್ಳಬಲ್ಲವನು ; ಕಣ್ಣಿಲ್ಲದಿದ್ದರೂ ನೋಡಬಲ್ಲವನು; ಕಿವಿ ಇಲ್ಲದಿದ್ದರೂ ಕೇಳಬಲ್ಲವನುಮನಸ್ಸಿಲ್ಲದಿದ್ದರೂ ತಿಳಿದುಕೊಳ್ಳಬಲ್ಲವನು ; ಆದರೆ ಅವನನ್ನು ಅರಿಯ ಬಲ್ಲವರು ಯಾರೂ ಇಲ್ಲ. ಇವನನ್ನು ಸರ್ವಾಗ್ರಣಿ ಎಂದೂ, ಪರಿಪೂರ್ಣನೆಂದೂ, ಮಹಾಂತನೆಂದೂ, ಹೇಳುತ್ತಾರೆ.

ಅಣೋರಣೀಯಾನ್ಮಹತೋಮಹೀಯಾನ್ ಆತ್ಮಾಗುಹಾಯಾಂ
ನಿಹಿತೋಽಸ್ಯಜಂತೋಃ ।
ತಮಕ್ರತುಂ ಪಸ್ಯತಿ ವೀತಶೋಕೋ ಧಾತುಃ ಪ್ರಸಾದಾನ್ಮಹಿಮಾನ
ಮೀಶಂ ||೨೦||

ಅಣುವಿಗಿಂತಲೂ ಅಣುತರನಾದ, ಮಹತ್ತಿಗಿಂತಲೂ ಮಹತ್ತರನಾದ, ಈ ಆತ್ಮನು ಸಮಸ್ತ ಪ್ರಾಣಿಗಳ ಹೃದಯದಲ್ಲಿ ಸ್ಥಿತನಾಗಿರುವನು. ಯಾವನು ಧಾತುವಿನ ಪ್ರಸಾದದಿಂದ ವಿಷಯ ಭೋಗ ಸಂಕಲ್ಪರಹಿತನಾದ ಮತ್ತು ಮಹಾಮಹಿಮನಾದ ಆ ಈಶ್ವರನನ್ನು ನೋಡುತ್ತಾನೋ ಆವನು ಶೋಕರಹಿತನಾಗುತ್ತಾನೆ.

ವೇದಾಹ ಮೇತಂ ಅಜರಂ ಪುರಾಣಂ ಸರ್ವಾತ್ಮಾನಂ ಸರ್ವಗತಂ ವಿಭುತ್ವಾತ್ ।
ಜನ್ಮನಿರೋಧಂ ಪ್ರವದನ್ತಿಯಸ್ಯ ಬ್ರಹ್ಮವಾದಿನೋ ಹಿ ಪ್ರವದನ್ತಿ ನಿತ್ಯಂ ||೨೧||

ಯಾವನಿಗೆ ಬ್ರಹ್ಮವಾದಿಗಳು ಉತ್ಪತ್ತಿಯ ಅಭಾವವನ್ನು ಹೇಳುತ್ತಾರೆಯೋ ಮತ್ತು ಯಾವುದನ್ನು ನಿತ್ಯವೆಂದು ತಿಳಿಸುತ್ತಾರೆಯೋ ಅಂತಹ ಮುಪ್ಪಿಲ್ಲದ, ಪುರಾತನನಾದ, ಸರ್ವಾತ್ಮನಾದ, ವ್ಯಾಪಕನಾಗಿರುವ, ಸರ್ವಗತನಾದ ಈ ಪರಮಾತ್ಮನನ್ನು ನಾನು ಅರಿತಿರುತ್ತೇನೆ.

## ನಾಲ್ಕನೆಯ ಅಧ್ಯಾಯ

ಯ ಏಕೋಽವರ್ಣೋ ಬಹುಧಾ ಶಕ್ತಿಯೋಗಾ ದ್ವರ್ಣಾನನೇಕಾ
ನ್ನಿಹಿತಾರ್ಥೋ ದಧಾತಿ ।
ವಿಚೈತಿ ಚಾನ್ತೇ ವಿಶ್ವಮಾದೌ ಸ ದೇವಃ ಸನೋ ಬುದ್ಧ್ಯಾ ಶುಭಯಾ
ಸಂಯುನಕ್ತು ||೧||

ಯಾವನು ಅದ್ವಿತೀಯನೂ, ವರ್ಣರಹಿತನೂ, ಆಗಿದ್ದರೂ ತನ್ನ ಶಕ್ತಿಯ ದೆಶೆಯಿಂದ ನಾನಾ ಪ್ರಕಾರವಾಗಿ ಅನೇಕ ವರ್ಣಗಳನ್ನು ಸ್ವಾರ್ಥಾಪೇಕ್ಷೆ ಇಲ್ಲದೆ ಸೃಷ್ಟಿ ಕಾಲದಲ್ಲಿ ಸೃಷ್ಟಿಸುವನೋ; ಯಾವನಲ್ಲಿ ವಿಶ್ವವು ಪ್ರಳಯ ಕಾಲದಲ್ಲಿ ಲಯ ಹೊಂದುವುದೋ; ಅಂತಹ ದೇವನು ನಮ್ಮನ್ನು ಶುಭವಾದ ಬುದ್ಧಿಯೊಡನೆ ಸೇರಿಸಲಿ.

ತದೇ ವಾಗ್ನಿ ಸ್ತದಾದಿತ್ಯ ಸ್ತದ್ವಾಯು ಸ್ತದುಚಂದ್ರಮಾಃ
ತದೇವ ಶುಕ್ರಂ ತದ್ಬ್ರಹ್ಮ ತದಾಪಸ್ತತ್ ಪ್ರಜಾಪತಿಃ ||೨||

ಆ ಆತ್ಮತತ್ವವೇ ಅಗ್ನಿಯು, ಅದು ಆದಿತ್ಯನು, ವಾಯುವು, ಚಂದ್ರನು, ಕಾಂತಿ ಯುಕ್ತವಾದ ನಕ್ಷತ್ರಗಳು, ಹಿರಣ್ಯಗರ್ಭನು, ನೀರು ವಿರಾಟ್ಪುರುಷನು, ಎಲ್ಲವೂ ಆಗಿರುತ್ತಾನೆ.

ತ್ವಂ ಸ್ತ್ರೀ ತ್ವಂಪುಮಾನಸಿ, ತ್ವಂಕುಮಾರ ಉತವಾಕುಮಾರೀ |
ತ್ವಂ ಜೀರ್ಣೋ‍ರ್ದಂಡೇನ ವಂಚಸಿ ತ್ವಂ ಜಾತೋ ಭವಸಿ ವಿಶ್ವತೋಮುಖಃ ||೩||

ನೀನು ಸ್ತ್ರೀ, ಪುರುಷನು, ಕುಮಾರನು ಮತ್ತು ಕುಮಾರಿಯೂ ಆಗಿರುತ್ತೀಯೆ. ಮುಪ್ಪನ್ನು ಹೊಂದಿ ಕೋಲಿನ ಸಹಾಯದಿಂದ ತತ್ತರಿಸುತ್ತೀಯೆ. ಈ ಪ್ರಪಂಚ ದಲ್ಲಿ ಹುಟ್ಟಿ ವಿಶ್ವತೋಮುಖನಾಗಿಯೂ ಇದ್ದೀಯೆ.

ನೀಲಃ ಪತಂಗೋ ಹರಿತೋ ಲೋಹಿತಾಕ್ಷ ಸ್ತಡಿದ್ಗರ್ಭ ಋತವಃ ಸಮುದ್ರಾಃ|
ಅನಾದಿ ಮತ್ವಂ ವಿಭುತ್ವೇನ ವರ್ತಸೇ ಯತೋಜಾತಾ ನಿ ಭುವನಾನಿ
ವಿಶ್ವಾ ||೪||

ನೀನು ನೀಲ ವರ್ಣದ ಭ್ರಮರ; ಹಸಿರು ಬಣ್ಣದ ಕೆಂಪು ಕಣ್ಣಿನ ಗಿಣಿ; ಸಿಡಿಲನ್ನು ಉಂಟುಮಾಡುವ ಮೋಡ; ಋತುಗಳು, ಸಮುದ್ರಗಳೂ ನೀನೇ; ನೀನು ಅನಾದಿ. ಏಕೆಂದರೆ ಲೋಕಗಳೆಲ್ಲವೂ ನಿನ್ನಿಂದಲೇ ಹುಟ್ಟಿವೆ. ಮತ್ತು ನೀನೇ ವ್ಯಾಪಕನಾಗಿಯೂ ಇರುತ್ತೀಯೆ.

ಅಜಾಮೇಕಾಂ ಲೋಹಿತ ಶುಕ್ಲ ಕೃಷ್ಣಾಂ ಬಹ್ವೀಃ ಪ್ರಜಾಃ ಸೃಜಮಾನಾಂ
ಸರೂಪಾಃ |
ಅಜೋಹ್ಯೇ ಕೋ ಜುಷಮಾಣೋಽನುಶೇತೇ ಜಹಾತ್ಯೇ ನಾಂ ಭುಕ್ತಭೋಗಾ
ಮಜೋಽನ್ಯಃ ||೫||

ತನ್ನಂತೆಯೇ ಇರುವ ಅನೇಕ ಸಂತಾನಗಳನ್ನು ಸೃಷ್ಟಿಸುತ್ತಿರುವ ಕೆಂಪು, ಬಿಳುಪು, ಕಪ್ಪು ಈ ಮೂರು ಬಣ್ಣಗಳನ್ನುಳ್ಳ ಆಡು ಒಂದನ್ನು ಒಂದು ಹೋತವು ಸೇವಿಸುತ್ತ ಜೊತೆಯಲ್ಲಿ ಮಲಗಿರುತ್ತದೆ. ಆದರೆ ಮತ್ತೊಂದು ಹೋತವು ಈ ಆಡನ್ನು ಭೋಗಿಸಿದ ಮೇಲೆ ತ್ಯಜಿಸುತ್ತದೆ.

ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ |
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯ ನಶ್ನನ್ನನ್ಯೋ ಅಭಿಚಾಕಶೀತಿ ||೬||

ಯಾವಾಗಲೂ ಜೊತೆಯಲ್ಲಿರುವ ಸಖರಾದ ಎರಡು ಪಕ್ಷಿಗಳು ಒಂದೇ ವೃಕ್ಷವನ್ನು ಆಶ್ರಯಿಸಿಕೊಂಡಿವೆ. ಅವೆರಡರಲ್ಲಿ ಒಂದು ಸವಿಯಾದ ಹಣ್ಣನ್ನು ತಿನ್ನುತ್ತಿದೆ. ಆದರೆ ಇನ್ನೊಂದು ಏನನ್ನೂ ತಿನ್ನದೆ ಸುಮ್ಮನೆ ನೋಡುತ್ತಿದೆ.

ಸಮಾನೇ ವೃಕ್ಷೇ ಪುರುಷೋ ನಿಮಗ್ನೋಽಶನೀಯಾ ಶೋಚತಿ
ಮುಹ್ಯಮಾನಃ |
ಯಷ್ಟಂಯದಾ ಪಶ್ಯತ್ಯನ್ಯಮೀಶ ಮಸ್ಯ ಮಹಿಮಾನ ಮಿತಿ ವೀತಶೋಕಃ ||೭||

ಜೀವನು ಒಂದೇ ಮರದಲ್ಲಿ ಮುಗ್ಧನಾಗಿ ಮೋಹಗೊಂಡವನಾಗಿ ದೈನ್ಯದಿಂದ ಶೋಕಿಸುತ್ತಿರುವನು. ಯಾವಾಗ ಸೇವಿಸಲ್ಪಟ್ಟ ತನಗಿಂತ ಬೇರೆಯವನಾದ ಈಶ್ವರನನ್ನೂ ಮತ್ತು ಅವನ ಮಹಿಮೆಯನ್ನೂ ಹೀಗೆಂದು ನೋಡುತ್ತಾನೆಯೋ ಆಗ ಶೋಕವಿಲ್ಲದವನಾಗುವನು.

ಋಚೋ ಅಕ್ಷರೇ ಪರಮೇವ್ಯೋಮನ್ ಯಸ್ಮಿನ್ದೇವಾ ಅಧಿ ವಿಶ್ವೇ ನಿಷೇದುಃ |
ಯಸ್ತನ್ನ ವೇದ ಕಿ ಮೃಚಾಕರಿಷ್ಯತಿ ಯ ಇತ್ತದ್ವಿದುಸ್ತ ಇಮೇ
ಸಮಾಸತೇ ||೮||

ಯಾವ ಪರಮಾಕಾಶವಾದ ಅಕ್ಷರದಲ್ಲಿ ಋಕ್ಕುಗಳೂ, ಎಲ್ಲ ದೇವತೆಗಳೂ, ಆಶ್ರಿತರಾಗಿ ನೆಲಸಿರುವರೋ ಅದನ್ನು ಯಾವನು ಅರಿತಿಲ್ಲವೋ ಅವನು ಋಕ್ಕಿನಿಂದ ಏನು ಮಾಡಿಯಾನು ? ಆದರೆ ಅದನ್ನು ತಿಳಿದವರು ಮಾತ್ರ ಕೃತಾರ್ಥರಾಗುತ್ತಾರೆ.

ಛಂದಾಂಸಿಯಜ್ಞಾಃ ಕ್ರತವೋ ವ್ರತಾನಿ ಭೂತಂ ಭವ್ಯಂ
ಯಚ್ಚವೇದಾವದನ್ತಿ |
ಅಸ್ಮಾನ್ಮಾಯೀ ಸೃಜತೇ ವಿಶ್ವಮೇತತ್ ತಸ್ಮಿಂಶ್ಚಾನ್ಯೋಮಾಯಯಾ
ಸಂನಿರುದ್ಧಃ ||೯||

ವೇದಗಳು, ಯಜ್ಞಗಳು, ಕ್ರತುಗಳು, ವ್ರತಗಳು, ಹಿಂದೆ ಇದ್ದು ಮುಂದೆ ಉಂಟಾಗತಕ್ಕದ್ದು, ವೇದಗಳು, ಇವು ವರ್ತಮಾನಕಾಲದಲ್ಲಿನ ಯಾವ ಯಾವುದನ್ನು ಪ್ರತಿಪಾದಿಸುತ್ತವೆಯೋ ಅವೆಲ್ಲವೂ ಅಕ್ಷರ ಪರಬ್ರಹ್ಮನಿಂದಲೇ ಉತ್ಪನ್ನವಾಗಿವೆ. ಪರ

ಮೇಶ್ವರನೇ ಈ ವಿಶ್ವವನ್ನು ಸೃಷ್ಟಿಸುತ್ತಾನೆ, ಮತ್ತು ಅದರಲ್ಲಿ ಮಾಯೆಯಿಂದ ಬಂಧಿಸಲ್ಪಟ್ಟಿರುತ್ತಾನೆ.

ಮಾಯಾಂತು ಪ್ರಕೃತಿಂ ವಿದ್ಯಾನ್ಮಾಯಿನಂತು ಮಹೇಶ್ವರಂ |
ತಸ್ಯಾನಯವ ಭೂತೈಸ್ತು ವ್ಯಾಪ್ತಂ ಸರ್ವಮಿದಂ ಜಗತ್ ||೧೦||

ಪ್ರಕೃತಿಯನ್ನು ಮಾಯೆ ಎಂದೂ ಮಹೇಶ್ವರನನ್ನು ದಾಯಾವಿ ಎಂದೂ ತಿಳಿಯ ಬೇಕು. ಈ ಜಗತ್ತೆಲ್ಲವೂ ಅವನವನ ಅವಯವಗಳಿಂದ ವ್ಯಾಪ್ತವಾಗಿದ್ದು ಈ ಜಗತ್ತೆಲ್ಲವನ್ನೂ ಆವರಿಸಿಕೊಂಡಿರುತ್ತಾನೆ,

ಯೋ ಯೋನಿಂ ಯೋನಿಮಧಿತಿಷ್ಠತ್ಯೇಕೋ ಯಸ್ಮಿನ್ನಿದಂ ಸಂಚ
ವಿಚೈತಿ ಸರ್ವಂ |
ತಮೀಶಾನಾಂ ವರದಂ ದೇವಮಿಡ್ಯಂ ನಿಚಾಯ್ಯೇ
ಮಾಂ ಶಾಂತಿ ಮತ್ಯಂತ ಮೇತಿ ||೧೧||

ಯಾವನು ಅದ್ವಿತೀಯನಾಗಿದ್ದರೂ ಪ್ರತಿಯೊಂದು ಯೋನಿಯಲ್ಲಿಯೂ ಅಧಿಷ್ಠಾತ್ರ ವಾಗಿರುವನೋ ; ಯಾವನಲ್ಲಿ ಇವೆಲ್ಲವೂ ಸೇರಿಕೊಳ್ಳುವವೊ ಮತ್ತು ಸೃಷ್ಟಿಕಾಲ ದಲ್ಲಿ ವಿವಿಧ ರೂಪಗಳಿಂದ ಉತ್ಪನ್ನವಾಗುವುದೋ ಅಂತಹ ವರಪ್ರದನಾದ, ಸ್ತುತ್ಯನಾದ, ನಿಯಂತೃವಾದ, ದೇವನನ್ನು ಸಾಕ್ಷಾತ್ಕರಿಸಿಕೊಂಡು ಈ ಶಾಂತಿಯನ್ನು ಅತ್ಯಂತಿಕವಾಗಿ ಹೊಂದು:ತ್ತಾನೆ.

ಯೋ ದೇವಾನಾಂ ಪ್ರಭವಶ್ಚೋದ್ಭವಶ್ಚ ವಿಶ್ವಾಧಿಪೋರು ದ್ರೋಮಹರ್ಷಿಃ |
ಹಿರಣ್ಯಗರ್ಭಂ ಪಶ್ಯತ ಜಾಯಮಾನಂ ಸನೋಬುದ್ಧ್ಯಾ
ಶುಭಯಾ ಸಂಯುನಕ್ತು ||೧೨||

ಯಾವನು ಇಂದ್ರಾದಿ ದೇವತೆಗಳ ಉತ್ಪತ್ತಿಗೆ ಮತ್ತು ಅವರ ವಿಭೂತಿ ಯೋಗಕ್ಕೆ ಕಾರಣನೋ ! ಯಾವನು ಹುಟ್ಟುತ್ತಿರುವ ಹಿರಣ್ಯ ಗರ್ಭವನ್ನು ನೋಡಿರುವನೊ ಅಂತಹ ರುದ್ರನು ನಮಗೆ ಸಮ ಬುದ್ಧಿಯನ್ನು ಕೊಡಲಿ.

ಯೋದೇವಾನಾಮಧಿಪೋ ಯಸ್ಮಿಂಲ್ಲೋಕಾ ಅಧಿಶ್ರಿತಾಃ |
ಯ ಈಶೇ ಅಸ್ಯದ್ವಿಪದಶ್ಚತುಷ್ಪದಃ ಕಸ್ಮೈ ದೇವಾಯ
ಹವಿಷಾವಿಧೇಮಾಂ ||೧೩||

ಯಾವನು ದೇವತೆಗಳಿಗೆ ಅಧಿಪತಿಯೋ ; ಯಾವನಲ್ಲಿ ಲೋಕಗಳು ಆಶ್ರಿತವಾಗಿವೆಯೋ ; ಯಾವನು ಮನುಷ್ಯರ ಮತ್ತು ಪಶುಗಳ ಒಡೆಯನೋ ; ಅಂತಹ ಆನಂದ ಸ್ವರೂಪನಾದ ದೇವನಿಗೆ ಹವಿಸ್ಸಿನ ಮೂಲಕ ಪರಿಚರ್ಯೆಯನ್ನು ಮಾಡುತ್ತೇನೆ.

ಸೂಕ್ಷ್ಮಾತಿ ಸೂಕ್ಷ್ಮಂ ಕಲಿಲಸ್ಯ ಮಧ್ಯೇ ವಿಶ್ವಸ್ಯ ಸ್ರಷ್ಟಾರ ಮನೇಕರೂಪಂ ।
ವಿಶ್ವ ಸ್ಯೈಕಂ ಪರಿವೇಷ್ಟಿತಾರಂ ಜ್ಞಾತ್ವಾ ಶಿವಂ ಶಾಂತಿ
ಮತ್ಯಂತಮೇತಿ ॥೧೪॥

ಸೂಕ್ಷ್ಮಕ್ಕಿಂತ ಸೂಕ್ಷ್ಮನೂ, ಅವಿದ್ಯೆ ಮತ್ತು ಅದರ ಕಾರ್ಯ ಎಂಬ ಗಹನ ಸ್ಥಾನದ ಮಧ್ಯದಲ್ಲಿ ಇರುವವನೂ, ವಿಶ್ವಕರ್ತನೂ ಅನೇಕ ರೂಪಗಳುಳ್ಳವನೂ, ಆದ ಆ ಶಿವನನ್ನು ಅರಿತುಕೊಂಡವನು ಪರಮ ಶಾಂತಿಯನ್ನು ಅತ್ಯಂತಿಕವಾಗಿ ಪಡೆಯುತ್ತಾನೆ.

ಸಏವಕಾಲೇ ಭುವನಸ್ಯಗೋಪ್ತಾ ವಿಶ್ವಾಧಿಪಃ ಸರ್ವ ಭೂತೇಷು ಗೂಢಃ ।
ಯಸ್ಮಿನ್ಯುಕ್ತಾ ಬ್ರಹ್ಮರ್ಷಯೋ ದೇವತಾಶ್ಚ ತಮೇವಂ ಜ್ಞಾತ್ವಾ
ಮೃತ್ಯುಪಾಶಾಂಶ್ಛಿನತ್ತಿ ॥೧೫॥

ಅವನೇ ಹಿಂದಿನ ಕಲ್ಪಗಳಲ್ಲ ಪ್ರಪಂಚದ ರಕ್ಷಕನಾಗಿದ್ದನು ಅವನೇ ವಿಶ್ವದ ಒಡೆಯನೂ, ಸರ್ವಪ್ರಾಣಿಗಳಲ್ಲಿ ಅಡಗಿರುವನೂ, ಆಗಿರುವನು. ಯಾವನಲ್ಲಿ ಬ್ರಹ್ಮರ್ಷಿಗಳೂ. ದೇವತೆಗಳೂ ಸೇರಿಕೊಂಡಿರುವರೋ ಅವನನ್ನು ಹೀಗೆ ಅರಿತುಕೊಂಡವರು ಮೃತ್ಯುಪಾಶಗಳನ್ನು ಕತ್ತರಿಸಿಕೊಂಡವರಾಗುತ್ತಾರೆ.

ಘೃತಾತ್ಪರಂ ಮಂಡ ಮಿವಾತಿಸೂಕ್ಷ್ಮಂ ಜ್ಞಾತ್ವಾಶಿವಂ
ಸರ್ವ ಭೂತೇಷುಗೂಢಂ ।
ವಿಶ್ವಸ್ಯೈಕಂ ಪರಿವೇಷ್ಟಿತಾರಂ ಜ್ಞಾತ್ವಾದೇವಂಮುಚ್ಯತೇ
ಸರ್ವಪಾಶೈಃ ॥೧೬॥

ತುಪ್ಪದ ಮೇಲಿನ ಕೆನೆಯಂತೆ ಅತ್ಯಂತ ಸೂಕ್ಷ್ಮನೂ, ಎಲ್ಲ ಪ್ರಾಣಿಗಳಲ್ಲಿ ಅಡಗಿರುವನೂ, ಶಿವಸ್ವರೂಪನೂ. ತಾನೊಬ್ಬನೇ ವಿಶ್ವವೆಲ್ಲವನ್ನೂ ವ್ಯಾಪಿಸಿಕೊಂಡಿರುವನೂ, ಆದ ಆ ದೇವನನ್ನು ಅರಿತುಕೊಂಡವನು ಎಲ್ಲ ಪಾಶಗಳಿಂದಲೂ ಮುಕ್ತನಾಗುತ್ತಾನೆ.

ಏಷದೇವೋ ವಿಶ್ವಕರ್ಮಾ ಮಹಾತ್ಮಾ ಸದಾಜನಾನಾಂ
ಹೃದಯೇ ಸಂನಿವಿಷ್ಟಃ ।
ಹೃದಾಮನೀಷಾ ಮನಸಾಭಿಕ್ಲೃಪ್ತೋಯ ಏತತ್ ವಿದುರ
ಮೃತಾಸ್ತೇ ಭವನ್ತಿ ॥೧೭॥

ಈ ದೇವನು ವಿಶ್ವಕರ್ಮನು, ಮಹಾತ್ಮನು, ಜನರ ಹೃದಯಾಕಾಶವಲ್ಲಿ ಯಾವಾಗಲೂ ಸ್ಥಾಪಿತನಾಗಿರುತ್ತಾನೆ. ಇವನು ನಿಷೇಧೋಪದೇಶದಿಂದಲೂ, ವಿವೇಕ ಬುದ್ಧಿಯಿಂದಲೂ, ಏಕತ್ವಜ್ಞಾನದಿಂದಲೂ, ಅಭಿವ್ಯಕ್ತನಾಗುತ್ತಾನೆ. ಇದನ್ನು ಅರಿಯುವವರು ಅಮೃತರಾಗುತ್ತಾರೆ.

ಯದಾsತಮಸ್ತನ್ನ ದಿವಾನರಾತ್ರಿರ್ನ ಸನ್ನಚಾಸಂ ಛಿವಏವಕೇವಲಃ !
ತದಕ್ಷರಂ ತತ್ಸವಿತುರ್ವರೇಣ್ಯಂ ಪ್ರಜ್ಞಾಚತಸ್ಮಾತ್
ಪ್ರಸೃತಾಪುರಾಣೀ ॥೧೮॥

ಯಾವಾಗ ತಮಸ್ಸಿಲ್ಲದವನಾಗುವನೋ ಆಗ ಹಗಲಿರುವುದಿಲ್ಲ, ರಾತ್ರಿ ಇರುವುದಿಲ್ಲ, ಸತ್ ಆಗಲೀ ಅಸತ್ ಆಗಲಿ ಇರುವುದಿಲ್ಲ. ಕೇವಲ ಶಿವನೇ ಆಗಿರುತ್ತಾನೆ. ಆ ಪರತತ್ತ್ವವು ಅವಿನಾಶಿಯಾಗಿಯೂ, ಸವಿತೃ ಮಂಡಲದಲ್ಲಿರುವ ಅಭಿಮಾನಿ ದೇವತೆಗೆ ಪೂಜ್ಯವಾಗಿದ್ದು ಅನಾದಿಸಿದ್ಧವಾದ ಪ್ರಜ್ಞೆಯು ಅದರಿಂದಲೇ ಪ್ರಸೃತ ವಾಗಿರುತ್ತದೆ.

ನೈನಮೂರ್ಧ್ವಂ ನತಿರ್ಯಂಚನ ಮಧ್ಯೇ ಪರಿಜಗ್ರಭತ್ ।
ನತಸ್ಯ ಪ್ರತಿಮಾ ಅಸ್ತಿಯಸ್ಯ ನಾಮ ಮಹದ್ಯಶಃ ॥೧೯॥

ಯಾವನೂ ಇವನನ್ನು ಮೇಲಾಗಲಿ, ಅಡ್ಡವಾಗಿಯಾಗಲಿ, ಮಧ್ಯದಲ್ಲಿಯಾಗಲೀ, ಹಿಡಿಯಲು ಶಕ್ತನಾಗಲಾರನು. ಯಾವನ ಸರ್ವವ್ಯಾಪಿಯಾದ ಕೀರ್ತಿಯೇ ಅವನ ಹೆಸರೋ ಅಂತಹವನಿಗೆ ಯಾವ ಸರಿಸಮಾನರೂ ಇರುವುದಿಲ್ಲ.

ನ ಸಂದೃಶೇ ತಿಷ್ಠತಿ ರೂಪಮಸ್ಯ ನ ಚಕ್ಷುಷಾ ಪಶ್ಯತಿ ಕಶ್ಚನೈನಂ ।
ಹೃದಾ ಹೃದಿಸ್ಥಂ ಮನಸಾಯ ಏನ ಮೇವಂ ವಿದುರ ಮೃತಾಸ್ತೇ ಭವತಿ ॥೨೦॥

ಇವನ ರೂಪವು ಕಣ್ಣಿನಿಂದ ನೋಡಲಾಗುವುದಿಲ್ಲ ಮತ್ತು ಗ್ರಹಿಸಲು ಯೋಗ್ಯವಾದ ಪ್ರದೇಶದಲ್ಲೂ ನಿಲ್ಲುವುದಿಲ್ಲ. ಹೃದಯದಲ್ಲಿರುವ ಇವನನ್ನು ಶುದ್ಧಬುದ್ಧಿ ಇಂದಲೂ ಏಕತ್ವಜ್ಞಾನದಿಂದಲೂ, ಅರಿಯುವವರು ಅಮೃತರಾಗುತ್ತಾರೆ.

ಅಜಾತ ಇತ್ಯೇವಂ ಕಶ್ಚಿದ್ಭೀರುಃ ಪ್ರಪದ್ಯತೇ |
ರುದ್ರ ಯತ್ತೇ ದಕ್ಷಿಣ ಮುಖಂ ತೇನ ಮಾಂ ಪಾಹಿ ನಿತ್ಯಂ ||೨೧||

ಹೇ ರುದ್ರ ನೀನು ಜನ್ಮಾದಿರಹಿತನು. ಆದುದರಿಂದ ನನ್ನಂತಹ ಭೀರುವೊಬ್ಬನು ನಿನ್ನನ್ನೇ ಶರಣು ಹೋಗುತ್ತಾನೆ. ಉತ್ಸಾಹಜನಕವಾದ ನಿನ್ನ ಮುಖದ ಮೂಲಕ ನನ್ನನ್ನು ಯಾವಾಗಲೂ ಕಾಪಾಡು.

ಮಾನಸ್ತೋಕೇ ತನಯೇ ಮಾನ ಆಯುಷಿ ಮಾನೋಗೋಷು ಮಾನ
ಅಶ್ವೇಷು ರೀ ರಿಷಃ |
ವೀರಾನ್ಮಾನೋ ರುದ್ರಭಾಮಿತೋ ವಧೀರ್ಹವಿಷ್ಮಂತ
ಸದಮಿತ್ತ್ವಾಹ ವಾಮಹೇ ||೨೨||

ಹೇ ರುದ್ರ ನಮ್ಮ ಪುತ್ರಪೌತ್ರರ ವಿಷಯದಲ್ಲಿ ವಿನಾಶವನ್ನುಂಟುಮಾಡಬೇಡ, ನಮ್ಮ ಆಯುಸ್ಸಿನ ವಿಷಯದಲ್ಲಿ, ನಮ್ಮ ಗೋವುಗಳನ್ನು, ಕುದುರೆಗಳನ್ನು ನಮ್ಮ ಸೇವಕರುಗಳನ್ನು ಕ್ರೋಧದಿಂದ ವಧಿಸಬೇಡ, ನಿನ್ನನ್ನು ಯಾವಾಗಲೂ ಹವಿಸ್ಸಿನ ಮೂಲಕ ಆಹ್ವಾನಿಸುತ್ತೇವೆ.

## ಐದನೆಯ ಅಧ್ಯಾಯ

ದ್ವೇ ಅಕ್ಷರೇ ಬ್ರಹ್ಮಪರೇತ್ವನಂತೇ ವಿದ್ಯಾಽವಿದ್ಯೇ ನಿಹಿತೇ ಯತ್ರಗೂಢೇ |
ಕ್ಷರಂತ್ವ ವಿದ್ಯಾಹ್ಯ ಮೃತಂ ತು ವಿದ್ಯಾ ವಿದ್ಯಾಽವಿದ್ಯೇ ಈ
ಶತೇ ಯಸ್ತುಸೋಽನ್ಯಃ ||೧||

ಹಿರಣ್ಯಗರ್ಭನಿಗಿಂತ ಶ್ರೇಷ್ಟವೂ ಅನಂತವೂ ಆದ ಅಕ್ಷರದಲ್ಲಿ ವಿದ್ಯಾ ವಿದ್ಯೆಗಳೆರಡೂ ಗೂಢವಾಗಿ ಇಡಲ್ಪಟ್ಟಿದೆ. ಅವುಗಳ ಪೈಯ್ಕಿ ಅವಿದ್ಯೆಯು ಸಂಸಾರಕ್ಕೂ ವಿದ್ಯೆಯು ಮೋಕ್ಷಕ್ಕೂ ಕಾರಣವು. ವಿದ್ಯಾವಿದ್ಯೆಗಳನ್ನು ನಿಯಮಿಸುವ ಪರಮೇಶ್ವರನು ಅವುಗಳಿಗಿಂತ ಬೇರೆಯಾದವನು.

ಯೋ ಯೋನಿಂ ಯೋನಿಮಧಿತಿಷ್ಠತ್ಯೇಕೋ ವಿಶ್ವಾನಿ ರೂಪಾಣಿ
ಯೋನಿಶ್ಚ ಸರ್ವಾಃ |

ಋಷಿಂ ಪ್ರಸೂತಂ ಕಪಿಲಂ ಯಸ್ತಮಗ್ರೇ ಜ್ಞಾನೈರ್ಬಿಭರ್ತಿ
ಜಾಯ ಮಾನಂಚ ಪಶ್ಯೇತ್ ||೨||

ಅದ್ವಿತೀಯನಾದ ಪರಮೇಶ್ವರನು ಪೃಥ್ವಿಯೇ ಮೊದಲಾದ ಪ್ರತಿಯೊಂದು ಸ್ಥಾನವನ್ನೂ ನಿಯಮಿಸುತ್ತಿರುವನು. ಇವನೇ ಎಲ್ಲ ರೂಪಗಳಿಗೂ ಮತ್ತು ಎಲ್ಲ ಉತ್ಪತ್ತಿಸ್ಥಾನಗಳಿಗೂ ನಿಯಾಮಕನು. ಇವನು ಸೃಷ್ಠಿಗೆ ಮೊದಲು ಸರ್ವಜ್ಞನಾದ ಕಪಿಲನನ್ನು ಸೃಷ್ಟಿಸಿ ಅವನನ್ನು ಜ್ಞಾನಗಳಿಂದ ತುಂಬಿಸಿದನು ಮತ್ತು ಅವನು ಹುಟ್ಟುತ್ತಿರುವುದನ್ನೂ ನೋಡಿದನು.

ಏಕೈಕಂ ಜಾಲಂ ಬಹುಧಾ ವಿಕುರ್ವನ್ನಸ್ಮಿನ್ ಕ್ಷೇತ್ರೇ ಸಂಹರತ್ಯೇಷದೇವಃ |
ಭೂಯಃ ಸೃಷ್ಟ್ವಾ ಪತಯ ಸ್ತಥೇಶಃ ಸರ್ವಾಧಿಪತ್ಯಂ
ಕುರುತೇಮಹಾತ್ಮಾ ||೩||

ಈ ದೇವನು ಪ್ರತಿಯೊಂದು ಜಾಲವನ್ನೂ ಬಹು ವಿಧವಾಗಿ ರೂಪಾಂತರಿಸಿ ಈ ಕ್ಷೇತ್ರದಲ್ಲಿ ಉಪಸಂಹರಿಸುತ್ತಾನೆ. ಹಾಗೆಯೇ ಮಹಾತ್ಮನಾದ ಪರಮೇಶ್ವರನು ಲೋಕಪಾಲಕರನ್ನೂ ಸೃಷ್ಠಿಸಿ ಅವರೆಲ್ಲರ ಮೇಲೆ ಆಧಿಪತ್ಯವನ್ನೂ ಮಾಡುತ್ತಾನೆ.

ಸರ್ವಾದಿಶ ಊರ್ಧ್ವ ಮಧಶ್ಚ ತಿರ್ಯಕ್ ಪ್ರಕಾಶಯನ್ ಭ್ರಾಜತೇ
ಯದ್ವನಡ್ವಾನ್ |
ಏವಂ ಸದೇವೋ ಭಗವಾನ್ವರೇಣ್ಯೋ ಯೋನಿಸ್ವಭಾವಾನಧಿ ತಿಷ್ಠತ್ಯೇಕಃ ||೪||

ಹೇಗೆ ಆದಿತ್ಯನು ಎಲ್ಲಾ ದಿಕ್ಕುಗಳನ್ನೂ ಮೇಲಿನಿಂದ, ಕೆಳಗಿನಿಂದ, ಪಾರ್ಶ್ವಾದಿಗಳಿಂದ ಪ್ರಕಾಶಪಡಿಸುತ್ತ ಬೆಳಗುತ್ತಾನೆಯೋ ಹಾಗೆಯೇ ಭಗವಂತನಾದ, ವರಣೀಯನಾದ, ಅದ್ವಿತೀಯನಾದ, ಆ ದೇವನು ಯೋನಿ ಸ್ವಭಾವಗಳನ್ನು ನಿಯಮಿಸುತ್ತಾನೆ.

ಯಚ್ಚಸ್ವಭಾವಂ ಪಚತಿ ವಿಶ್ವಯೋನಿಃ ಪಾಚ್ಯಾಂಶ್ಚ ಸರ್ವಾನ್
ಪರಿಣಾಮಯೇದ್ಯಃ |
ಸರ್ವಮೇತದ್ವಿಶ್ವ ಮಧಿತಿಷ್ಠತ್ಯೇಕೋ ಗುಣಾಂಶ್ಚಸರ್ವಾನ್
ವಿನಿಯೋಜಯೇದ್ಯಃ ||೫||

ಯಾವ ಜಗತ್ಕಾರಣನು ಆಯಾಯಾ ಸ್ವಭಾವಗಳನ್ನುಂಟುಮಾಡುತ್ತಾನೋ ಮತ್ತು ಯಾವನು ಪರಿಣಾಮ ಯೋಗ್ಯವಾದ ಎಲ್ಲವನ್ನೂ ಪರಿಣಾಮ ಹೊಂದುವಂತೆ

ಮಾಡುತ್ತಾನೋ, ಅವನು ಈ ವಿಶ್ವವೆಲ್ಲವನ್ನೂ ತಾನೊಬ್ಬನೇ ಆಳುತ್ತಾನೆ. ಮತ್ತು ಸತ್ವಾದಿಗುಣಗಳನ್ನು ನಿಯೋಜಿಸುತ್ತಾನೆ.

ತದ್ವೇದ ಗುಹ್ಯೋಪನಿಷತ್ಸುಗೂಢಂ ತದ್ಬ್ರಹ್ಮಾ ವೇದತೇ ಬ್ರಹ್ಮಯೋನಿಂ |
ಯೇ ಪೂರ್ವದೇವಾ ಋಷಯಶ್ಚ ತದ್ವಿದುಸ್ತೇ ತನ್ಮಯಾ
ಅಮೃತಾ ವೈ ಬಭೂವುಃ ||೬||

ಆ ಆತ್ಮ ಸ್ವರೂಪವು ವೇದಗಳ ರಹಸ್ಯ ಭಾಗಗಳಾದ ಉಪನಿಷತ್ತುಗಳಲ್ಲಿ ಅಡಗಿದೆ. ಆ ಬ್ರಹ್ಮ ಯೋನಿಯನ್ನು ಹಿರಣ್ಯಗರ್ಭನು ಅರಿತಿರುತ್ತಾನೆ. ಹಿಂದಿನ ದೇವತೆಗಳಲ್ಲಿ ಮತ್ತು ಋಷಿಗಳಲ್ಲಿ ಯಾರು ಅದನ್ನು ಅರಿತುಕೊಂಡರೋ ಅವರು ಅದನ್ನೇ ಆತ್ಮ ವಾಗಿ ಹೊಂದಿ ಅಮೃತತ್ವವನ್ನು ಪಡೆದರು.

ಗುಣಾನ್ವಯೋ ಯಃ ಫಲಕರ್ಮಕರ್ತಾಕೃತಸ್ಯ ತಸ್ಯೈವಸಚೋಪಭೋಕ್ತಾ |
ಸವಿಶ್ವರೂಪ ಸ್ತ್ರಿಗುಣ ಸ್ತ್ರಿವರ್ತ್ಮಾಪ್ರಾಣಾಧಿಪಃ ಸಂಚರತಿಸ್ವ ಕರ್ಮಭಿಃ ||೭||

ಯಾವನು ಗುಣಗಳೊಡನೆ ಸಂಬಂಧವನ್ನು ಪಡೆದಿರುವನೋ, ಫಲಕ್ಕಾಗಿ ಕರ್ಮ ವನ್ನು ಮಾಡುವನೋ, ಅವನೇ ತಾನು ಮಾಡಿದ ಕರ್ಮದ ಫಲವನ್ನು ಅನುಭವಿಸು ವವನೂ ಆಗಿರುತ್ತಾನೆ. ಅವನು ನಾನಾ ರೂಪನು ; ತ್ರಿಗುಣಗಳುಳ್ಳವನು ಮತ್ತು ಮೂರು ಮಾರ್ಗಗಳಲ್ಲೂ ಸಂಚರಿಸುವವನು. ಪಂಚಪ್ರಾಣಗಳಿಗೆ ಒಡೆಯ ನಾದ ಆ ಜೀವನು ತನ್ನ ಕರ್ಮಫಲವನ್ನು ಭೋಗಿಸುತ್ತಾನೆ.

ಅಂಗುಷ್ಠಮಾತ್ರೋ ರವಿತುಲ್ಯರೂಪಃ ಸಂಕಲ್ಪಾಹಂಕಾರ ಸಮನ್ವಿತೋಯಃ |
ಬುದ್ಧೇರ್ಗುಣೇ ನಾತ್ಮಗುಣೇ ನಚೈವ ಆರಾಗ್ರ ಮಾತ್ರೋಹ್ಯ
ಪರೋಽಪಿದೃಷ್ಟಃ ||೮||

ಯಾವನು ಅಂಗುಷ್ಠ ಪರಿಮಾಣವುಳ್ಳವನೋ, ಸೂರ್ಯನಿಗೆ ಸಮಾನವಾದ ಕಾಂತಿ ಯುಳ್ಳವನೋ, ಸಂಕಲ್ಪ–ಅಹಂಕಾರಗಳಿಂದ ಕೂಡಿರುವನೋ, ಬುದ್ಧಿ ಮತ್ತು ಶರೀರದ ಗುಣಗಳಿಂದ ಕೂಡಿರುವನೋ, ಅಂತಹ ಇನ್ನೊಬ್ಬನಾದ ಜೀವಾತ್ಮನು ಅಂಕುಶದ ಮೊನೆಯಂತೆ ಸೂಕ್ಷ್ಮವಾಗಿ ಕಂಡುಬರುತ್ತಾನೆ.

ವಾಲಾಗ್ರ ಶತಭಾಗಸ್ಯ ಶತಧಾ ಕಲ್ಪಿತಸ್ಯಚ |
ಭಾಗೋಜೀವಃ ಸವಿಜ್ಞೇಯಃ ಸಚಾನಂತ್ಯಾಯ ಕಲ್ಪತೇ ||೯||

ಕೂದಲೆಳೆಯ ತುದಿಯನ್ನು ನೂರಾಗಿ ಭಾಗಿಸಿ ಅದರ ಒಂದು ಭಾಗವನ್ನು ಪುನಃ ನೂರಾಗಿ ಭಾಗಿಸಿದರೆ ಎಷ್ಟು ಸೂಕ್ಷ್ಮವಾದ ಅಣುವಾಗುವುದೋ ಅಷ್ಟೇ ಸೂಕ್ಷ್ಮನು ಜೀವಾತ್ಮನು, ಎಂದು ತಿಳಿಯಬೇಕು. ಆದರೂ ಅವನು ಅನಂತನೇ.

ನೈವ ಸ್ತ್ರೀ ನ ಪುಮಾನೇಷ ನ ಚೈವಾಯಂ ನಪುಂಸಕಃ |
ಯದ್ಯಚ್ಛರೀರ ಮಾದತ್ತೇ ತೇನತೇನ ಸರಕ್ಷ್ಯತೇ ||೧೦||

ಇವನು ಸ್ತ್ರೀಯಲ್ಲ, ಪುರುಷನಲ್ಲ, ನಪುಂಸಕನೂ ಅಲ್ಲ, ಅವನು ಯಾವ ಶರೀರವನ್ನು ತೆಗೆದುಕೊಳ್ಳುತ್ತಾನೋ ಅದರಿಂದ ರಕ್ಷಿಸಲ್ಪಡುತ್ತಾನೆ.

ಸಂಕಲ್ಪ ನ ಸ್ಪರ್ಶನ ದೃಷ್ಟಿ ಮೋಹೈಃ ಗ್ರಾಸಾಂಬು ವೃಷ್ಟ್ಯಾ
ಚಾತ್ಮವಿವೃದ್ಧಿ ಜನ್ಮ |
ಕರ್ಮಾನುಗಾನ್ಯನು ಕ್ರಮೇಣ ದೇಹೀ ಸ್ಥಾನೇಷು
ರೂಪಾಣ್ಯಭಿ ಸಂಪ್ರಪದ್ಯತೇ ||೧೧||

ಹೇಗೆ ಅನ್ನಪಾನಾದಿಗಳು ಶರೀರ ವೃದ್ಧಿಗೆ ಕಾರಣಗಳಾಗುತ್ತದೆಯೋ ಹಾಗೆ ಸಂಕಲ್ಪ, ಸ್ಪರ್ಶ, ದೃಷ್ಟಿ, ಮೋಹಗಳು ಶುಭಾಶುಭ ಕರ್ಮಗಳಿಗೆ ಕಾರಣವಾಗುತ್ತದೆ. ಮನುಷ್ಯನು ಕರ್ಮಪರಿಪಾಕದ ಅಪೇಕ್ಷೆ ಇಂದ ದೇವ, ತಿರ್ಯಕ್, ಮನುಷ್ಯ ಎಂಬ ಸ್ಥಾನಗಳಲ್ಲಿ ತನ್ನ ಕರ್ಮಕ್ಕೆ ಅನುಸಾರವಾದ ರೂಪಗಳನ್ನು ಹೊಂದುತ್ತಾನೆ.

ಸ್ಥೂಲಾನಿ ಸೂಕ್ಷ್ಮಾನಿ ಬಹೂನಿಚೈವ ರೂಪಾಣಿದೇಹಿಸ್ವಗುಣೈರ್ವೃಣೋತಿ |
ಕ್ರಿಯಾಗುಣೈ ರಾತ್ಮಗುಣೈಶ್ಚ ತೇಷಾಂ ಸಂಯೋಗ ಹೇತುಂ
ರಪರೋಽಪಿದೃಷ್ಟಃ ||೧೨||

ಜೀವಾತ್ಮನು ಸ್ಥೂಲವೂ ಸೂಕ್ಷ್ಮವೂ ಆದ ಬಹುರೂಪಗಳನ್ನು ತನ್ನ ಗುಣಗಳಿಗನುಸಾರವಾಗಿ ಧರಿಸುತ್ತಾನೆ. ಕ್ರಿಯಾಗುಣಗಳಿಂದಲೂ, ಶರೀರದ ಗುಣಗಳಿಂದಲೂ, ಅವುಗಳ ಸಂಯೋಗಕ್ಕೆ ಕಾರಣನಾಗಿ ಮತ್ತೊಬ್ಬನಂತೆ ಕಂಡುಬರುತ್ತಾನೆ.

ಅನಾದ್ಯನಂತಂ ಕಲಿಲಸಮಧ್ಯೇ ವಿಶ್ವಸ್ಯ ಸ್ರಷ್ಟಾರಮನೇಕರೂಪಂ |
ವಿಶ್ವಸ್ಯೈಕಂ ಪರಿವೇಷ್ಟಿತಾರಂ ಜ್ಞಾತ್ವಾದೇವಂ ಮುಚ್ಯತೇ
ಸರ್ವಪಾಶೈಃ ||೧೩||

ಗಹನ ಗಂಭೀರವಾದ ಸಂಸಾರದ ಮಧ್ಯದಲ್ಲಿ ಆದ್ಯಂತರಹಿತನೂ, ವಿಶ್ವದ ಕರ್ತೃವೂ, ಬಹುರೂಪಕನೂ, ವಿಶ್ವದ ಏಕಮಾತ್ರ ವ್ಯಾಪಕನೂ, ಆದ ಪರಮಾತ್ಮನನ್ನು ಜೀವನು ಅರಿತುಕೊಂಡಾಗ ಸರ್ವಪಾಶಗಳಿಂದ ಮುಕ್ತನಾಗುತ್ತಾನೆ.

ಭಾವಗ್ರಾಹ್ಯಮನೀ ಡಾಖ್ಯಂ ಭಾವಭಾವ ಕರಂ ಶಿವಂ |
ಕಲಾಸರ್ಗ ಕರಂ ದೇವಂ ಯೇ ವಿದುಸ್ತೇ ಜುಹುಸ್ತನುಂ ||೧೪||

ಯಾರು ವಿಶುದ್ಧಾಂತಃಕರಣ ಗೋಚರನಾದ, ಅಶರೀರನೆಂಬ ಹೆಸರುಳ್ಳ, ಭಾವ, ಅಭಾವಗಳನ್ನುಂಟುಮಾಡುವವನಾದ, ಶುದ್ಧನಾದ, ಕಲೆಗಳನ್ನು ಸೃಷ್ಟಿಸುವನಾದ, ಆ ದೇವನನ್ನು ಅರಿತುಕೊಳ್ಳುವರೋ ಅವರು ಶರೀರವನ್ನು ತ್ಯಜಿಸುತ್ತಾರೆ.

## ಆರನೆಯ ಅಧ್ಯಾಯ

ಸ್ವಭಾವಮೇಕೇಕ ವಯೋವದಸ್ತಿ ಕಾಲಂ ಕಥಾನ್ಯೇ ಪರಿಮುಹ್ಯಮಾನಃ |
ದೇವಸ್ಯೈಷ ಮಹಿಮಾತುಲೋಕೇ ಯೇ ನೇದಂಬ್ರಾಮ್ಯತೇ ಬ್ರಹ್ಮಚಕ್ರಂ ||೧||

ಕೆಲವರು ಮೇಧಾವಿಗಳು ವಸ್ತುವಿನ ಸ್ವಭಾವವನ್ನು ಜಗತ್ಕಾರಣವೆಂದು ಹೇಳುತ್ತಾರೆ. ಹಾಗೆಯೇ ಅವಿವೇಕಿಗಳಾದ ಕೆಲವರು ಕಾಲವನ್ನು ಜಗತ್ಕಾರಣವೆನ್ನುತ್ತಾರೆ. ಆದರೆ ಲೋಕದಲ್ಲಿ ಯಾವುದು ಈ ಬ್ರಹ್ಮಚಕ್ರವನ್ನು ಸುತ್ತಿಸುವುದೋ ಅದೇ ದೇವನ ಮಹಿಮೆ.

ಯೇ ನಾವೃತಂ ನಿತ್ಯಮಿದಂ ಹಿ ಸರ್ವಂಜ್ಞಃ ಕಾಲಕಾರೋ
ಗುಣೀಸರ್ವ ವಿದ್ಯಃ |
ತೇನೇಶಿತಂ ಕರ್ಮ ವಿವರ್ತತೇಹ ಪೃಥಿವ್ಯಪ್ತೇ ಜೋ
ಽನಿಲಖಾನಿ ಚಿಂತ್ಯಂ ||೨||

ಯಾವನಿಂದ ಈ ಜಗತ್ತೆಲ್ಲವೂ ಸರ್ವದಾ ವ್ಯಾಪ್ತವಾಗಿದೆಯೋ ಯಾವನು ಜ್ಞಾನ ಸ್ವರೂಪನೂ, ಕಾಲಕ್ಕೆ ಕರ್ತೃವೂ, ಗುಣವುಳ್ಳವನೂ, ಮತ್ತು ಸರ್ವಜ್ಞನೋ, ಅವನಿಂದ ಪ್ರೇರಿತವಾಗಿ ಕರ್ಮವು ಪೃಥ್ವಿ, ನೀರು, ತೇಜಸ್ಸು, ವಾಯು, ಆಕಾಶಗಳ ರೂಪಿನಿಂದ ತೋರಿಸಿಕೊಳ್ಳುತ್ತದೆ ಎಂದು ತಿಳಿಯಬೇಕು,

ತತ್ಕರ್ಮ ಕೃತ್ವಾ ವಿನಿವರ್ತ್ಯಭೂಯಸ್ತತ್ತ್ವಸ್ಯ ತತ್ತ್ವೇನ
ಸಮೇತ್ಯಯೋಗಂ |
ಏಕೇನದ್ವಾಭ್ಯಾಂ ತ್ರಿಭಿರಷ್ಟಭಿರ್ವಾ ಕಾಲೇನ ಚೈವಾತ್ಮ
ಗುಣ್ಯೈಶ್ಚ ಸೂಕ್ಷ್ಮೈತಿಃ ||೩||

ಈಶ್ವರನು ಆ ಕರ್ಮವನ್ನು ಮಾಡಿ, ಅದನ್ನು ಪುನಃ ನಿರೀಕ್ಷಿಸಿ, ಆತ್ಮತತ್ತ್ವವನ್ನು ಪ್ರಕೃತಿ ತತ್ತ್ವಗಳೊಂದಿಗೆ ಸೇರಿಸುತ್ತಾನೆ. ಎಂದರೆ ಒಂದನ್ನು, ಎರಡನ್ನು, ಮೂರನ್ನು ಅಥವಾ ಎಂಟನ್ನು, ಹಾಗೆಯೇ ಕಾಲವನ್ನು ಮತ್ತು ಸೂಕ್ಷ್ಮವಾದ ಬುದ್ಧಿಯ ಗುಣಗಳನ್ನೂ ಆತ್ಮನೊಂದಿಗೆ ಸೇರಿಸುತ್ತಾನೆ.

ಆರಭ್ಯ ಕರ್ಮಾಣಿ ಗುಣಾನ್ವಿತಾನಿ ಭಾವಾಂಶ್ಚ ಸರ್ವಾನ್
ವಿನಿಯೋಜಯೇದ್ಯಃ ।
ತೇಷಾಮಭಾವೇ ಕೃತಕರ್ಮನಾಶಃ ಕರ್ಮಕ್ಷಯೇ ಯಾತಿ
ಸ ತತ್ತ್ವತೋಽನ್ಯಃ ॥೪॥

ಯಾವನು ಸತ್ತ್ವಾದಿಗುಣಗಳಿಂದ ಕೂಡಿದ ಕರ್ಮಗಳನ್ನು ಮಾಡಿ ತನ್ನ ಎಲ್ಲಾ ಭಾವಗಳನ್ನು ಈಶ್ವರನಲ್ಲಿ ಸಮರ್ಪಿಸುತ್ತಾನೋ ಅವನಿಗೆ ಅವುಗಳ ಆತ್ಮ ಸಂಬಂಧವು ನಿಂತುಹೋಗುತ್ತದೆ. ಆಗ ತಾನು ಹಿಂದೆ ಮಾಡಿದ್ದ ಕರ್ಮಗಳನ್ನು ನಾಶಪಡಿಸಿಕೊಳ್ಳುತ್ತಾನೆ. ಕರ್ಮಕ್ಷಯವಾಗಲು ತತ್ತ್ವಕ್ಕಿಂತ ಬೇರೆಯಾದ ಈಶ್ವರ ನನ್ನು ಹೊಂದುತ್ತಾನೆ.

ಆದಿಃ ಸ ಸಂಯೋಗ ನಿಮಿತ್ತಹೇತುಃ ಪರಸ್ತ್ರಿ ಕಾಲಾದ ಕಲೋಽಪಿ ದೃಷ್ಟಃ ।
ತಂ ವಿಶ್ವರೂಪಂ ಭವಭೂತಮೀಡ್ಯಂ ದೇವಂ ಸ್ವಚಿತ್ತ
ಸ್ಥ ಮುಪಾಸ್ಯಪೂರ್ವಂ ॥೫॥

ಆ ಪರಮೇಶ್ವರನು ಸರ್ವಕಾರಣನು, ಸಂಯೋಗದ ನಿಮಿತ್ತಗಳಿಗೆ ಹೇತುವು. ತ್ರಿಕಾಲಗಳನ್ನು ಮೀರಿದವನು. ನಿಷ್ಕಲನಾಗಿದ್ದರೂ ಜ್ಞಾನಿಗಳಿಂದ ನೋಡಲ್ಪಟ್ಟಿದ್ದಾನೆ. ವಿಶ್ವರೂಪನೂ, ಭವನೂ, ಸತ್ಯಸ್ವರೂಪನೂ, ಸ್ತುತ್ಯರ್ಹನೂ, ತನ್ನ ಚಿತ್ತದಲ್ಲಿರುವವನೂ, ಆದ ಆ ದೇವನನ್ನು ಮೊದಲು ಉಪಾಸಿಸಿ ಮುಮುಕ್ಷುವನ್ನು ಸೇರುತ್ತಾನೆ.

ಸವೃಕ್ಷ ಕಾಲಾಕೃತಿಭಿಃ ಪರೋಽನ್ಯೋ ಯಸ್ಮಾತ್ ಪ್ರಪಂಚಃ
ಪರಿವರ್ತತೇಽಯಂ ।
ಧರ್ಮಾವಹಂ ಪಾಪನುದಂ ಭಗೇಶಂ ಜ್ಞಾತ್ವಾಽತ್ಮ
ಸ್ಥಮಮೃತಂ ವಿಶ್ವಧಾಮ ॥೬॥

ಯಾವ ಪರಮೇಶ್ವರನಿಂದ ಈ ಪ್ರಪಂಚವು ಸುತ್ತುತ್ತಿರುವುದೋ ಅವನು ಸಂಸಾರ ವೃಕ್ಷದ ಮತ್ತು ಕಾಲದ ಆಕಾರಗಳಿಂದ ಶ್ರೇಷ್ಠನು, ಮತ್ತು ವಿಲಕ್ಷಣನು. ಧರ್ಮ

ಪ್ರಾಪಕನೂ, ಪಾಪನಾಶಕನೂ, ಷಡ್ಭೈಶ್ವರ್ಯಗಳಿಗೆ ಅಧಿಪತಿಯೂ, ಬುದ್ಧಿ ಗುಹೆಯಲ್ಲಿ ನೆಲಸಿರುವನೂ, ಅಮೃತನೂ, ವಿಶ್ವಾಧಾರನೂ, ಆದ ಪರಮೇಶ್ವರನನ್ನು ಅರಿತುಕೊಂಡು ಅವನನ್ನೇ ಸೇರುತ್ತಾರೆ.

ತಮೀಶ್ವರಾಣಾಂ ಪರಮಂ ಮಹೇಶ್ವರಂ ತಂದೇವತಾನಾಂ
ಪರಮಂಚದೈವತಂ ।
ಪತಿಂ ಪತೀನಾಂ ಪರಮಂಪರಸ್ತಾದ್ ವಿದಾಮದೇವಂ
ಭುವನೇಶಮೀಡ್ಯಂ ॥೭॥

ವೈವಸ್ವತ, ಯಮ, ಮೊದಲಾದವರಿಗೆ ಶ್ರೇಷ್ಠನಾದ, ಇಂದ್ರಾದಿ ದೇವತೆಗಳಿಗೆ ಪರದೈವವಾದ, ಪ್ರಜಾಪತಿಗಳಿಗೆ ಪತಿಯಾದ, ಓಂ ಕಾರಕ್ಕಿಂತಲೂ ಶ್ರೇಷ್ಠನಾದ, ಭುವನೇಶ್ವರನಾದ, ಸ್ತುತ್ಯರ್ಹನಾದ, ಆ ದೇವನನ್ನು ನಾವು ಅರಿತಿರುತ್ತೇವೆ.

ನತಸ್ಯಕಾಯಂ ಕರಣಂಚವಿದ್ಯತೇ ನತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ ।
ಪರಾಽಸ್ಯಶಕ್ತಿ ರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನ
ಬಲಕ್ರಿಯಾಚ ॥೮॥

ಅವನಿಗೆ ಶರೀರವಿರುವುದಿಲ್ಲ, ಇಂದ್ರಿಯುಗಳೂ ಇರುವುದಿಲ್ಲ. ಅವನಿಗಿಂತ ಅಧಿಕನಾಗಲೀ ಸಮಾನನಾಗಲೀ ಕಂಡುಬರುವುದಿಲ್ಲ. ಅವನ ಪರಾಶಕ್ತಿಯನ್ನು ವಿವಿಧ ಪ್ರಕಾರವಾಗಿ ಹೇಳಿದೆ. ಅದು ಸ್ವಾಭಾವಿಕವೂ, ಜ್ಞಾನಕ್ರಿಯೆಯೂ, ಬಲಕ್ರಿಯೆಯೂ ಆಗಿದೆ.

ನತಸ್ಯ ಕಶ್ಚಿತ್ ಪತಿರಸ್ತಿಲೋಕೇ ನಚೇಶಿತಾನೈವ ಚತಸ್ಯಲಿಂಗಂ ।
ಸಕಾರಣಂ ಕರಣಾಧಿಪಾಧಿಪೋ ನಚಾಸ್ಯ ಕಶ್ಚಿಜ್ಜನಿತಾ ನಚಾಧಿಪಃ ॥೯॥

ಲೋಕದಲ್ಲಿ ಅವನಿಗೆ ಒಡೆಯನಾದವನು ಯಾವನೂ ಇಲ್ಲ ಅವನಿಗೆ ಈಶ್ವರನಾದವನೂ ಯಾರೂ ಇಲ್ಲ. ಅವನ ಅನುಮಾನಕ್ಕೆ ಉಪಾಯವಾದ ಹೇತುವೂ ಇಲ್ಲ. ಅವನು ಸರ್ವಕಾರಣನು. ಅವನು ಇಂದ್ರಿಯಾಧೀಶನಾದ ಜೀವಾತ್ಮನಿಗೂ ಒಡೆಯನು. ಅವನಿಗೆ ಜನಕನೂ, ಅಧಿಪತಿಯೂ ಯಾರೂ ಇಲ್ಲ.

ಯಸ್ತಂತುನಾಭ ಇವತಂತುಭಿಃ ಪ್ರಧಾನ ಜೈಃಸ್ವಭಾವತೋ
ದೇವ ಏಕಃ ಸ್ವಮಾವೃಣೋತ್ ।
ಸನೋದಧಾತು ಬ್ರಹ್ಮಾಪ್ಯಯಂ ॥೧೦॥

ಅದ್ವಿತೀಯನಾದ ಆ ದೇವನು ತನ್ನ ಸ್ವಭಾವದಿಂದಲೇ ಜೇಡರ ಹುಳುವಿನಂತೆ ಪ್ರಧಾನದಿಂದ ಹುಟ್ಟಿದ ನೂಲುಗಳಿಂದ ತನ್ನನ್ನು ತಾನೇ ಮುಚ್ಚಿಕೊಂಡಿರುತ್ತಾನೆ. ಆ ಮಹಾದೇವನು ನಮಗೆ ಬ್ರಹ್ಮೈಕ್ಯಭಾವವನ್ನು ಕೊಡಲಿ.

ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ
ಸರ್ವಭೂತಾಂತರಾತ್ಮಾ ।
ಕರ್ಮಾಧ್ಯಕ್ಷಃ ಸರ್ವಭೂತಾಧಿ ವಾಸಃ ಸಾಕ್ಷೀ ಚೇತಾ
ಕೇವಲೋ ನಿರ್ಗುಣಶ್ಚ ॥೧೧॥

ಯಾವ ಅದ್ವಿತೀಯನಾದ ದೇವನು ಎಲ್ಲಾ ಪ್ರಾಣಿಗಳಲ್ಲೂ ಗೂಢನಾಗಿದ್ದು ಸರ್ವ ವ್ಯಾಪಿಯಾಗಿಯೂ, ಸರ್ವಪ್ರಾಣಿಗಳ ಅಂತರಾತ್ಮನಾಗಿಯೂ, ತಾವು ಮಾಡುವ ಕರ್ಮಗಳಿಗೆ ತಕ್ಕ ಫಲಗಳನ್ನು ಕೊಡುವವನಾಗಿಯೂ, ಸರ್ವ ಪ್ರಾಣಿಗಳಲ್ಲಿ ವಾಸಿಸುತ್ತಿರುವನೂ, ಸರ್ವಕ್ಕೂ ಸಾಕ್ಷಿಯಾಗಿದ್ದು ಎಲ್ಲರಿಗೂ ಚೈತನ್ಯದಾಯಕನೂ ನಿರುಪಾಧಿಕನೂ, ಸತ್ವಾದಿಗುಣರಹಿತನೂ ಆಗಿರುತ್ತಾನೆ.

ಏಕೋವಶೀ ನಿಷ್ಕ್ರಿಯಾಣಾಂ ಬಹೂನಾಮೇಕಂ ಬೀಜಂ
ಬಹುಧಾಯಃ ಕರೋತಿ ।
ತಮಾತ್ಮಸ್ಥಂ ಯೇಽನುಪಶ್ಯನ್ತಿ ಧೀರಾಸ್ತೇಷಾಂ
ಸುಖಂ ಶಾಶ್ವತಂ ನೇತರೇಷಾಂ ॥೧೨॥

ನಿಷ್ಕ್ರಿಯರಾದ ಬಹುಜೀವರಲ್ಲಿ ಅವನು ಅದ್ವಿತೀಯನು. ಯಾವನು ಒಂದೇ ಬೀಜದಲ್ಲಿ ಬಹುಪ್ರಕಾರವನ್ನು ಮಾಡುತ್ತಾನೆಯೋ, ಬುದ್ಧಿಯಲ್ಲಿ ನೆಲೆಸಿದ್ದ ಪರಮೇಶ್ವರನಾಗಿರುವ ಇವನನ್ನು ಯಾವ ಬುದ್ಧಿವಂತರು ಸಾಕ್ಷಾತ್ಕರಿಸಿಕೊಳ್ಳು ವರೋ ಅವರಿಗೇ ಶಾಶ್ವತ ಸುಖವು ದೊರಕುವುದೇ ಹೊರತು ಇತರರಿಗಲ್ಲ.

ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ ಏಕೋಬಹೂನಾಂ
ಯೋವಿದಧಾತಿ ಕಾಮಾನ್ ।
ತತ್ಕಾರಣಂ ಸಾಂಖ್ಯಯೋಗಾದಿಗಮ್ಯಂ ಜ್ಞಾತ್ವಾದೇವಂ ಮುಚ್ಯತೇ
ಸರ್ವಪಾಶೈಃ ॥೧೩॥

ಯಾವನು ನಿತ್ಯರಲ್ಲಿ ನಿತ್ಯನೋ, ಚೇತನರಲ್ಲಿ ಚೇತನನೋ, ಒಬ್ಬನೇ ಆಗಿದ್ದರೂ ಬಹುಜೀವರಿಗೆ ಭೋಗಗಳನ್ನು ಕೊಡುವವನೋ, ಸಾಂಖ್ಯಯೋಗದಿಂದ ಹೊಂದ

ಲ್ಪಡುವವನೋ ಸರ್ವಕಾರಣನಾದ ಆ ದೇವನನ್ನು ಅರಿತುಕೊಂಡು ಎಲ್ಲ ಪಾಶ ಗಳಿಂದಲೂ ಬಿಡುಗಡೆ ಹೊಂದುತ್ತಾನೆ.

ನತತ್ರ ಸೂರ್ಯೋಭಾತಿ ನ ಚಂದ್ರತಾರಕಂ ನೇಮಾಂವಿದ್ಯುತೋ
ಭಾಂತಿ ಕುತೋಽಯ ಮಗ್ನಿಃ |
ತಮೇವಭಾಂತ ಮನುಬಾತಿ ಸರ್ವಂ ತಸ್ಯಭಾಸಾ ಸರ್ವಮಿದಂ ವಿಭಾತಿ ||೧೪||

ಆ ಪರಮಾತ್ಮನಲ್ಲಿ ಸೂರ್ಯನಾಗಲೀ, ಚಂದ್ರನಾಗಲೀ, ನಕ್ಷತ್ರಗಳಾಗಲೀ ಪ್ರಕಾಶಿಸುವುದಿಲ್ಲವೆಂದಮೇಲೆ ಅಗ್ನಿಯು ಪ್ರಕಾಶಿಸುವುದೆಲ್ಲಿ? ಪ್ರಕಾಶಿಸುತ್ತಿರುವ ಅವನನ್ನೇ ಅನುಸರಿಸಿ ಎಲ್ಲವೂ ಪ್ರಕಾಶಿಸುತ್ತಿರುವುದು. ಅವನ ಪ್ರಕಾಶದಿಂದಲೇ ಇದೆಲ್ಲವೂ ಪ್ರಕಾಶಿಸುತ್ತಿವೆ.

ಏಕೋ ಹಂಸೋ ಭುವನಸ್ಯಾಸ್ಯಮಧ್ಯೇ ಸ ಏವಾಗ್ನಿಃ ಸಲಿಲೇ ಸಂನಿವಿಷ್ಟಃ |
ತಮೇವ ವಿದಿತ್ವಾಽತಿ ಮೃತ್ಯುಮೇತಿ ನಾನ್ಯಃಪಂಥಾ
ವಿದ್ಯತೇಽಯನಾಯ ||೧೫||

ಪರಮೇಶ್ವರನು ಈ ತ್ರಿಲೋಕ ಮಧ್ಯದಲ್ಲಿ ಏಕಹಂಸನಾಗಿರುತ್ತಾನೆ. ಅವನೇ ನೀರಿನಲ್ಲಿ ಐಕ್ಯವಾಗಿರುವ ಅಗ್ನಿಯು. ಅವನನ್ನು ಅರಿತುಕೊಂಡವನು ಮೃತ್ಯುವನ್ನು ದಾಟುತ್ತಾನೆ. ಇದನ್ನು ಬಿಟ್ಟರೆ ಮೋಕ್ಷಕ್ಕೆ ಬೇರೆ ದಾರಿ ಇರುವುದಿಲ್ಲ.

ಸವಿಶ್ವ ಕೃದ್ವಿಶ್ವ ವಿದಾತ್ಮ ಯೋನಿಜ್ಞಃ ಕಾಲಕಾರೋ ಗುಣೀಸರ್ವವಿದ್ಯಃ |
ಪ್ರಧಾನ ಕ್ಷೇತ್ರಜ್ಞ ಪತಿರ್ಗುಣೇಶಃ ಸಂಸಾರಮೋಕ್ಷ ಸ್ಥಿತಿಬಂಧಹೇತುಃ ||೧೬||

ಯಾವನು ಪ್ರಧಾನಕ್ಕೂ ಜೀವಾತ್ಮನಿಗೂ ಪಾಲಕನೋ, ಸತ್ವಾದಿ ಗುಣಗಳ ಒಡೆಯನೋ, ಸಂಸಾರ ಮೋಕ್ಷ ಸ್ಥಿತಿ ಮತ್ತು ಬಂಧನಗಳಿಗೆ ಕಾರಣನೋ ಅವನೇ ವಿಶ್ವದ ಕರ್ತೃವು, ಸರ್ವಜ್ಞನು, ಆತ್ಮಯೋನಿಯು, ಅರಿಯುವವನು, ಕಾಲದ ಕರ್ತೃವು, ಗುಣಗಳುಳ್ಳವನು ಮತ್ತು ಸರ್ವವಿದನು.

ಸತನ್ಮಯೋಹ್ಯಮೃತ ಈಶ ಸಂಸ್ಥೋ ಜ್ಞಃ ಸರ್ವಗೋ
ಭುವನಸ್ಯಾಸ್ಯಗೋಪ್ತಾ |
ಯ ಈಶೇಽಸ್ಯ ಜಗತೋನಿತ್ಯಮೇವ ನಾನ್ಯೋಹೇತುರ್ವಿದ್ಯತ
ಈಶನಾಯ ||೧೭||

ಯಾವನು ಈ ಜಗತ್ತನ್ನು ಯಾವಾಗಲೂ ಆಳುತ್ತಾನೋ ಅವನು ವಿಶ್ವಾತ್ಮ ನಾಗಿಯೇ ಇರುತ್ತಾನೆ. ಅವನು ಅಮೃತನು. ತನ್ನ ಈಶ್ವರನಲ್ಲಿ ಪ್ರತಿಷ್ಠಿತ ನಾಗಿರುತ್ತಾನೆ. ಅವನು ಜ್ಞಾತೃ, ಸರ್ವತ್ರಗಾಮಿಯು ಮತ್ತು ಈ ಭುವನದ ಪಾಲಕನು. ಈ ಜಗತ್ತನ್ನು ಆಳಲು ಅವನನ್ನು ಬಿಟ್ಟರೆಬೇರೆ ಕಾರಣ ಏರುವುದಿಲ್ಲ.

ಯೋ ಬ್ರಹ್ಮಾಣಂ ವಿದಧಾತಿಪೂರ್ವಂ ಯೋವೈವೇದಾಂಶ್ಚ
ಪ್ರಹಿಣೋತಿತಸ್ಮೈ ।
ತಂಹ ದೇವ ಮಾತ್ಮಬುದ್ಧಿಪ್ರಕಾಶಂ ಮುಮುಕ್ಷು
ರ್ವೈ ಶರಣಮಹಂ ಪ್ರಪದ್ಯೇ ॥೧೮॥

ಯಾವನು ಸೃಷ್ಟಿಗೆ ಮೊದಲು ಬ್ರಹ್ಮನನ್ನು ಉತ್ಪನ್ನ ಮಾಡಿದನೋ ಮತ್ತು ಅವನಿಗಾಗಿ ವೇದಗಳನ್ನು ಪ್ರಕಾಶ ಪಡಿಸಿದನೋ, ಅಂತಹ ಆತ್ಮಬುದ್ಧಿ ಪ್ರಕಾಶನಾದ ಆ ದೇವನನ್ನು ಮುಮುಕ್ಷುವೇ ಆದ ನಾನು ಶರಣು ಹೋಗುತ್ತೇನೆ.

ನಿಷ್ಕಲಂ ನಿಷ್ಕ್ರಿಯಂ ಶಾಂತಂ ನಿರವದ್ಯಂ ನಿರಂಜನಂ ।
ಅಮೃತಸ್ಯ ಪರಂಸೇತುಂ ದಗ್ಧೇಂಧನ ಮಿವಾನಲಂ ॥೧೯॥

ಅವಯವ ರಹಿತನಾದ, ನಿಷ್ಕ್ರಿಯನಾದ, ಶಾಂತನಾದ, ಅನಿಂದ್ಯನಾದ, ಅಂಜನ ರಹಿತನಾದ, ಅಮೃತತ್ವಕ್ಕೆ ಶ್ರೇಷ್ಠವಾದ ಸೇತುವೆಯಂತಿರುವ, ಸೌದೆಯನ್ನು ಸಂಪೂರ್ಣವಾಗಿ ಸುಟ್ಟ ಅಗ್ನಿಯಂತಿರುವ ಆ ದೇವನನ್ನು ನಾನು ಶರಣು ಹೋಗುತ್ತೇನೆ.

ಯದಾ ಚರ್ಮ ವದಾ ಕಾಶಂ ವೇಷ್ಟ ಇಷ್ಯಂತಿ ಮಾನವಾಃ ।
ತದಾದೇವ ಮವಿಜ್ಞಾಯ ದುಃಖಸ್ಯಾಂತೋ ಭವಿಷ್ಯತಿ ॥೨೦॥

ಯಾವಾಗ ಮನುಷ್ಯನು ಚರ್ಮವನ್ನು ಸುತ್ತಿಡುವಂತೆ ಆಕಾಶವನ್ನು ಸುತ್ತಿಡ ಬಲ್ಲನೋ ಆಗ ಜ್ಯೋತಿರ್ಮಯನಾದ ಪರಮಾತ್ಮನನ್ನು ಅರಿತುಕೊಳ್ಳದೆಯೇ ದುಃಖ ನಿವೃತ್ತಿಯನ್ನು ಮಾಡಿಕೊಳ್ಳಬಲ್ಲನು.

ತಪಃ ಪ್ರಭಾವಾದ್ದೇವ ಪ್ರಸಾದಾಚ್ಚ ಬ್ರಹ್ಮ ಹ ಶ್ವೇತಾಶ್ವತರೋಽಥ ವಿದ್ವಾನ್ ।
ಅತ್ಯಾಶ್ರಮಿಭ್ಯಃ ಪರಮಂಪವಿತ್ರಂ ಪ್ರೋವಾಚ ಸಮ್ಯಗೃಷಿ
ಸಂಘಜುಷ್ಟಂ ॥೨೧॥

ಶ್ವೇತಾಶ್ವತರ ಋಷಿಯು ತಪಸ್ಸಿನ ಪ್ರಭಾವದಿಂದಲೂ ಮತ್ತು ಪರಮೇಶ್ವರನ ಅನುಗ್ರಹದಿಂದಲೂ ಬ್ರಹ್ಮನನ್ನು ಅರಿತುಕೊಂಡನು. ಅನಂತರ ಋಷಿ ಸಮೂಹದಿಂದ ಸೇವಿತವೂ, ಪರಮ ಪವಿತ್ರವೂ ಆದ ಆ ಬ್ರಹ್ಮನನ್ನು ಆತ್ಯಾಶ್ರಮಿಗಳಿಗೆ ಚೆನ್ನಾಗಿ ಉಪದೇಶಿಸಿದನು.

ವೇದಾಂತೇ ಪರಮಂ ಗುಹ್ಯಂ ಪುರಾಕಲ್ಪೇ ಪ್ರಚೋದಿತಂ |
ನಾ ಪ್ರಶಾಂತಾಯ ದಾತವ್ಯಂ ನಾ ಪುತ್ರಾ ಯಾ ಶಿಷ್ಯಾಯ ವಾಪುನಃ ||೨೨||

ಉಪನಿಷತ್ತುಗಳಲ್ಲಿ ಪರಮ ಗುಹ್ಯವಾಗಿರುವ ಈ ಬ್ರಹ್ಮವಿದ್ಯೆಯು ಹಿಂದಿನ ಕಲ್ಪದಲ್ಲಿ ಉಪದಿಷ್ಟವಾಗಿದ್ದಿತು. ಇದನ್ನು ಪ್ರಶಾಂತನಲ್ಲದವನಿಗಾಗಲೀ ಪುತ್ರರಿಲ್ಲದವನಿಗಾಗಲಿ, ಅಥವಾ ಶಿಷ್ಯನಲ್ಲದವನಿಗಾಗಲೀ ಉಪದೇಶಿಸಬಾರದು.

ಯಸ್ಯ ದೇವೇ ಪರಾಭಕ್ತಿ ರ್ಯಥಾ ದೇವೇ ತಥಾ ಗುರೌ |
ತಸ್ಯೈತೇ ಕಥಿತಾಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ
ಪ್ರಕಾಶಂತೇ ಮಹಾತ್ಮನಃ ||೨೩||

ಯಾವನಿಗೆ ಪರಮೇಶ್ವರನಲ್ಲಿ ಅಪಾರ ಭಕ್ತಿ ಇರುವುದೋ ಪರಮೇಶ್ವರನಲ್ಲಿದ್ದ ಹಾಗೆ ತನ್ನ ಗುರುವಿನಲ್ಲೂ ಅಪಾರ ಭಕ್ತಿ ಇರುವುದೋ ಅಂತಹ ಮಹಾತ್ಮನಿಗೆ ಹೇಳಲ್ಪಟ್ಟ ಈ ಅರ್ಥಗಳು ಜ್ಞಾನಲಬ್ಧ ಉಂಟಾಗುತ್ತದೆ. ಅಂತಹ ಮಹಾತ್ಮನಿಗೆ ಜ್ಞಾನಲಬ್ಧವುಂಟಾಗುತ್ತದೆ.

ಓಂ ಪೂರ್ಣಮದಃ ಪೂರ್ಣಮಿದಂ | ಪೂರ್ಣಾತ್ ಪೂರ್ಣಮುದುಚ್ಯತೇ | ಪೂರ್ಣಸ್ಯ ಪೂರ್ಣಮಾದಾಯ | ಪೂರ್ಣಮೇವಾವಶಿಷ್ಯತೇ ||

ಓಂ ಶಾಂತಿ ಶಾಂತಿ ಶಾಂತಿಃ

# ಅಥ ಜಾಬಾಲೋಪನಿಷತ್

**ಓಂ ಭದ್ರಂ ಕರ್ಣೇಭಿಃಶೃಣುಯಾಮ ದೇವಾಃ । ಭದ್ರಂ ಪಶ್ಯೇಮಾ ಕ್ಷಭಿರ್ಯಜತ್ರಾಃ । ಸ್ಥಿರೈರಂಗೈಃ ಸ್ತುಷ್ಟುವಾಗ್ಂ ಸಸ್ತನೂಭಿಃ । ವ್ಯಸೇಮ ದೇವಹಿತಂ ಯದಾಯುಃ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥**

ಓಂ ಬೃಹಸ್ಪತಿರುವಾಚ ಯಾಜ್ಞ ವಲ್ಕ್ಯಂ :—
ಯದನು ಕುರು ಕ್ಷೇತ್ರಂ ದೇವಾನಾಂ ದೇವಯಜನಂ ।
ಸರ್ವೇಷಾಂ ಭೂತಾನಾಂ ಬ್ರಹ್ಮಸದನಂ ಬ್ರೂಹೀತಿ ॥೧॥

ಬೃಹಸ್ಪತಿಯು ಯಾಜ್ಞ್ಞವಲ್ಕ್ಯರಿಗೆ ಹೇಳುತ್ತಾರೆ :—
ಕುರುಕ್ಷೇತ್ರವು ದೇವತೆಗಳಿಗಾಗಿ ಇದೆ. ಇಲ್ಲಿ ದೇವತೆಗಳೂ, ದೇವಾದಿಗಳೂ, ಸರ್ವ ಭೂತಗಳೂ, ಪ್ರತಿಷ್ಠಿತವಾಗಿವೆ. ಇದು ಬ್ರಹ್ಮಸದನವೆಂದೂ ಹೇಳುತ್ತಾರೆ,

ಸಹೋವಾಚ ಯಾಜ್ಞ್ಯವಲ್ಕ್ಯಃ :—
ಅವಿಮುಕ್ತಂ ವೈ ಕುರುಕ್ಷೇತ್ರಂ ದೇವಾನಾಂ ದೇವಯಜನಂ ಸರ್ವೇಷಾಂ ಭೂತಾನಾಂ ಬ್ರಹ್ಮಸದನಂ । ತಸ್ಮಾದ್ಯತ್ರ ಕ್ವಚನ ಗಂಧತಿ ತದೇವ ಮನ್ಯೇ ತೇತಿ । ಇದಂ ವೈ ಕುರುಕ್ಷೇತ್ರಂ ದೇವಾನಾಂ ದೇವಯಜನಂ ಸರ್ವೇಷಾಂ ಭೂತಾನಾಂ ಬ್ರಹ್ಮಸದನಂ। ಅತ್ರ ಹಿ ಜಂತೋಃ ಪ್ರಾಣೇ ಷೂತ್ಕ್ರಮಣೇಷು ರುದ್ರಸ್ತಾರಕಂ ಬ್ರಹ್ಮವ್ಯಾಚಷ್ಟೇ । ಯೇನಾ ಸಾವಮೃತೀ ಭೂತ್ವಾ ಮೋಕ್ಷೀ ಭವತಿ । ತಸ್ಮಾದವಿಮುಕ್ತಮೇವ ನಿಷೇವೇತಾ ವಿಮುಕ್ತಂ ನವಿ ಮುಂಚೇತ್ । ಏವಮೇವೈತದ್ಯಾಜ್ಞ ವಲ್ಕ್ಯಂ ಅಥಹೈನ ಮತ್ರಿಃ ಪಪ್ರಚ್ಛ ಯಾಜ್ಞ ವಲ್ಕ್ಯಂ ॥೨॥

ಆಗ ಯಾಜ್ಞವಲ್ಕ್ಯರು ಹೇಳುತ್ತಾರೆ :—

ಕುರುಕ್ಷೇತ್ರವು ಅವಿಮುಕ್ತ ಕ್ಷೇತ್ರವಾಗಿದೆ. ಅಲ್ಲಿ ಎಲ್ಲಾ ದೇವರುಗಳೂ, ದೇವತೆಗಳೂ, ಸಮಸ್ಥಭೂತಾದಿಗಳೂ ಆವಾಸವಾಗಿದ್ದು ಅದು ಬ್ರಹ್ಮಸದನವಾಗಿರುತ್ತೆ 'ಆದ್ದರಿಂದ ಯಾರು ಎಲ್ಲಿಗೆ ಹೋದರೂ ಅದನ್ನು ಈ ರೀತಿಯಾಗಿಯೇ ಭಾವಿಸಬೇಕು. ಎಲ್ಲಿ ದೇವಾದಿದೇವತೆಗಳೂ, ಸಮಸ್ಥಭೂತಾದಿಗಳೂ ನಿವಾಸಿತರಾಗಿದ್ದು ಬ್ರಹ್ಮಸದನವಾಗಿದೆಯೋ ಅದೇ ಅವಿಮುಕ್ತ ಕ್ಷೇತ್ರವಾದ ಕುರುಕ್ಷೇತ್ರವೆಂದು ಎಲ್ಲರೂ ತಿಳಿಯಬೇಕು. ಅಲ್ಲಿ ವಾಸಿಸುವ ಪ್ರಾಣಿಗಳು ತಮ್ಮ ಪ್ರಾಣೋತ್ಕ್ರಮಣ ಕಾಲದಲ್ಲಿ ರುದ್ರನಿಂದ ತಾರಕ ಮಂತ್ರೋಪದೇಶವನ್ನು ಪಡೆಯುತ್ತಾರೆ. ಆ ಮೂಲಕ ಅವರೆಲ್ಲರೂ ಅಮೃತರಾಗಿ ಬಿಡುಗಡೆ ಹೊಂದಲ್ಪಡುತ್ತಾರೆ. ಆದ್ದರಿಂದ' ಅವಿಮುಕ್ತನನ್ನು ಕುರಿತು ಧ್ಯಾನಮಾಡು. ಅವಿಮುಕ್ತನನ್ನು ಮರೆಯಬೇಡ. ಹೀಗೆ ಹೇಳಿದ ತರುವಾಯ ಅತ್ರಿಯು ಯಾಜ್ಞವಲ್ಕ್ಯವನ್ನು ಕೇಳುತ್ತಾನೆ.

ಏಷೋಽನನ್ತೋಽವ್ಯಕ್ತ ಆತ್ಮಾ ತಂಕಥಮಹಂ ವಿಜಾನೀ ಯಾಮಿತಿ ?।
ಸಹೋ ವಾಚಾ ಯಾಜ್ಞವಲ್ಕ್ಯಂ :—
ಸೋಽ ವಿಮುಕ್ತ ಉಪಾಸ್ಯೋ ಯ ಏಷೋಽನನ್ತೋಽವ್ಯಕ್ತೋ ಆತ್ಮಾಸೋಽವಿಮುಕ್ತೇ ಪ್ರತಿಷ್ಠಿತ ಇತಿ । ಸೋ ಅವಿಮುಕ್ತಃ ಕಸ್ಮಿನ್ ಪ್ರತಿಷ್ಠಿತ ಇತಿ ? । ವರಾಣಾಯಾಂ ನಾ ಸ್ಯಾಂ ಚ ಮಧ್ಯೇ ಪ್ರತಿಷ್ಠಿತ ಇತಿ । ಕಾ ವೈ ವರಣಾ ಕಾಚನಾ ಸೀತಿ ? ಸರ್ವಾನಿಂದ್ರಿಯ ಕೃತಾಂ ದೋಷಾಣವಾರಯ ತೀತಿ । ತೇನ ವರಣಾ ಭವತಿ ? ಸರ್ವಾಣೀಂದ್ರಿಯ ಕೃತ ಪಾಪಾನಿ ನಾಶಯತೀತಿ । ತೇನ ನಾಸೀ ಭವತೀತಿ ? ಕತಮಚ್ಚಾಸ್ಯ ಸ್ಥಾನಂಭವತೀತಿ ? ಭೃವೋರ್ಘ್ರಾಣಸ್ಯಚಯಃ ಸಂಧಿಃ ಸಯೇಷ ವೈ ಸಂಧಿಂ ಸಂಧ್ಯಾಂ ಬ್ರಹ್ಮವಿದ ಉಪಾಸತ ಇತಿ । ಸೋಽವಿಮುಕ್ತ ಉಪಾಸ್ಯ ಇತಿ । ಸೋಽ ವಿಮುಕ್ತಂ ಜ್ಞಾನಮಾಚಷ್ಟೇಯೋ ವೈ ತದೇತ ದೇವಂ ವೇದೇತಿ ||೩||

"ನಾನು ಹೇಗೆ ಆತ್ಮನನ್ನು ಅನಂತನೂ, ಅವ್ಯಕ್ತನೂ ಆಗಿರುವನೆಂದು ತಿಳಿಯಲಿ"? ಯಾಜ್ಞವಲ್ಕ್ಯನು ತಿಳಿಸುತ್ತಾನೆ. "ನೀನು ಅವಿಮುಕ್ತನನ್ನು ಉಪಾಸನೆ ಮಾಡು ಏಕೆಂದರೆ ಅನಂತನೂ, ಅವ್ಯಕ್ತನೂ, ಆದ ಆತ್ಮನು ಅವಿಮುಕ್ತನಲ್ಲಿ ಪ್ರತಿಷ್ಠಾಪಿತನಾಗಿದ್ದಾನೆ." ಅತ್ರಿಯು ಕೇಳುತ್ತಾನೆ "ಅವಿಮುಕ್ತನು ಯಾವುದರಲ್ಲಿ ಪ್ರತಿಷ್ಠಿತನಾಗಿದ್ದಾನೆ"? ಯಾಜ್ಞವಲ್ಕ್ಯನು ಹೇಳುತ್ತಾನೆ "ಅದು ವರುಣ ಮತ್ತು ಅಸಿ

ಇವುಗಳ ಮಧ್ಯೆ ಪ್ರತಿಷ್ಠಿತವಾಗಿದೆ.'' ಅತ್ರಿಯು ಕೇಳುತ್ತಾನೆ ''ವರುಣ ಮತ್ತು ಅಸಿ ಎಂಬವುಗಳು ಯಾವುದು'' ಯಾಜ್ಞವಲ್ಕ್ಯರು ಹೇಳುತ್ತಾರೆ. ''ಯಾವುದು ಸರ್ವೇಂದ್ರಿಯಗಳು ಮಾಡುವ ಪಾಪವನ್ನು ನಾಶಮಾಡುತ್ತದೆಯೋ ಅದು ''ಅಸಿ" ಸರ್ವೇಂದ್ರಿಯಗಳು ಮಾಡುವ ದೋಷ ಮತ್ತು ಲೋಪವನ್ನು ಹೋಗಲಾಡಿಸುವುದು ''ವರುಣ ಅತ್ರಿಯು ಕೇಳುತ್ತಾನೆ, "ಅದರ ಸ್ಥಾನವಾವುದು?" ''ಅದು ಕಣ್ಣು ರೆಪ್ಪೆಗಳ ಮತ್ತು ಮೂಗಿನ ಮಧ್ಯದ ಕೂಡುವಿಕೆಯ ಸ್ಥಳ." ಏಕೆಂದರೆ ಅದು ದೇವ ಲೋಕದ ಮತ್ತು ಅದಕ್ಕೂ ಮೇಲಿನ ಲೋಕದ ಸಂಧಿ ಸ್ಥಳವಾಗಿರುತ್ತದೆ. ಯಾವುದನ್ನು ಸಂಧ್ಯ ಎಂದು ಕರೆದು ಬ್ರಹ್ಮವಿದರು ಉಪಾಸನೆ ಮಾಡುತ್ತಾರೋ ಅದೇ ಸಂಧಿಯಾಗುವ ಸ್ಥಳ, ಆದ್ದರಿಂದ ಆ ವಿಮುಕ್ತನನ್ನು ಉಪಾಸಿಸಬೇಕು." ಹೀಗೆ ಯಾರು ಈ ಜ್ಞಾನವನ್ನು ತಿಳಿದುಕೊಳ್ಳುವರೋ ಅವರು ಬಿಡುಗಡೆಯನ್ನು ಪಡೆಯುತ್ತಾರೆ.

ಅಥಹೈನಂ ಬ್ರಹ್ಮಚಾರಿಣ ಊಚುಃ—ಕಿಂಜಪ್ಯೇ ನಾಮೃತತ್ವಂ ಬ್ರೂಹೀತಿ ? ಸಹೋವಾಚ ಯಾಜ್ಞವಲ್ಕ್ಯಃ । ಶತರುದ್ರೀಯೇಣೇತಿ । ಏತಾನಿಹವಾ ಅಮೃತಸ್ಯ ನಾಮದೇಯಾನಿ । ಏತೈರ್ಹವಾ ಅಮೃತೋಭವತೀತಿ । ಏವಮೇವೈತದ್ಯಾಜ್ಞವಲ್ಕ್ಯಃ ॥ ೪ ॥

ವೇದಾಧ್ಯಯನ ಮಾಡುತ್ತಿದ್ದ ಬ್ರಹ್ಮಚಾರಿಗಳು ಕೇಳುತ್ತಾರೆ ''ಯಾವ ಮಂತ್ರೋಚ್ಚಾರಣೆ ಇಂದಅಮೃತತ್ವವನ್ನು ಪಡೆಯಬಹುದು?" ಯಾಜ್ಞವಲ್ಕ್ಯರು ಹೇಳುತ್ತಾರೆ ''ಅಮೃತಮಯನ ನಾಮ ಧೇಯುವನ್ನು ಹೊಂದಿರುವ ಮತ್ತು ಅಮೃತತ್ವವನ್ನು ಪಡೆಯಬಹುದಾದ ''ಶತರುದ್ರೀಯ'' ವನ್ನು ಪುನಶ್ಚರಣೆಮಾಡಿ''.

ಅಥ ಜನಕೋ ಹ ವೈದೇಹೋ ಯಾಜ್ಞವಲ್ಕ್ಯಮುಪ ಸಮೇತ್ಯೋವಾಚ— ಭಗವನ್ ಸನ್ಯಾಸಮನುಬ್ರೂಹೀತಿ । ಸಹೋವಾಚ ಯಾಜ್ಞವಲ್ಕ್ಯ—ಬ್ರಹ್ಮಃ ಚರ್ಯಂ ಸಮಾಪ್ಯ ಗೃಹೀಭವೇತ್ । ಗೃಹೀಭೂತ್ವಾ ವನೀಭವೇತ್ । ವನೀಭೂತ್ವಾ ಪ್ರವ್ರಜೇತ್ । ಯದಿವೇತರಥಾ ಬ್ರಹ್ಮಚರ್ಯಾ ದೇವ ಪ್ರವ್ರಜೇತ್ ಗೃಹಾದ್ವಾ ವನಾದ್ವಾ । ಅಥಪುನರವ್ರತೀವಾsವ್ರತೀ ವಾಸ್ನಾತಕೋ ವಾsಸ್ನಾತಕೋ ವಾ ಉತ್ಸನ್ನಾಗ್ನಿರನಗ್ನಿಕೋ ವಾಯದಹರೇವ ವಿರಜೇತ್ ದಹರೇವ ಪ್ರವ್ರಜೇತ್ । ತದ್ಧೈಕೇ ಪ್ರಾಜಾಪತ್ಯಾಮೇವೇಷ್ಟಿಂ ಕುರ್ವನ್ತಿ । ತದು ತಥಾ ನಕುರ್ಯಾತ್ । ಅಗ್ನೇಯೀ ಮೇವಕುರ್ಯಾತ್ । ಅಗ್ನಿರ್ಹ

ಸ್ಮೈ ಪ್ರಾಣಃ ಪ್ರಾಣಮೇವೈತಯಾಕರೋತಿ | ತ್ರೈಧಾತವೀಯಾ ಮೇ ವ ಕುರ್ಯಾತ್ | ಏತ ಏವ ತ್ರಯೋ ಧಾತವೋ ಯದುತ ಸತ್ತ್ವಂ ರಜಸ್ತಮ ಇತಿ | ಅಯನ್ತೇ ಯೋನಿ ಋರ್ತ್ವಿಯೋ ಯತೋಜಾತೋ ಆರೋಚ ಥಾಃ | ತಂ ಜಾನನ್ನಗ್ನ ಆರೋಹಾಥಾನೋ ವರ್ಧಯಾರಮಿಂ | ಇತ್ಯನೇನ ಮಂತ್ರೇ ಣಾಗ್ನಿ ಮಾ ಜಿಘ್ರೇತ್| ಏಷವಾ ಅಗ್ನೇರ್ಯೋ ನಿರ್ಯಃ ಪ್ರಾಣಃ | ಪ್ರಾಣಂ ಗಚ್ಛ ಸ್ವಾಹೇತ್ಯೇವ ಮೇವೈತದಾಹ| ಗ್ರಾಮಾದಗ್ನಿ ಮಾಹೃತ್ಯ ಪೂರ್ವ ವದಗ್ನಿ ಮಾಜಿಘ್ರೇತ್ | ಯದ್ಯಗ್ನಿಂ ನ ವಿಂದೇ ದಪ್ಸುಜುಹುಯಾತ್ | ಆಪೋವೈ ಸರ್ವಾ ದೇವತಾಃ | ಸರ್ವೇಭ್ಯೋ ದೇವತೇಭ್ಯೋ ಜುಹೋಮಿ | ಹೃತ್ವೋ ಧೃತ್ಯ, ಪ್ರಾಶ್ನೀಯಾತ್ಸಾಜ್ಯಂ ಹ ವಿರನಾಮಯಂ | ಮೋಕ್ಷ ಮನ್ತ್ರ ಸ್ತ್ರಯ್ಯೇವಂ ವಿಂದೇತ್ | ತದ್ಬ್ರಹ್ಮ ತದು ಪಾಸಿತವ್ಯಂ | ಏವಮೇ ವೈತದ್ಭಗವರ್ನ | ಇತಿವೈ ಯಾಜ್ಞವಲ್ಕ್ಯಂ || ೫ ||

ಒಂದು ಕಾಲದಲ್ಲಿ ವಿದೇಹರಾಜನಾದ ಜನಕನು ಯಾಜ್ಞವಲ್ಕ್ಯನ ಬಳಿಗೆ ಬಂದು ಕೇಳು ತ್ತಾನೆ :—‘‘ಭಗವಂತನೇ ನನಗೆ ಸಂನ್ಯಾಸ ದೀಕ್ಷೆಯನ್ನು ದಯಪಾಲಿಸಿರಿ”. ಆಗ ಯಾಜ್ಞವಲ್ಕ್ಯರು ಹೇಳುತ್ತಾರೆ. “ಮೊದಲು ಬ್ರಹ್ಮಚಾರಿಯ ವ್ರತವನ್ನು ಪೂರೈಸಿ ಗೃಹಸ್ಥಾಶ್ರಮವನ್ನು ಹೊಂದಬೇಕು. ಗೃಹಸ್ಥಾಶ್ರಮದ ತರುವಾಯು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಬೇಕು. ವಾನಪ್ರಸ್ಥಾಶ್ರಮದ ತರುವಾಯ ಸರ್ವಸಂಗ ಪರಿತ್ಯಾಗ ಮಾಡಬೇಕು. ಇದಲ್ಲದೆ ಸಕಾಲ ಸಂಯೋಗವಾದಲ್ಲಿ ಬ್ರಹ್ಮಚರ್ಯದಿಂದ, ಗೃಹಸ್ಥಾಶ್ರಮದಿಂದ ಅಥವಾ ವಾನ ಪ್ರಸ್ಥಾಶ್ರಮದಿಂದ ಬಿಡುಗಡೆಹೊಂದಿ ಸ್ನಾತಕ ವ್ರತವನ್ನು ಮುಗಿಸಿರಲಿ ಇಲ್ಲವೇ ಮುಗಿಸದಿರಲಿ ; ಶಿಷ್ಯತ್ವವನ್ನು ಮಾಡಿರಲಿ ಯಾ ಮಾಡದೇ ಇರಲಿ ; ಕೊನೆಗೆ ಯಜ್ಞ ಯಾಗಾದಿ ಗಳನ್ನು ವ ಗಿಸಿರಲಿ ಅಥವ ಮುಗಿಸದೆ ಇರಲಿ ಸರ್ವಸಂಗ ಪರಿತ್ಯಾಗವನ್ನು ಮಾಡಿ ಆ ದಿನದಿಂದ ಸಂನ್ಯಾಸ ದೀಕ್ಷೆಯನ್ನು ಪಡೆಯಬಹುದು. ಕೆಲವರು ಪ್ರಾಜಾಪತ್ಯಯಜ್ಞ ವನ್ನು ಆಚರಿಸುತ್ತಾರೆ. ಇದನ್ನು ಮಾಡದಿದ್ದರೂ ಆ ಹವನೀಯಾಗ್ನಿ ಕಾರ್ಯ ವನ್ನಾದರೂ ಮಾಡಲೇಬೇಕು. ಏಕೆಂದರೆ ಅಗ್ನಿಯೇ ಜೀವ. ಅಗ್ನಿ ಕಾರ್ಯ ವನ್ನುಮಾಡುವುದರ ಮೂಲಕ ಪ್ರಾಣವನ್ನು ಉಪಾಸನೆ ಮಾಡಿದಂತಾಗುತ್ತದೆ ; ಅಥವ ಪ್ರಾಣನ ಸ್ವಸ್ಥಾನದಲ್ಲಿ ಐಕ್ಯವಾದಂತಾಗುತ್ತದೆ. ತರುವಾಯ ಅವನು “ತ್ರೈಧಾತವೀಯ” ಯಾಗವನ್ನು ಆಚರಿಸಬೇಕು. ಏಕೆಂದರೆ ತ್ರಿಗುಣಗಳಾದ ಸತ್ವ,ರಜಸ್ಸು ಮತ್ತು ತಮೋಗುಣಗಳನ್ನು ಅಗ್ನಿಯಲ್ಲಿ ಪಚನಮಾಡಿದಂತಾಗು ತ್ತದೆ. ತರುವಾಯ ಈ ಕೆಳಗಿನ ಮಂತ್ರವನ್ನು ಹೇಳಿಕೊಂಡು ಹೋಮಧೂಮ

ವನ್ನು ಆಘ್ರಾಣಿಸಬೇಕು. "ಅಯನ್ತೇ ಯೋನಿರ್ಋತ್ವಿಯೋ ಯತೋಜಾತೋ ಅರೋಚ ಥಾಃ! ತಂಜಾನನ್ನಗ್ನ ಆರೋಹಾಥಾನೋ ವರ್ಧಯಾರಯಿಂ" ಯಾರು ಪ್ರಾಣನೋ ಅವನ ಮೂಲ "ಅಗ್ನಿ". ಇಂತಹ ಅಗ್ನಿಯನ್ನು ಉಪಾಸನೆ ಮಾಡಲಾರದವನು ತಾನು ನೆಲಸಿರುವ ಪ್ರದೇಶಕ್ಕೆ ಹತ್ತಿರದ ಒಂದು ಹಳ್ಳಿಯ ಯಾವುದಾದರೂ ಒಂದು ಮನೆಯಿಂದ ಅಗ್ನಿಯನ್ನು ತಂದು ಮೇಲೆ ಹೇಳಿದ ಮಂತ್ರವನ್ನುಚ್ಚರಿಸುತ್ತಾ ಅಗ್ನಿಯನ್ನು ಆಘ್ರಾಣಿಸಬೇಕು. ಈ ಅಗ್ನಿಯೂ ಅವನಿಗೆ ದೊರಕದ ಭಾಗದಲ್ಲಿ -ನೀರಿನಲ್ಲಿಯಾದರೂ ಹೋಮ ಮಾಡಬಹುದು. ಏಕೆಂದರೆ ನೀರಿನಲ್ಲಿ ಎಲ್ಲ ದೈವಗಳೂ ಪ್ರತಿಷ್ಠಿತವಾಗಿವೆ. ಮಂತ್ರವನ್ನುಚ್ಚರಿಸಿಕೊಂಡು ಹೋಮ ಮಾಡಿದ ತರುವಾಯ ತುಪ್ಪದಿಂದ ರಕ್ಷೆಯನ್ನು ತಯಾರಿಸಬೇಕು. ಈ ರಕ್ಷೆಯು ಎಲ್ಲ ಈತಿ ಭಾದೆಗಳನ್ನೂ ತೊಲಗಿಸುವ ಕಾರಣ ತನ್ನ ಮೋಕ್ಷದ ಸಲುವಾಗಿ ಪ್ರಣವ ಮಂತ್ರವನ್ನುಚ್ಚರಿಸುತ್ತಾ ಮೂರು ವೇದಗಳನ್ನೂ ಪ್ರತಿನಿಧಿಸುವಂತೆ ಸ್ವೀಕಾರ ಮಾಡಬೇಕು. ಇದೇ ಬ್ರಹ್ಮ, ಇದೇ ಬ್ರಹ್ಮೋಪಾಸನೆ." ಆಗ ಜನಕನು "ಇದು ಹಾಗೆಯೇ ಸರಿ. ಯಾಜ್ಞವಲ್ಕ್ಯರೇ ನಿಮಗೆ ವಂದನೆಗಳು" ಎಂದನು.

ಅಥಹೈನ ಮತ್ರಿಃ ಪಪ್ರಚ್ಛಯಾಜ್ಞವಲ್ಕ್ಯಂ—ಪೃಚ್ಛಾಮಿತ್ವಾ ಯಾಜ್ಞವಲ್ಕ್ಯ ಯಜ್ಞೋಪವೀತಿ ಕಥಂ ಬ್ರಾಹ್ಮಣ ಇತಿ । ಸಹೋವಾಚ ಯಾಜ್ಞವಲ್ಕ್ಯಃ । ಇದ ಮೇ ವಾಸ್ಯ ತದ್ಯಜ್ಞೋಪವೀತಂ ಯ ಆತ್ಮಾ ಪ್ರಾಶ್ಯಾಚಮ್ಯ ಅಧಂ ವಿಧಿಃ ಪ್ರವ್ರಾಜಿನಾಂ। ವೀರಾಧ್ವಾನೇ ವಾ ನಾಶಕೇವಾ ಪಾಂ ಪ್ರವೇಶೋವಾಽಗ್ನಿ ಪ್ರವೇಶೋವಾ ಮಹಾಪ್ರಸ್ಥಾನೇವಾ । ಅಥ ಪರಿವ್ರಾಡ್ವಿವರ್ಣವಾಸಾಮುಂ ಡೋಽಪರಿಗ್ರಹಃ ಶುಚಿರದ್ರೋಹೀ ಭೈಕ್ಷಾ ಣ್ಯೋ ಬ್ರಹ್ಮಭೂಯಭವತಿ। ಯದ್ಯಾತುರಃ ಸ್ಯಾನ್ಮನಸಾವಾಚಾವಾ ಸಂನ್ಯಸೇತ್ । ಏಷಪಂಥಾ ಬ್ರಹ್ಮಣಾಹಾನು ವಿತ್ತಸ್ತೇನೈತಿ ಸಂನ್ಯಾಸೀಬ್ರಹ್ಮ ವಿದಿತಿ । ಏವಮೇವೈಷ ಭಗವನ್ । ಇತಿವೈ ಯಾಜ್ಞವಲ್ಕ್ಯಃ ॥ ೬ ॥

ತರುವಾಯ ಅತ್ರಿಯು ಯಾಜ್ಞವಲ್ಕ್ಯನನ್ನು ಕೇಳುತ್ತಾನೆ : "ಯಜ್ಞೋಪವೀತ ವನ್ನು ಧರಿಸಿಕೊಳ್ಳದೆ ಇರುವವನನ್ನು ಬ್ರಾಹ್ಮಣನೆಂದು ಪರಿಗಣಿಸಲಾಗುತ್ತದೆಯೇ?" ಯಾಜ್ಞವಲ್ಕ್ಯರು ಹೇಳುತ್ತಾರೆ. "ಯಾರು ಆತ್ಮಶುದ್ಧಿ ಇಂದ ಆಚಮನವನ್ನು ಮಾಡುತ್ತಾರೋ ಅವರು ಸರ್ವಸಂಗ ಪರಿತ್ಯಾಗಕ್ಕೆ ಅರ್ಹರಾಗುತ್ತಾರೆ. ಯಾರಿಗೆ ಇಹ ಪ್ರಪಂಚದಲ್ಲಿ ಜಿಹಾಸೆ ಹುಟ್ಟಿದಾಗ್ಯೂ ಸಂನ್ಯಾಸಕ್ಕೆ ಅರ್ಹತೆ ಇಲ್ಲದವರು ಈ ಕೆಳಗೆ ಕಂಡಂತೆ ಬಿಡುಗಡೆಯನ್ನು ಪಡೆಯಬಹುದು. ಯುದ್ಧದಲ್ಲಿ ಧೈರ್ಯದಿಂದ ಯುದ್ಧಮಾಡುತ್ತ ಮಡಿದು ವೀರಸ್ವರ್ಗವನ್ನು ಪಡೆಯಬಹುದು ; ಆಮರಣಾಂತ

ಉಪವಾಸ ಮಾಡಬಹುದು ; ಜಲಪ್ರವೇಶ ಮತ್ತು ಅಗ್ನಿಪ್ರವೇಶವನ್ನು ತ್ರಿಕರಣ ಶುದ್ಧಿಇಂದ ನೆರವೇರಿಸಿ ಸ್ವರ್ಗವಾಸಿಯಾಗಬಹುದು. ಸಾಯುವ ಪರ್ಯಂತ ಭಗವಂತನನ್ನು ಸ್ಮರಿಸುತ್ತ ಅಂತ್ಯವಾಗಬಹುದು ; ಕಾಷಾಯವಸ್ತ್ರವನ್ನು ಧರಿಸಿ, ಮುಂಡನಮಾಡಿಕೊಂಡು, ಪರಿವ್ರಾಜಕನ ಹಾಗೆ ಏನನ್ನೂ ಹೊಂದಿರದೆ, ಶುಚಿಯಾಗಿಯೂ, ದ್ವೇಷಾಸೂಯೆಗಳಿಲ್ಲದೆಯೂ, ಭಿಕ್ಷಾನ್ನದಿಂದ ಜೀವಿಸುತ್ತ, ಮರಣವಾದಲ್ಲಿ ಬ್ರಹ್ಮವನ್ನು ಸೇರುತ್ತಾರೆ. ಅವರು ಮನಸ್ಸುಮಾಡಿದಲ್ಲಿ ಕಾಯಾ, ವಾಚಾ, ಮನಸಾ, ಮೌನವನ್ನಾಚರಿಸುತ್ತ ಸಂನ್ಯಾಸಿಯಾಗಲೂಬಹುದು. ಆರೋಗ್ಯ ದೃಢ ಕಾಯರಾದವರು ಈ ರೀತಿ ಆಚರಿಸಬಾರದು. ಅಂತಹ ಪರಿತ್ಯಾಗಿಗಳು ಬ್ರಹ್ಮನನ್ನು ಅರಿಯಬಲ್ಲರು" ಎಂದು ಹೇಳಿದರು.

ತತ್ರ ಪರಮಹಂಸಾನಾಮ ಸಂವರ್ತಕಾರುಣಿ ಶ್ವೇತಕೇತು, ದುರ್ವಾಸ, ಋಭು, ನಿಧಾದ, ಜಡಭರತ, ದತ್ತಾತ್ರೇಯ, ರೈವತಕ, ಪ್ರಭೃತಯೊ ಽವ್ಯಕ್ತಲಿಂಗಾ, ಽವ್ಯಕ್ತಾಚಾರಾ, ತಸುನ್ಮತ್ತಾ, ಉನ್ಮತ್ತವದಾಚರನ್ತಃ । ತ್ರಿದಂಡ ಕಮಂಡುಲಂ, ಶಿಕ್ಯಂ, ಪಾತ್ರಂ, ಜಲಪವಿತ್ರಂ, ಶಿಖಾಯಜ್ಞೋಪವೀತಂ, ಚೇತ್ಯೇತತ್ಸರ್ವಂಭೂಃ ಸ್ವಾಹೇತ್ಯಪ್ಸು ಪರಿತ್ಯಜ್ಯಾತ್ಮಾನ ಮನ್ವಿಚ್ಛೇತ್ । ಯಥಾಜಾತ ರೂಪಧರೋ, ನಿರ್ದ್ವಂದ್ವೋ, ನಿಷ್ಪರಿಗ್ರಹಃ ತತ್ರ ಬ್ರಹ್ಮಮಾರ್ಗೇ ಸಂಯಕ್ಸಂಪನ್ನಃ, ಶುದ್ಧಮಾನಸಃ ಪ್ರಾಣಸಂಧಾರಣಾರ್ಥಂ ಯಥೋಕ್ತಕಾಲೇ ವಿಮುಕ್ತೋ ಭೈಕ್ಷಮಾಚರನ್ ಉದರ ಪಾತ್ರೇಣ ಲಾಭಾಲಾಭೌ ಸಮೌಕೃತ್ವಾ ಶೂನ್ಯಾಗಾರ ದೇವಗೃಹ ತೃಣಕೂಟ ವಲ್ಮೀಕ ವೃಕ್ಷಮೂಲ ಕುಲಾಶಾಲ ಅಗ್ನಿಹೋತ್ರಶಾಲಾ ನದೀಪುಲಿನ ಗಿರಿಕುಹರ ಕಂದರ ಕೋಟರ ನಿರ್ಜನ ಸ್ಥಂಡಿಲೇಷ್ವನಿಕೇನ ವಾಸ್ಯ ಪ್ರಯತ್ನೋ ನಿರ್ಮಮಃ ಶುಕ್ಲಧ್ಯಾನ ಪರಾಯಣೋ ಽಧ್ಯಾತ್ಮನಿಷ್ಠೋ ಽಶುಭಕರ್ಮನಿರ್ಮೂಲನಪರಃ ಸಂನ್ಯಾಸೇನ ದೇಹತ್ಯಾಗಂ ಕರೋತಿ ಸ ಪರಮಹಂಸೋನಾಮ ಸ ಪರಮಹಂಸೋನಾಮೇತಿ ॥ ೭ ॥

ಸಂವರ್ತಕ, ಆರುಣಿ, ಶ್ವೇತಕೇತು, ದೂರ್ವಾಸ, ಋಭು, ನಿದಾಧ, ಜಡಭರತ, ದತ್ತಾತ್ರೇಯ, ರೈವತಕ, ಮತ್ತು ಕೆಲವರು ಪರಮಹಂಸರು. ಅವರುಗಳು ಅವ್ಯಕ್ತ ಲಿಂಗಿಗಳೂ ವ್ಯಕ್ತಾಚಾರರೂ ಆಗಿದ್ದು ಅವರು ತಮ್ಮ ಜೀವಿತದಲ್ಲಿ ಉನ್ಮತ್ತರಲ್ಲದಿದ್ದಾಗ್ಯೂ ಉನ್ಮತ್ತರಂತೆ ಇತರರಿಗೆ ಕಾಣಿಸಿಕೊಳ್ಳುತ್ತ ಇದ್ದರು. ಅವರು ಯಾವಾಗಲೂ ತ್ರಿದಂಡ ಕಮಂಡಲುಗಳನ್ನೂ, ಶಿಖೆ ಮತ್ತು ಯಜ್ಞೋಪವೀತವನ್ನು ವಿಸರ್ಜಿಸಿ "ಭೂ ರ್ಭುವಃ ಸ್ಸುವಃ" ಎಂದು ಉಚ್ಚರಿಸುತ್ತಾ

ಜಲದಲ್ಲಿ ಅರ್ಘ್ಯಪ್ರದಾನ ಮಾಡುತ್ತಾ, ತಮ್ಮ ಆತ್ಮ ಪರಿಚಯುವನ್ನು ಮಾಡಿಕೊಳ್ಳುತ್ತ ಹುಟ್ಟಿದಾಗ ಹೇಗೆ ಇದ್ದರೋಹಾಗೆ, ದಿಗಂಬರರಾಗಿ ಯಾವ ವಿಧವಾದ ಸಂಕೋಚಗಳೂ ಇಲ್ಲದೆ ಅಪರಿಗ್ರಾಹ್ಯರಾಗಿ ಬ್ರಹ್ಮಮಾರ್ಗದಲ್ಲಿ ಕ್ರಮಿಸುತ್ತ ಶುದ್ಧ ಮನಸ್ಕರಾಗಿ, ಜಿತ ಆತ್ಮರಾಗಿ ತಮ್ಮ ಉಳಿವಿಗೆ ಅವಶ್ಯಕವಾದಷ್ಟು ಮಾತ್ರ ಆಹಾರವನ್ನು ತಮ್ಮ ಉದರಕ್ಕೆ ಸೇರಿಸುವ ನಿಮಿತ್ತ ನಿಯುಕ್ತ ಕಾಲದಲ್ಲಿ ಮಾತ್ರ ಕೆಲವೇ ಮನೆಗಳಲ್ಲಿ ಭಿಕ್ಷೆಯುನ್ನು ಬೇಡುತ್ತ, ಲಾಭನಷ್ಟಗಳನ್ನು ಸರಿಸಮವಾಗಿ ಭಾವಿಸುತ್ತ, ತ್ಯಜಿಸಲ್ಪಟ್ಟ ಮನೆಗಳು, ದೇವಸ್ಥಾನಗಳು, ಗಿಡ ಪೊದೆಗಳು, ಹುತ್ತಗಳು, ಮರದ ಬುಡಗಳು, ಕುಂಬಾರ ಗೃಹಗಳು, ಯಾಗ ಶಾಲೆಗಳು, ಮಳಲ ದಂಡೆಗಳು, ಬೆಟ್ಟ ಗುಡ್ಡಗಳು, ಗವಿಗಳು, ಪೊಟ್ಟರೆಗಳು, ಮರಳ ಕಾಡುಗಳು, ಇವುಗಳಲ್ಲಿರುತ್ತ, ಆರ್ಜನೆಯ ಯಾವ ಪ್ರಯತ್ನವನ್ನೂ ಮಾಡದೆ, ಸೂಕ್ಷ್ಮಗ್ರಾಹಿಗಳಾಗಿ, ಸದಾ ತಪೋನಿರತರಾಗಿ, ಅಧ್ಯಾತ್ಮನಿಷ್ಟರಾಗಿ, ಶುಭಾಶುಭಕರ್ಮ ನಿರ್ಮೂಲರಾಗಿ, ಸಂನ್ಯಾಸದಿಂದ ದೇಹವನ್ನು ತ್ಯಾಗಮಾಡಿ ಪರಮಹಂಸರೆಂಬ ನಾಮದಿಂದ ಪರಮಹಂಸರಾಗಿ ಆಳಿದರು.

ಓಂಕಾರಶ್ಚಾಥಶಬ್ದಶ್ಚ ದ್ವಾವೇದೌಬ್ರಹ್ಮಣಾಃಪುರಾ |
ಕಂಠಂಭಿತ್ವಾ ವಿನಿರ್ಯಾತ ತಸ್ಮಾನ್ಮಾಂಗಳಿಕಾಉಭೌ ||
ಸಮಾಪ್ತಂ

# ಓಂ ಅಥ ಕೌಷೀತಕೀ ಉಪನಿಷತ್ ಪ್ರಾರಂಭಃ

## ಪ್ರಥಮೋಧ್ಯಾಯಃ

**ಓಂ ಯಶ್ಛಂದಸಾಮೃಷಭೋ ವಿಶ್ವರೂಪಃ । ಛಂದೋಭ್ಯೋದ್ಯ
ಮೃತಾತ್ಸಂಬಭೂವ । ಸಮೇಂದ್ರೋಮೇಧಯಾಸ್ಪೃಣೋತು ।
ಅಮೃತಸ್ಯ ದೇವಧಾರಣೋ ಭೂಯಾಸಂ । ಶರೀರಂಮೇವಿಚ
ರ್ಷಣಂ । ಜಿಹ್ವಾಮೇ ಮಧುಮುತ್ತಮಾ । ಕರ್ಣಾಭ್ಯಾಂಭೂರಿ
ವಿಶೃವಂ । ಬ್ರಹ್ಮಣಃ ಕೋಶೋಽಸಿಮೇಧಯಾ ಪಿಹಿತಃ । ಶೃತಂ
ಮೇಗೋಪಾಯ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥**

ಚಿತ್ರೋಹವೈಗಾರ್ಗ್ಯಾಯಣಿರ್ಯಕ್ಷಮಾಣ ಆರುಣಿಂವವ್ರೇ । ಸಹಪುತ್ರಂ
ಶ್ವೇತಕೇತುಂ ಪ್ರಜಿಘಾಯಯಾಜಯೇತಿ । ತಂಹಾಭ್ಯಾಗತಂ ಪಪ್ರಚ್ಛ-
ಗೌತಮಸ್ಯ ಪುತ್ರಾಸ್ತಿ, ಸವೃತಂ ಲೋಕೇಯಸ್ಮಿನ್ ಮಾಧಾಸ್ಯಾಮಿ, ಅನ್ಯ
ತಮೋ ವಾದ್ವಾತಸ್ಯ, ಮಾಲೋಕೇಧಾಸ್ಯಸೀತಿ । ಸಹೋವಾಚ-ನಾಹಮೇತ
ದ್ವೇದ । ಹನ್ತಾಚಾರ್ಯಂ ಪೃಚ್ಛಾನೀತಿ । ಸಹಪಿತರ ಮಾಸಾದ್ಯ ಪಪ್ರಚ್ಛ-
ಇತೀತಿಮಾಽಪ್ರಾಕ್ಷೀತ್ ಕಥಂ ಪ್ರತಿಬ್ರವಾಣೀತಿ। ಸಹೋವಾಚ-ಅಹಮಪ್ಯೇ
ತನ್ನವೇದ । ಸದಸ್ಯೇವ ವಯಂ ಸ್ವಾಧ್ಯಾಯ ಮಧೀತ್ಯಹರಾ ಮಹೇಯನ್ನಃ
ಪರೇದದಾತಿ । ಏಹ್ಯುಭೌ ಗಮಿಷ್ಯಾವ ಇತಿ । ಸಹಸಮಿತ್ಪಾಣಿಶ್ಚಿತ್ರಂ
ಗಾರ್ಗ್ಯಾಯಣಿಂ ಪ್ರತಿಚಕ್ರಮ ಉಪಾಯಾನೀತಿ । ತಂಹೋವಾಚ-ಬ್ರಹ್ಮಾ
ಹೋಽಸಿ ಗೌತಮಯೋ ನಮಾನಮುಪಾಗಾಃ । ಏಹಿವ್ಯೇವತ್ವಾಜ್ಞ ಪಯಿಷ್ಯಾ
ಮೀತಿ ॥೧॥

ಚಿತ್ರಗಾರ್ಗ್ಯಾಯಣಿಯು ಯಾಗ ಒಂದನ್ನು ಮಾಡಲು ನಿರ್ಧರಿಸಿ ಆರುಣಿಯನ್ನು ಅಧ್ವರ್ಯುವಾಗಿ ನೇಮಿಸಿದನು. ತರುವಾಯ ತನ್ನ ಮಗನಾದ ಶ್ವೇತ ಕೇತುವನ್ನು "ನೀನು ಯಜ್ಞ ಮಾಡು" ಎಂದು ಹೇಳಿ ಕಳುಹಿಸಿದನು. ಗೌತಮ ಪುತ್ರನು ಬಂದ ತರುವಾಯ ಅವನನ್ನು ಕೇಳಿದನು "ಓ ಗೌತಮ ಪುತ್ರನೇ ಈ ಪ್ರಪಂಚದಲ್ಲಿ ನನ್ನನ್ನು ಏಕಾಗ್ರತೆಯಲ್ಲಿಡುವ ಯಾವುದಾದರೂ ಗೌಪ್ಯ ಸ್ಥಳವಿದೆಯೇ ? ಅಥವಾ ನನ್ನನ್ನು ಅಂಥಹ ಪ್ರಪಂಚದಲ್ಲಿಡಲು ಬೇರೆ ಯಾವುದಾದರೂ ಮಾರ್ಗವಿದೆಯೇ ?" ಎಂದು ಕೇಳಲು ಅವನು ಹೇಳುತ್ತಾನೆ. "ನನಗೆ ಇದು ಯಾವುದೂ ತಿಳಿಯದು. ಆದರೂ ಗುರುಗಳನ್ನು ಕೇಳುತ್ತೇನೆ." ಎಂದು ಹೇಳಿ ತನ್ನ ತಂದೆಯ ಬಳಿಗೆ ಬಂದು ಕೇಳು ತ್ತಾನೆ. "ಅವರು ನನ್ನನ್ನು ಮೇಲ್ಕಂಡಂತೆ ಕೇಳುತ್ತಾರೆ. ನಾನು ಹೇಗೆ ಉತ್ತರಿಸಲಿ?" ಅವರು ಹೇಳುತ್ತಾರೆ "ನನಗೂ ಈ ವಿಷಯವು ತಿಳಿಯದು. ನಾವು ಅವರ ಬಳಿಗೇ ಶಿಷ್ಯರಾಗಿ ತೆರಳಿ ಅವರ ಮನೆಯಲ್ಲಿ ವೇದಾಭ್ಯಾಸವನ್ನು ಮಾಡಿ ಅವರಿಂದ ದತ್ತ ವಾಗುವ ಜ್ಞಾನವನ್ನು ಪಡೆಯೋಣ. ಬಾ ನಾವಿಬ್ಬರೂ ಹೋಗೋಣ." ಹೀಗೆ ಹೇಳಿ ಅವರಿಬ್ಬರೂ ತಮ್ಮ ಕೈಲಿ ಸಮಿಧೆಗಳನ್ನು ಹಿಡಿದುಕೊಂಡು ಚಿತ್ರಗಾರ್ಗ್ಯ ಯಣಿಯ ಸಮೀಪಕ್ಕೆ ಬಂದು ಹೇಳುತ್ತಾರೆ "ನಾವು ಶಿಷ್ಯರಾಗಿ ತಮ್ಮ ಸಮೀಪಕ್ಕೆ ಬರಬಹುದೇ ?" ಆಗ ಅವರು ಹೇಳುತ್ತಾರೆ "ಓ ಗೌತಮ ನೀನು ಬ್ರಹ್ಮಜ್ಞಾನ ವನ್ನು ಪಡೆಯಲು ಅರ್ಹನಾಗಿರುತ್ತೀಯೆ. ಈ ವಿಷಯದಲ್ಲಿ ನೀನು ಮೋಸ ಹೋಗಿಲ್ಲ. ಬಾ ನಿನಗೆ ಎಲ್ಲ ವಿಷಯಗಳನ್ನೂ ಬೋಧಿಸುತ್ತೇನೆ."

ಸಹೋವಾಚ–ಏವೈಕೇ ಚಾಸ್ಮಾಲ್ಲೋಕಾತ್ ಪ್ರಯಂತಿ । ಚಂದ್ರಮ ಸಮೇ ವತೇ ಸರ್ವೇಗಚ್ಛನ್ತಿ । ತೇಷಾಂ ಪ್ರಾಣೈಃ ಪೂರ್ವಪಕ್ಷ ಆಪ್ಯಾಯತೇ, ತಾನ ಪರಾಪಕ್ಷೇಣ ಪ್ರಜನಯತಿ । ಏತದ್ವೈ ಸ್ವರ್ಗಸ್ಯ ಲೋಕಸ್ಯದ್ವಾರಂ ಯಚ್ಚಂದ್ರಮಾಃ । ತಯಃ ಪ್ರತ್ಯಾಃ ತಮತಿ ಸೃಜತೇ । ಅಥಯ ಏನಂ ನ ಪ್ರತ್ಯಾಹತಮಿಹ ವೃಷ್ಟಿರ್ಭೂತ್ವಾ ವರ್ಷತಿ । ಸ ಇಹ ಕೀಟೋ ವಾ ಪತಂ ಗೋವಾ ಶಕುನಿರ್ವಾ, ಶಾರ್ದೂಲೋ ವಾ ಸಿಂಹೋವಾ ಮತ್ಸ್ಯೋವಾ ಪರಶ್ವಾವಾ ಪುರುಷೋವಾಽನ್ಯೋವೈ ತೇಷು ಸ್ಥಾನೇಷು ಪ್ರತ್ಯಾಜಾಯತೇ । ಯಥಾ ಕರ್ಮ ಯಥಾ ವಿದ್ಯಂ । ತಮಾಗತಂ ಪೃಚ್ಛತಿ–ಕೋಽಸೀತಿ । ತಂಪ್ರತಿ ಬ್ರೂಯಾತ್–ವಿಚಕ್ಷಣಾ ದೃತವೋರೇತ ಆವೃತಂ ·ಪಂಚದಶಾತ್ ಪ್ರಸೂತಾತ್ ಪಿತ್ರ್ಯವತಃ । ತಸ್ಮಾಪುಂಸಿ ಕರ್ತರ್ಯೇರಯ ದ್ವಸೂಪುಂಸ್ತಾಂ ಕರ್ತಾ ಮಾತರಿ ಮಾನಿಷಿಕ್ತ । ಸಜಾಯ ಉಪಜಾಯ ಮಾನೋ ದ್ವಾದಶ

ತ್ರಯೋದಶ ಉಪಮಾಸೋ ದ್ವಾದಶ ತ್ರಯೋದಶೇನ ಪಿತ್ರಾಸಂ ತದ್ವಿವೇ ಪ್ರತಿತದ್ವಿದೇಽಹಂ । ತನ್ಮಋುತುವೋ ಅಮೃತ್ಯವ ಆಭರಧ್ವಂ । ತೇನ ಸತ್ಯೇನ ತೇನ ತಪಸಾ ಋತು ರಸ್ಮಿ । ಆರ್ತವೋಽಸ್ಮಿ । ಕೋಽಸ್ಮಿ । ತ್ವಮ ಸ್ಮೀತಿ ತಪತಿ ಸೃಜತೇ ॥ ೨ ॥

ತರುವಾಯ ಆತನು ಹೇಳುತ್ತಾನೆ :—"ಈ ಪ್ರಪಂಚವನ್ನು ಬಿಟ್ಟು ತೆರಳುವವರು ನಿಜವಾಗಿಯೂ ಚಂದ್ರಲೋಕಕ್ಕೆ ಹೋಗುತ್ತಾರೆ. ಪೂರ್ವಾರ್ಧದ ಶುಕ್ಲಪಕ್ಷದಲ್ಲಿ ಚಂದ್ರನು ಆ ಪ್ರಾಣಿಗಳ ಮೇಲೆ ಪ್ರಭಾವವನ್ನು ಬೀರುತ್ತಾನೆ. ಆದರೆ ಉತ್ತರಾರ್ಧದ ಕೃಷ್ಣ ಪಕ್ಷದಲ್ಲಿ ಆ ಪ್ರಾಣಿಗಳು ಪುನರ್ಜನಿಸುತ್ತವೆ. ಆದ್ದರಿಂದ ಚಂದ್ರನು ಸ್ವರ್ಗವೆಂಬ ಲೋಕದ ಬಾಗಿಲಿನಂತಿದ್ದಾನೆ. ಯಾರು ಅದಕ್ಕೆ ಸರಿಯಾಗಿ ಉತ್ತರಿಸುವರೋ ಅವರು ಬಿಡುಗಡೆ ಹೊಂದಿ ಅಂತರಿಕ್ಷ ಲೋಕಕ್ಕೆ ಹೋಗುತ್ತಾರೆ. ಆದರೆ ಯಾರು ಸರಿಯಾಗಿ ಪ್ರತ್ಯುತ್ತರಿಸುವುದಿಲ್ಲವೋ ಅವರು ಮಳೆಯಾಗಿ ಬದಲಾವಣೆ ಹೊಂದಿ ಭೂಮಿಯ ಮೇಲೆ ಮಳೆಯಾಗಿ ಸುರಿಯುತ್ತಾರೆ. ಇಲ್ಲವೇ ಕೀಟಗಳಾಗಿ, ಪತಂಗಗಳಾಗಿ, ಮೀನಾಗಿ, ಪಕ್ಷಿಯಾಗಿ, ಸಿಂಹವಾಗಿ, ಕರಡಿಯಾಗಿ, ಹಾವಾಗಿ, ಹುಲಿಯಾಗಿ, ಮಾನವನಾಗಿ, ಅಥವಾ ಬೇರಾವ ರೂಪದಲ್ಲಾಗಲೀ, ಈಗಿನ ಪರಿಸ್ಥಿತಿಯಲ್ಲಿ ಅಥವಾ ಬೇರೊಂದು ಪರಿಸ್ಥಿತಿಯಲ್ಲಿ ಅವರವರ ಪೂರ್ವ ಕರ್ಮಕ್ಕೆ ತಕ್ಕಂತೆ ಪುನರ್ಜನಿಸುತ್ತಾರೆ. ಅವರವರ ಜ್ಞಾನಕ್ಕೆ ತಕ್ಕಂತೆ ಪುನರ್ಜನಿಸಿದಾಗ ಅವನು ಕೇಳುತ್ತಾನೆ "ನೀನು ಯಾರು ?" ಅವನು ಹೀಗೆ ಹೇಳಬೇಕು "ಅದ್ಭುತ ಪ್ರಕಾಶವುಳ್ಳ ಹೇ ಋತುಗಳೇ ನಮ್ಮ ಪಿತೃಗಳು ಹದಿನೈದು ತಲಾಂತರಗಳಿಂದ ಸಂಗ್ರಹಿಸಿಕೊಂಡ ಅಂಕುರಗಳಿಂದ ಒಬ್ಬ ಮನುಷ್ಯನಲ್ಲಿ ಪ್ರವೇಶ ಪಡೆದು ಬೇರೊಬ್ಬ ಮಾನವನಿಂದ ತಾಯಿಯೊಬ್ಬಳಲ್ಲಿ ಸ್ಥಾಪಿಸಲ್ಪಟ್ಟ ಪ್ರತಿನಿಧಿಯಾಗಿದ್ದೇನೆ. ಆಮೇಲೆ ಹನ್ನೆರಡನೆಯ ಅಥವ ಹದಿಮೂರನೆಯ ತಿಂಗಳಿನಲ್ಲಿ ಒಬ್ಬ ತಂದೆಯ ಸಂಯೋಗದಿಂದ ಇನ್ನೊಬ್ಬರ ಸಂಯೋಗಕ್ಕೆ ಬಂದು ಹನ್ನೆರಡು ಅಥವಾ ಹದಿಮೂರನೆಯ ತಿಂಗಳಿನಲ್ಲಿ ಜನ್ಮ ಪಡೆದಿದ್ದೇನೆ, ಆದ್ದರಿಂದ ಓ ಋತುಗಳೇ ಈ ನಿಜತ್ವವನ್ನೂ ತಪಸ್ಸಿನ ಮೌಲ್ಯವನ್ನೂ ಬಳಸಿಕೊಂಡು ನನ್ನನ್ನು ಅಮೃತನನ್ನಾಗಿ ಮಾಡಿ. ನಾನು ಋತುವಿನಂತಿದ್ದೇನೆ. ಋತುವಿಗೆ ಸಂಬಂಧಿಸಿದಂತೆ ಇದ್ದೇನೆ." ಆಗ ಋಷಿಯು ಕೇಳುತ್ತಾನೆ. "ನೀನು ಯಾರು ?" "ನೀನೇ ನಾನಾಗಿದ್ದೇನೆ" ಎಂದು ಹೇಳಲು ಅವನ ಬಿಡುಗಡೆಯಾಗುತ್ತದೆ.

ಸ ಏತಂ ದೇವಯಾನಂ ಪಂಥಾನ ಮಾಪದ್ಯಾಗ್ನಿ ಲೋಕಮಾಗಚ್ಛತಿ । ಸವಾಯುಲೋಕಂ । ಸ ಆದಿತ್ಯಲೋಕಂ । ಸ ವರುಣಲೋಕಂ । ಸ ಇಂದ್ರ

ಲೋಕಂ । ಸ ಪ್ರಜಾಪತಿಲೋಕಂ । ಸ ಬ್ರಹ್ಮಲೋಕಂ । ತಸ್ಯಹ ವಾ ಏತಸ್ಯ ಬ್ರಹ್ಮಲೋಕ್ಯಸ್ಯಾರೋಹ್ರದಃ । ಮುಹೂರ್ತಾಯೇಷ್ಟಿಹಾಃ । ವಿಜರಾನದೀ । ಇಲ್ಯೋವೃಕ್ಷಾಃ । ಸಾಲಜ್ಯಂ ಸಂಸ್ಥಾನಂ । ಅಪರಾಜಿತ ಮಾಯತನಂ । ಇಂದ್ರಜಾಪತಿದ್ವಾರಗೋಪೌ । ವಿಭುಪ್ರಮಿತಂ । ವಿಚ ಕ್ಷಣಾऽऽಸಂದೀ । ಅಮಿತೌಜಾಃ ಪರ್ಯಂಕಃ । ಪ್ರಿಯಾಚಮಾನಸೀ । ಪ್ರತಿ ರೂಪಾಚ ಚಾಕ್ಷುಷೀ । ಪುಷ್ಪಾಣ್ಯಾವಯತೋ ವೈರಾಜಗಾನಿ । ಅಂಬಾ ಶ್ಚಾಂಬಾಯ ವೀಶ್ಚಾಪ್ಸರಸಃ । ಅಂಬಯಾನದ್ಯಃ । ತಮಿತ್ಥಂವಿದಾಗಚ್ಛತಿ । ತಂಬ್ರಹ್ಮಾऽऽಹಾಭಿಧಾವತ ಮಮ ಯಶಸಾ ವಿಜರಾಂ ವಾ ಅಯಂ ನದೀಂ ಪ್ರಾಪತ್ । ನ ವಾ ಅಯಂಜರಯಿಷ್ಯ ತೀತಿ ||೩||

ದೇವಯಾನ ಮಾರ್ಗವನ್ನು ಪ್ರವೇಶಿಸಿ ಅವನು ಅಗ್ನಿಲೋಕಕ್ಕೆ ಬರುತ್ತಾನೆ. ಅಲ್ಲಿಂದ ವಾಯುಲೋಕಕ್ಕೂ, ಅಲ್ಲಿಂದ ಆದಿತ್ಯಲೋಕಕ್ಕೂ, ಅಲ್ಲಿಂದ ವರುಣ ಲೋಕಕ್ಕೂ, ಅಲ್ಲಿಂದ ಇಂದ್ರಲೋಕಕ್ಕೂ, ಅಲ್ಲಿಂದ ಪ್ರಜಾಪತಿಲೋಕಕ್ಕೂ, ಅಲ್ಲಿಂದ ಬ್ರಹ್ಮಲೋಕಕ್ಕೂ ಪ್ರಯಾಣ ಮಾಡುತ್ತಾನೆ. ಈ ಬ್ರಹ್ಮಲೋಕವು 'ಅರಾ' ಎಂಬ ಹ್ರದವನ್ನು, 'ಏಕ್ಷಿಹಾ' ಎಂಬ ಘಳಿಗೆಗಳನ್ನೂ, 'ವಿರಜಾ' ಎಂಬ ನದಿಯನ್ನೂ, 'ಇಲ್ಯಾ' ಎಂಬ ವೃಕ್ಷವನ್ನೂ, 'ಸಾಲಜ್ಯ' ಎಂಬ ಸಂಸ್ಥಾನವನ್ನೂ, 'ಅಪರಾಜಿತಾ' ಎಂಬ ನಿವಾಸವನ್ನೂ, ದ್ವಾರಪಾಲಕರಾದ ಇಂದ್ರ ಮತ್ತು ಪ್ರಜಾ ಪತಿಗಳನ್ನು, 'ವಿಭು' ಎಂಬ ನಡು ಮನೆಯನ್ನೂ, 'ವಿಚಕ್ಷಣೆ' ಎಂಬ ಸಿಂಹಾಸನ ವನ್ನೂ, 'ಅಮಿತೌಜಸ'ವೆಂಬ ಪರ್ಯಂಕಗಳನ್ನೂ, ಮಾನಸಿ ಎಂಬ ಪ್ರಿಯೆಯನ್ನೂ ಚಾಕ್ಷುಸೀ ಎಂಬ ಅದರ ಪ್ರತಿರೂಪವನ್ನೂ, ಇವೆರಡೂ ಪುಷ್ಪಗಳಿಂದ ಪ್ರಪಂಚ ವನ್ನು ಹೆಣೆಯುತ್ತಾರೆ. ಮಾತೃಗಳು, ದಾದಿಯರು, ಅಪ್ಸರಸೆಯರೂ, ಅಂಬಾ ಎಂಬ ನದಿಯೂ, ಈ ಲೋಕದಲ್ಲಿ ಸೇರಿರುತ್ತದೆ. ಇದನ್ನೆಲ್ಲ ಅರಿತುಕೊಂಡವನು ಬ್ರಹ್ಮನ ಬಳಿಗೆ ಬಂದು ಮುಂದೆ ಪ್ರಯಾಣ ಮಾಡುತ್ತ ಹೇಳಿಕೊಳ್ಳುತ್ತಾನೆ. "ನಾನು ನನ್ನ ಯಶಸ್ಸಿಗೆ ಕಾರಣನಾಗಿ ಅಜರಾ ನದಿಯನ್ನು ಸೇರಿದೆ" ಆಗ ಅವನು ವೃದ್ಧಾಪ್ಯವನ್ನು ಹೊಂದುವುದಿಲ್ಲ.

ತಂ ಪಂಚಶತಾನ್ಯಪ್ಸರಸಾಂ ಪ್ರತಿಯನ್ತಿ । ಶತಂ ಚೂರ್ಣ ಹಸ್ತಾಃ । ಶತಂ ವಾಸೋ ಹಸ್ತಾಃ । ಶತಂಫಲ ಹಸ್ತಾಃ । ಶತಮಾಂಜನ ಹಸ್ತಾಃ । ಶತಂ ಮಾಲ್ಯ ಹಸ್ತಾಃ । ತಂ ಬ್ರಹ್ಮಾಲಂಕಾರೇಣಾಲಂಕುರ್ವನ್ತಿ । ಸ ಬ್ರಹ್ಮಾ ಲಂಕಾರೇಣಾಲಂಕೃತೋ ಬ್ರಹ್ಮವಿದ್ವಾನ್ ಬ್ರಹ್ಮಾಭಿಪ್ರೈತಿ । ಸ ಆಗಚ್ಛತ್ಯಾರಂ

ಹ್ರದಂ । ತಂ ಮನಸಾ ಅತ್ಯೋತೀ । ತಮಿತ್ವಾ ಸಂಪ್ರತಿವಿದೋ ಮಜ್ಜನ್ತಿ । ಸ ಆಗಚ್ಛತಿ । ಮುಹೂರ್ತಾನ್ ಯೇಷ್ಟಿಹಾನ್ । ತೇsಸ್ಮಾದ ಪದ್ರವನ್ತಿ । ಸ ಆಗಚ್ಛತಿ । ವಿಜರಾಂ ನದೀಂತಾಂ ಮನಸ್ಯೈವಾತ್ಯೇತಿ । ತತ್ಸುಕೃತ ದುಷ್ಕೃತೇ ಧುನುತೇ । ತಸ್ಯಪ್ರಿಯಾಜ್ಞಾತಯಃ ಸುಕೃತ ಮುಪಯನ್ತಿ । ಅಪ್ರಿಯಾ ದುಷ್ಕೃತಂ । ತದ್ಯಥಾರಥೇ ನಘಾತಯನ್ ರಥಚಕ್ರೇ ಪರ್ಯವೇಕ್ಷೇತ । ಏವಮಹೋರಾತ್ರೇ ಪರ್ಯವೇಕ್ಷತೇ । ಏವಂ ಸುಕೃತ ದುಷ್ಕೃತೇ ಸರ್ವಾಣಿಚ ದ್ವಂದ್ವಾನಿ । ಸಏಷವಿಸುಕೃತೋ ವಿದುಷ್ಕೃತೋ ಬ್ರಹ್ಮವಿದ್ವಾನ್ ಬ್ರಹ್ಮೈವಾಭಿಪ್ರೈತಿ ॥೪॥

ಐದು ನೂರು ಅಪ್ಸರೆಯರು ಅವನ ಕಡೆಗೆ ಹೋಗುತ್ತಾರೆ. ಅವರಲ್ಲಿ ನೂರು ಮಂದಿ ತಮ್ಮ ಕೈಗಳಲ್ಲಿ ಹಣ್ಣುಗಳನ್ನೂ, ನೂರು ಮಂದಿ ತಮ್ಮ ಕೈಗಳಲ್ಲಿ ಸುಗಂಧ ತೈಲಗಳನ್ನೂ, ನೂರು ಮಂದಿ ತಮ್ಮ ಕೈಗಳಲ್ಲಿ ಪುಷ್ಪಹಾರಗಳನ್ನೂ, ನೂರು ಮಂದಿ ತಮ್ಮ ಕೈಗಳಲ್ಲಿ ವಸ್ತ್ರಾಭರಣಗಳನ್ನೂ, ನೂರು ಮಂದಿ ತಮ್ಮ ಕೈಗಳಲ್ಲಿ ಸುಗಂಧ ಪುಡಿಗಳನ್ನೂ ತಂದಿರುತ್ತಾರೆ. ಅವರು ಬ್ರಹ್ಮನನ್ನು ಅವೆಲ್ಲವುಗಳಿಂದ ತಕ್ಕರೀತಿಯಲ್ಲಿ ಅಲಂಕರಿಸುತ್ತಾರೆ. ಈ ರೀತಿ ಅಲಂಕರಿಸಲ್ಪಟ್ಟ ಬ್ರಹ್ಮನು ಬಳಿಗೇ ಬರುತ್ತಾನೆ. ಅವನು ಅರಾ ಎಂಬ ಸರೋವರಕ್ಕೆ ಬರುತ್ತಾನೆ. ಮತ್ತು ಅದನ್ನು ತನ್ನ ಮನಸಿನಿಂದಲೇ ದಾಟುತ್ತಾನೆ. ಅಲ್ಲಿಗೆ ಬರುತ್ತಲೇ ವರ್ತಮಾನವನ್ನು ಮಾತ್ರ ಅರಿತವರು ಮುಳುಗಿ ಹೋಗುತ್ತಾರೆ. ತರುವಾಯ ಅವನು 'ಏಷ್ಟಿಹಾ' ಎಂಬ ಘಳಿಗೆಗೆ ಬರುತ್ತಾನೆ. ಮತ್ತು ಅವನಿಂದ ಪಲಾಯನ ಮಾಡುತ್ತಾನೆ. ಅಲ್ಲಿಂದ ಅವನು ವಿರಜಾ ನದಿಗೆ ಬರುತ್ತಾನೆ. ಇದನ್ನು ಅವನು ಮನಸ್ಸಿನಿಂದಲೇ ದಾಟುತ್ತಾನೆ. ಅಲ್ಲಿ ಅವನು ತನ್ನ ಪುಣ್ಯಫಲಗಳೆಲ್ಲವನ್ನೂ ಮತ್ತು ಪಾಪಫಲಗಳೆಲ್ಲವನ್ನೂ ನಿವೃತ್ತಿಗೊಳಿಸುತ್ತಾನೆ. ಅವನ ಪ್ರಿಯಜ್ಞಾತಿಗಳು ಅವನ ಸುಕೃತದ ಕಡೆಗೆ ಧಾವಿಸುತ್ತಾರೆ. ಮತ್ತು ಅಪ್ರಿಯರು ದುಷ್ಕೃತ್ಯಗಳ ಕಡೆಗೆ ಹೋಗುತ್ತಾರೆ. ತರುವಾಯ ಅವರಿಂದ ಸ್ಪರ್ಶಿಸಲ್ಪಡದೆ ರಥದಲ್ಲಿ ಒಬ್ಬನೇ ಕುಳಿತುಕೊಂಡು ಎರಡು ಚಕ್ರಗಳ ಕಡೆಗೂ ನೋಡುತ್ತ ರಥವನ್ನು ನಡೆಸುತ್ತಾನೆ. ಹಾಗೆಯೇ ದಿವಾ ರಾತ್ರೆಗಳ ಕಡೆಗೂ, ಪುಣ್ಯ ಪಾಪ ಕರ್ಮಗಳ ಕಡೆಗೂ ಮತ್ತು ಎಲ್ಲಾ ದ್ವಂದ್ವ ಗುಣಗಳ ಕಡೆಗೂ ವೀಕ್ಷಿಸುತ್ತಾನೆ. ಈ ರೀತಿಯಾಗಿ ಪುಣ್ಯ ಪಾಪಗಳಿಂದ ಬಿಡುಗಡೆ ಹೊಂದಿ ಬ್ರಹ್ಮಜ್ಞಾನಿಯು ಬ್ರಹ್ಮನಿಂದ ಬ್ರಹ್ಮಕ್ಕೆ ತೆರಳುತ್ತಾನೆ.

ಸ ಆಗಚ್ಛತೀಲ್ಯ ವೃಕ್ಷಂ । ತಂ ಬ್ರಹ್ಮಾ ಗಂಧಃ ಪ್ರವಿಶತಿ । ಸ ಆಗಚ್ಛತಿ ಸಾಲಜ್ಯಂ ಸಂಸ್ಥಾನಂ । ತಂ ಬ್ರಹ್ಮ ರಸಃ ಪ್ರವಿಶತಿ । ಸ ಆಗಚ್ಛತ್ಯ ಪರಾಜಿತ

ಮಾಯತನಂ । ತಂ ಬ್ರಹ್ಮತೇಜಾಃ ಪ್ರವಿಶತಿ । ಸ ಆಗಚ್ಛತೀಂದ್ರ ಪ್ರಜಾಪತೀ ದ್ವಾರಗೋಪೌ । ತಾವಸ್ಮಾದವದ್ರವತಃ । ಸ ಆಗಚ್ಛತಿ ವಿಭುಪ್ರಾಮಿತಂ । ತಂ ಬ್ರಹ್ಮಯಶಃ ಪ್ರವಿಶತಿ । ಸ ಆಗಚ್ಛತಿ । ವಿಚಕ್ಷಣಾ ಮಾಸಂ ದೀಂ ಬೃಹದ್ರಥಂ ತರೇ ಸಾ ಮನೀ ಪೂರ್ವೌಪಾದೌ । ಶ್ಯೈತ ನೌಧ ಸೇರೌಪತೌ । ವೈರೂಪ ವೈರಾಜೇ ಅನೂಚ್ಯೇ । ಶಾಕ್ಕರ ರೈವತೇ ತಿರಶ್ಚೀ । ಸಾಪ್ರಜ್ಞಾ । ಪ್ರಜ್ಞಾ ಯಾಹಿ ವಿಪಶ್ಯತಿ । ಸ ಆಗಚ್ಛತ್ಯಾಮಿ ತೌಜಸಂ ಪರ್ಯಂಕಂ । ಸ ಪ್ರಾಣಃ । ತಸ್ಯ ಭೂತಂ ಭವಿಷ್ಯಶ್ಚ ಪೂರ್ವೌಪಾದೌ । ಶ್ರೀ ಶ್ಚೇರಾಂ ಚಾ ಪರೌ । ಬೃಹದ್ರಥಂತರೇ ಅನೂಚ್ಯೇ । ಭದ್ರಯಜ್ಞಾ ಯಜ್ಞೀಯೇ ಶೀರ್ಷಣ್ಯೇ । ಋಚಶ್ಚ ಸಾಮಾನಿಚ ಪ್ರಾಚೀನಾ ತಾನಾನಿ । ಯಜೂಂಷಿತಿ ರಶ್ಚೀನಾನಿ । ಸೋಮಾಂಶವ ಉಪಸ್ತರಣಂ । ಉದ್ಗೀಥ ಉಪಶ್ರೀಃ । ಶ್ರೀರುಪಬರ್ಹಣಂ । ತಸ್ಮಿನ್ ಬ್ರಹ್ಮಾऽऽಸ್ತೇ । ತಮಿತ್ಥಾಂ ವಿತ್ ಪಾದೇ ನೈವಾಗ್ರ ಆರೋಹತಿ । ತಂ ಬ್ರಹ್ಮಾ ಪೃಚ್ಛತಿ—ಕೋऽಸೀತಿ ತಂಪ್ರತಿ ಬ್ರೂಯಾತ್ ||೫||

ಅವನು ಇಲ್ಯ ವೃಕ್ಷದ ಬಳಿಗೆ ಬರುತ್ತಾನೆ. ಆಗ ಬ್ರಹ್ಮಾಗಂಧವು ಅವನೊಳಗೆ ಪ್ರವೇಶಿಸುತ್ತದೆ. ತರುವಾಯ ಸಾಲಜ್ಯ ಸಂಸ್ಥಾನಕ್ಕೆ ಬರುತ್ತಾನೆ. ಅಲ್ಲಿ ಅವನಿಗೆ ಬ್ರಹ್ಮರಸವು ಪ್ರವೇಶಿಸುತ್ತದೆ. ಅಲ್ಲಿಂದ ಅಪರಾಜಿತ ಎಂಬ ನಿವಾಸಕ್ಕೆ ಬರುತ್ತಾನೆ. ಅಲ್ಲಿ ಬ್ರಹ್ಮತೇಜಸ್ಸು ಅವನನ್ನು ಬಳಸಿಕೊಳ್ಳುತ್ತದೆ. ಅಲ್ಲಿಂದ ಇಬ್ಬರು ದ್ವಾರ ಪಾಲಕರಾದ ಇಂದ್ರ ಮತ್ತು ಪ್ರಜಾಪತಿಯ ಬಳಿಗೆ ಬರುತ್ತಾನೆ. ಅವರು ಅವನಿಂದ ತಪ್ಪಿಸಿಕೊಂಡು ಓಡಿ ಹೋಗುತ್ತಾರೆ. ಅಲ್ಲಿಂದ ವಿಭುವೆಂಬ ನಡುಮನೆಗೆ ಬರುತ್ತಾನೆ. ಅಲ್ಲಿ ಬ್ರಹ್ಮಯಶವು ಅವನನ್ನು ಸೇರುತ್ತದೆ. ಅಲ್ಲಿಂದ ವಿಚಕ್ಷಣೆ ಎಂಬ ಸಿಂಹಾಸನದ ಬಳಿಗೆ ಬರುತ್ತಾನೆ. ಅದಕ್ಕೆ ಸಾಮವೇದವೂ, ಬೃಹದ್ರಥಂತರಗಳೂ ಮುಂಗಾಲು ಗಳಾಗಿರುತ್ತವೆ. ಶ್ಯೈತ ಮತ್ತು ನೌಧಸಗಳು ಅದರ ಹಿಂಗಾಲುಗಳಾಗಿರುತ್ತವೆ. ವೈರೂಪ ಮತ್ತು ವೈರಾಜ್ಯಗಳು ಎರಡೂ ಉದ್ದವಾದ ಭಾಗಗಳಾಗಿರುತ್ತವೆ. ಶಾಕ್ಕರ ಮತ್ತು ರೈವತಗಳು ಎರಡು ಮೂಲೆಗಳಾಗಿರುತ್ತವೆ. ಅಲ್ಲಿ ಪ್ರಜ್ಞೆಗಾಗಿ ಪ್ರಜ್ಞೆಯನ್ನು ಕಂಡುಕೊಳ್ಳುತ್ತಾನೆ. ಅಲ್ಲಿಂದ ಅಮಿತೌಜಸ್ಸೆಂಬ ಹಾಸಿಗೆಯ ಬಳಿಗೆ ಬರುತ್ತಾನೆ. ಅದು ಪ್ರಾಣವಾಗಿರುತ್ತದೆ. ಭೂತ ಮತ್ತು ಭವಿಷ್ಯತ್ತುಗಳು ಅದರ ಮುಂಗಾಲುಗಳಾಗಿರುತ್ತವೆ. ಏಳಿಗೆ ಮತ್ತು ಪೃಥಿವಿಗಳು ಅದರ ಹಿಂಗಾಲುಗಳು. ಭದ್ರ ಮತ್ತು ಯಜ್ಞಾ ಯಜ್ಞೀಗಳು ಅದರ ತಲೆಯ ಭಾಗಗಳು. ಬೃಹತ್ ಮತ್ತು ರಥಾಂತರಗಳು ಅದರ ಉದ್ದದ ಭಾಗಗಳು, ಋಕ್ ಮತ್ತು ಸಾಮವೇದಗಳು

ಉದ್ದವಾಗಿ ಹಾಸಿದ ಹಗ್ಗಗಳು, ಯಜುರ್ವೇದವು ಮೂಲೆಯಲ್ಲಿ ಹಾಸಿರುವವು, ಚಂದ್ರನು ಮೆತ್ತೆಯಾಗುತ್ತಾನೆ. ಉದ್ಗೀಥವು ಅದರ ಹಾಸಾಗುತ್ತದೆ. ಸಂಪತ್ತು ಅದರ ತಲೆದಿಂಬು. ಈ ಹಾಸಿಗೆಯ ಮೇಲೆ ಬ್ರಹ್ಮನು ಆಸೀನನಾಗುತ್ತಾನೆ. ಇದನ್ನು ಯಾರು ಅರಿತುಕೊಂಡಿರುತ್ತಾರೋ ಅವರು ಒಂದು ಕಾಲಿನಲ್ಲಿ ಅದನ್ನು ಹತ್ತುತ್ತಾರೆ. ಆಗ ಬ್ರಹ್ಮನು ಕೇಳುತ್ತಾನೆ. "ನೀನು ಯಾರು"? ಅದಕ್ಕೆ ಅವನು ಉತ್ತರಿಸುತ್ತಾನೆ.

ಋತ ರಸ್ಮಿ । ಆರ್ತವೋಽಸ್ಮಿ । ಆಕಾಶಾದ್ಯೋನೇಃ ಸಂಭೂತೋ ಭಾರ್ಯಾ ಏತದ್ರೇತಃ । ಸಂವತ್ಸರ ಸ್ಯ ತೇಜೋ ಭೂತಸ್ಯ ಭೂತಸ್ಯ ಭೂತಸ್ಯಾಽಽತ್ಮಾತ್ವ ಮಾತ್ಮಾಽಸಿ । "ಯತ್ತ್ವಮಸಿಸೋಽಹಮಸ್ಮಿ"ತಿ । ತಮಾಹ–ಕೋಽಹಮಸ್ಮೀತಿ । ಸತ್ಯಮಿತಿ ಬ್ರೂಯಾತ್ । ಕಿಂ ತದ್ಯತ್ಸತ್ಯ ಮಿತಿ । ಯದನ್ಯದ್ದೇವೇಭ್ಯಶ್ಚ ಪ್ರಾಣೇಭ್ಯಶ್ಚ ತತ್ಸತ್ । ಅಥಯದ್ದೇವಾಶ್ಚ ಪ್ರಾಣಾಶ್ಚ ತತ್ತ್ಯಂ । ತದೇಕಯಾ ವಾಚಾಽಭಿ ವ್ಯಾಹ್ರಿಯತೇ ಸತ್ಯಮಿತಿ । ಯೇ ತಾವಾದಿದಂ ಸರ್ವಂ । ಇದಂ ಸರ್ವಮಸಿ । ಇತ್ಯೇವೈನಂ ತದಾಽಽಹ । ತದೇ ತ ದೃಕ್ ಶ್ಲೋಕೇ ನಾಭ್ಯುಕ್ತಂ ||೬||

"ನಾನು ಋತುವು. ನಾನು ಹವಾಗುಣಗಳಿಗೆ ಸಂಬಂಧಿಸಿರುತ್ತೇನೆ. ಆಕಾಶವು ಮೂಲವಾಗಿದ್ದು ಒಬ್ಬ ಹೆಂಗಸಿಗೆ ರೇತೋ ರೂಪವಾಗಿ ರಚಿಸಲ್ಪಟ್ಟಿದ್ದೇನೆ. ಇದು ಸಂವತ್ಸರದ ತೇಜಸ್ಸಾಗಿರುತ್ತದೆ ಮತ್ತು ಪ್ರತಿಯೊಂದು ಭೂತಕ್ಕೂ ಭೂತವಾಗಿರುತ್ತದೆ. ನೀನು ಈಗಿರುವಂತೆ ಹೇಗೆ ಪ್ರತಿಯೊಂದು ಭೂತವಾಗಿದ್ದೀಯೋ ಹಾಗೆ ನಾನೂ ಇದ್ದೇನೆ." ಅವನು ಕೇಳುತ್ತಾನೆ "ನಾನು ಯಾರು ?" ಅದು ಸತ್ಯವೆಂದು ಅವನು ಹೇಳಬೇಕು. "ಹಾಗೆಂದರೇನು ?" ಎಂದು ಕೇಳುತ್ತಾನೆ. "ಅದು ಸತ್ಯವೇ"? ದೇವರುಗಳಿಂದ ಭಿನ್ನವಾಗಿರುವ ಜ್ಞಾನೇಂದ್ರಿಯಗಳೂ, ಪ್ರಾಣವೂ, 'ಸತ್' ಎಂದೆನ್ನಿಸಿಕೊಳ್ಳುತ್ತದೆ. ದೇವರುಗಳೂ, ಮುಖ್ಯ ಪ್ರಾಣವೂ 'ತ್ಯಂ' ಎನ್ನಿಸಿಕೊಳ್ಳುತ್ತದೆ. ಸತ್ಯಂ ಎಂಬುದರ ವ್ಯುತ್ಪತ್ತಿ ಹೀಗಿರುತ್ತದೆ. ಈ ಲೋಕದಲ್ಲಿ ಏನೇನಿದೆಯೋ ಅವೆಲ್ಲವೂ ಸಂಪೂರ್ಣವಾಗಿದೆ. ಈ ರೀತಿಯಾಗಿ ಅವನು ಅವನಿಗೆ ಅರುಹುತ್ತಾನೆ. ಇದನ್ನು ಋಗ್ವೇದವು ಉದ್ಘೋಷಿಸುತ್ತದೆ.

ಯಜೂದರಃ ಸಾಮಶಿರಾ ಅಸಾವೃಂಗ್ಮೂರ್ತಿ ರವ್ಯಯಃ । ಸಬ್ರಹ್ಮೇತಿ ಸವಿಜ್ಞೇಯ ಋಷಿರ್ಬ್ರಹ್ಮ ಮಯೋ ಮಹಾನಿಶಿ । ತಮಾಹಕೇನ ಮೇ

ಪಾಸ್ನಾನಿ ನಾಮ್ನ್ಯಾಪ್ನೋಷೀತಿ । ಪ್ರಾಣೇನೇತಿ ಬ್ರೂಯಾತ್ । ಕೇನ ಸ್ತ್ರೀ ನಾಮಾನೀತಿ । ವಾಚೇತಿ । ಕೇನ ನಪುಂಸಕಾ ನೀತಿ । ಮನಸೇತಿ । ಕೇನ ಗಂಧಾ ನಿತಿ । ಘ್ರಾಣೇನೇ ತ್ಯೇವ ಬ್ರೂಯಾತ್ । ಕೇನರೂಪಾಣೀತಿ । ಚಕ್ಷುಷೇತಿ । ಕೇನಶಬ್ದಾನೀತಿ । ಶ್ರೋತ್ರೇಣೇತಿ । ಕೇನಾನ್ನ ರಸಾನಿತಿ । ಜಿಹ್ವವಿತಿ । ಕೇನ ಕರ್ಮಾಣೀತಿ । ಹಸ್ತಾಭ್ಯಾಂ ಇತಿ । ಕೇನ ಸುಖ ದುಃಖೇ ಇತಿ । ಶರೀರೇಣೇತಿ । ಕೇನ ಆನಂದಂ ರತಿಂ ಪ್ರಜಾಮಿತಿ । ಉಪಸ್ಥೇನೇತಿ । ಕೇನೇತ್ಯಾ ಇತಿ । ಪಾದಾಭ್ಯಾಂ ಇತಿ । ಕೇನಧಿಯೋ ವಿಜ್ಞಾತವ್ಯಂ ಕಾಮಾ ನಿತಿ । ಪ್ರಜ್ಞ ಏತಿ ಬ್ರೂಯಾತ್ । ತಮಾಹ–ಆಪೋವೈಖಲು ಮೇಹ್ಯ ಸಾವಯಂತೇ ಲೋಕ ಇತಿ । ಸಾಮಾಬ್ರಹ್ಮಣೋ ಜಿತೀರ್ಯಾ ವ್ಯಷ್ಟಿ ಸ್ತಾಂ ಜಿತಿ ಜಯತಿ । ತಾಂ ವ್ಯಷ್ಟಿಂ ವ್ಯಶ್ನುತೇ ಯ ಏವಂ ವೇದ ಯ ಏವಂ ವೇದ ||೭||

ಓಂಕಾರ ಮಹಾಮಂಡಲದಲ್ಲಿರುವ ಸವಿಜ್ಞೇಯ ಋಷಿಗೆ ಯಜುರ್ವೇದವು ಉದರ, ಸಾಮವೇದವು ಅವನ ತಲೆ, ಅವನ ದೇಹವು ಋಗ್ವೇದ, ಅವಿನಾಶಿಯಾದ ಇವನನ್ನು ಬ್ರಹ್ಮನೆನ್ನುತ್ತಾರೆ. ಅವನಿಗೆ ಹೇಳುತ್ತಾನೆ : "ನೀನು ಯಾವುದರಿಂದ ನನ್ನ ಪುರುಷ ನಾಮಗಳನ್ನು ಪಡೆಯುತ್ತಿ" ? ಅವನು ಹೀಗೆ ಹೇಳಬೇಕು: "ಪ್ರಾಣದಿಂದ". "ನನ್ನ ಸ್ತ್ರೀ ನಾಮಗಳನ್ನು" ? "ವಾಕ್ಕಿನಿಂದ", ''ಗಂಧ ಯಾವುದರಿಂದ" ? "ಆಘ್ರಾಣಿಸು ವುದರಿಂದ". "ಯಾವ ರೂಪಗಳಿಂದ ?'' ''ಕಣ್ಣುಗಳಿಂದ". "ಶಬ್ದವು ಯಾವುದ ರಿಂದ ?" "ಕಿವಿಗಳಿಂದ''. ''ಅನ್ನರಸಗಳು ಯಾವುದರಿಂದ'' ? ''ನಾಲಿಗೆ ಇಂದ''. "ಕರ್ಮಗಳು ಯಾವುದರಿಂದ'' ? ''ಎರಡು ಕೈಗಳಿಂದ''. "ಸುಖದುಃಖ ಗಳು ಏತರಿಂದ" ? ''ಶರೀರದಿಂದ". ಆನಂದ, ರತಿ ಮತ್ತು ಪ್ರಜನಗಳು ಏತ ರಿಂದ" ? "ಜನಾಂಗಗಳಿಂದ". ''ನಡಿಗೆಯು ಏತರಿಂದ? " ''ಪಾದಗಳಿಂದ''. ''ವಿಜ್ಞಾನವು ಏತರಿಂದ ?'' "ಕಾಮನೆಗಳಿಂದ.'' ''ಪ್ರಜ್ಞೆಯು ಏತರಿಂದ ?'' ''ಬುದ್ಧಿ ಇಂದ''. ಅವನು ಹೀಗೆ ಹೇಳಬೇಕೆಂದೇ ತಿಳಿಸುತ್ತಾನೆ. ''ಜಲವು ನಿಜ ವಾಗಿಯೂ ನನ್ನ ಪ್ರಪಂಚ. ಅದು ನಿನ್ನದೂ ಆಗಿರುತ್ತದೆ. ಜಯ ಪಡೆಯುವುದು ಬ್ರಹ್ಮನಿಗೆ. ಅವನಿಗೆ ಸೇರಿದುದೆಲ್ಲಾ ಅವನದೇ. ಯಾವುದನ್ನು ತಾನು ಜಯಿಸು ತ್ತಾನೋ ಮತ್ತು ಯಾವುದು ಅವನಿಗೆ ಸೇರಬೇಕೋ ಅದನ್ನು ಪಡೆಯುತ್ತಾನೆ. ಇದನ್ನು ಯಾರು ಬಲ್ಲರು ? ಇದನ್ನು ಯಾರು ಬಲ್ಲರು ?

## ಅಥದ್ವಿತೀಯೋಧ್ಯಾಯಃ

ಪ್ರಾಣೋ ಬ್ರಹ್ಮೇತಿ ಹಸ್ಮಾSSಹ ಕೌಷೀತಕಿಃ । ತಸ್ಯಹವಾ ಏತಸ್ಯ ಪ್ರಾಣಸ್ಯ ಬ್ರಹ್ಮಣೋ ಮನೋದೂತಂ । ವಾಕ್ ಪರಿವೇಷ್ಟ್ರೀ । ಚಕ್ಷುರ್ಗೋತ್ರಂ । ಶ್ರೋತ್ರಂ ಸಂ ಸ್ರಾವಯಿತೃ । ತಸ್ಮೈವಾ ಏತಸ್ಮೈ ಪ್ರಾಣಾಯ ಬ್ರಹ್ಮಣ ಏತಾಃ ಸರ್ವಾ ದೇವತಾ ಅಯಾಚಮಾನಾಯ ಬಲಿಂ ಹರನ್ತಿ । ತಥೋ ಏವಾಸ್ಮೈ ಸರ್ವಾಣಿ ಭೂತಾನ್ಯ ಯಾಚಮಾನಾಯೈವ ಬಲಿಂ ಹರನ್ತಿಯ ಏವಂ ವೇದ । ತಸ್ಯೋಪನಿಷನ್ನ ಯಾ ಚೋದಿತಿ । ತದ್ಯಥಾ ಗ್ರಾಮಂ ಭಿಕ್ಷಿತ್ವಾಲಬ್ಧ್ವೋಪವಿಶೇನ್ನಾಹ ಮತೋ ದತ್ತ ಮಶ್ನೀಯಾ ಮಿತಿ । ಯ ಏವೈನಂ ಪುರಸ್ತಾತ್ ಪ್ರತ್ಯಾಚಕ್ಷೀರಂ ಸ್ತ ಏವೈನ ಮುಪ ಮಂತ್ರಯನ್ತೇದ ದಾಮತ ಇತಿ , ಏಷ ಧರ್ಮೋSಯಾಚತೋಭವತಿ । ಅನ್ಯತಸ್ತ್ವೇ ವೈನ ಮುಪಮಂತ್ರಯನ್ತೇ–ದದಾಮತ ಇತಿ ||೧||

'ಉಸಿರಾಡುತ್ತಿರುವ ಪ್ರಾಣವೇ ಬ್ರಹ್ಮ', ಈ ರೀತಿಯಾಗಿ ಕೌಷೀತಕಿಯು ಹೇಳುತ್ತಿದೆ. ಬ್ರಹ್ಮನೇ ಆಗಿರುವ ಈ ಉಸಿರಾಡುವ ಪ್ರಾಣದಲ್ಲಿ ಮನಸ್ಸು ದೂತನು, ಕಣ್ಣುಗಳು ರಕ್ಷಕನು, ಕಿವಿಯು ಘೋಷಿಸುವವನು, ವಾಕ್ಕು ಗೃಹರಕ್ಷಕನು, ಯಾರು ಈ ರೀತಿ ಉಸಿರಾಡುತ್ತಿರುವ ಪ್ರಾಣದ ದೂತನನ್ನು ಮನಸ್ಸು ಎಂದು ಅರಿಯುವರೋ ಅವರು ದೂತನನ್ನು ಪಡೆಯುತ್ತಾರೆ. ಯಾರು ಕಣ್ಣುಗಳನ್ನು ರಕ್ಷಕನೆಂದ ಅರಿಯುವರೊ ಅವರು ರಕ್ಷಕನನ್ನು ಹೊಂದುತ್ತಾರೆ. ಯಾರು ಕಿವಿಗಳನ್ನು ಘೋಷಕನೆಂದು ಅರಿಯುವರೋ ಅವರು ಘೋಷಕನನ್ನು ಪಡೆಯುತ್ತಾರೆ, ಯಾರು ವಾಕ್ಕನ್ನು ಗೃಹ ರಕ್ಷಕನೆಂದು ಅರಿಯುವರೋ ಅವರು ಗೃಹ ರಕ್ಷಕನನ್ನು ಪಡೆಯುತ್ತಾರೆ. ಈ ಉಸಿರಾಡುವ ಬ್ರಹ್ಮನಾದ ಪ್ರಾಣನಿಗೆ ಈ ದೇವತೆಗಳಾದ ಮನಸ್ಸು, ಕಣ್ಣು, ಕಿವಿ, ವಾಕ್ಕು ಇವುಗಳು ಅವನು ಯಾಚಿಸದಿದ್ದರೂ ತಾವೇ ಸಮರ್ಪಣೆ ಮಾಡುತ್ತವೆ. ಹಾಗೆಯೇ ಈ ಉಸಿರಾಡುವ ಪ್ರಾಣಕ್ಕೆ ತಾನು ಭಿಕ್ಷೆ ಬೇಡದಿದ್ದರೂ ಇತರ ಎಲ್ಲಾ ದೇವತೆಗಳೂ ತಾವಾಗಿ ಸಮರ್ಪಣೆ ಮಾಡುತ್ತವೆ. ಯಾರು ಈ ಉಪನಿಷತ್ತಿನಂತೆ ''ಭಿಕ್ಷೆಬೇಡ'' ಎಂಬುದನ್ನರಿತುಕೊಂಡು ಮಾನವ ಜನ್ಮದಲ್ಲಿ ಗ್ರಾಮದಲ್ಲಿ ಭಿಕ್ಷಾಟನೆ ಮಾಡುವಾಗ ಏನೂ ದೊರೆಯದೆ ಕೆಳಗೆ ಕುಳಿತುಕೊಂಡು ''ಇಲ್ಲಿಯವರಿಂದ ಕೊಡಲ್ಪಟ್ಟಿರುವುದನ್ನು ನಾನು ಏನೂ ತಿನ್ನುವುದಿಲ್ಲ" ಎಂದುಕೊಂಡ ಕೂಡಲೇ ಹಿಂದೆ ಯಾರ್ಯಾರು ನಿರಾಕರಿಸಿದ್ದರೋ ಅವರು ತಾವಾಗಿಯೇ ಬಂದು ತಮ್ಮ ಕೊಡುಗೆಯನ್ನು ಸ್ವೀಕರಿಸಲು ಕೇಳಿಕೊಳ್ಳುತ್ತಾರೆ. ಅವನು ದಾನಿಗಳಲ್ಲಿ

ಭಿಕ್ಷವನ್ನು ಬೇಡದಿದ್ದರೂ ಅವರು ತಾವಾಗಿಯೇ ಬಂದು ''ಇದನ್ನು ಸ್ವೀಕರಿಸಿ'' ಎಂದು ಹೇಳುತ್ತಾರೆ.

ಪ್ರಾಣೋ ಬ್ರಹ್ಮೇತಿ ಹಸ್ಮಾಽಽಹ ಪೈಂಗಲ್ಯಃ । ತಸ್ಯಹ ವಾ ಏತಸ್ಯ ಪ್ರಾಣಸ್ಯ ಬ್ರಹ್ಮಣೋ ವಾಕ್ ಪರಸ್ತಾಚ್ಚಕ್ಷುು ರಾರುಂಧೇ । ಚಕ್ಷುಃ ಪರಸ್ತಾಚ್ಛ್ರೋತ್ರ ಮಾರುಂಧೇ ಶ್ರೋತ್ರಂ ಪರಸ್ತಾನ್ಮನ ಆರುಂಧೇ । ಮನಃಪರಸ್ತಾತ್ ಪ್ರಾಣ ಆರುಂಧೇ । ತಸ್ಮೈವಾ ಏತಸ್ಮೈ ಪ್ರಾಣಾಯ ಬ್ರಹ್ಮಣ ಏತಾಃ ಸರ್ವಾ ದೇವತಾ ಆಯಾಚಮಾನಾಯ ಬಲಂಹರನ್ತಿ । ತಥೋ ಏವಾಸ್ಮೈ ಸರ್ವಾಣಿ ಭೂತಾನ್ಯಯಾ ಚ ಮಾನಾಯೈವ ಬಲಿಂ ಹರನ್ತಿ ಯ ಏವಂ ವೇದ । ತಸ್ಯೋಪನಿಷನ್ನ ಯಾ ಚೇದಿತಿ । ತದ್ಯಥಾ ಗ್ರಾಮಂ ಭಿಕ್ಷಿತ್ವಾಽಲಬ್ಧ್ವೋಪ ವಿಶೇನ್ನಾಹ ಮತೋ ದತ್ತಮ ಶ್ರೀಯಾಮಿತಿ । ಯ ಏವೈನಂ ಪುರಸ್ತಾತ್ ಪ್ರತ್ಯಾಚ ಕ್ಷೀರಂ ಸ್ತ ಏವೈನ ಮುಪಮಂತ್ರಯನ್ತೇ–ದದಾಮತ ಇತಿ । ಏಷ ಧರ್ಮೋಽಯಾಚತೋ ಭವತಿ । ಅನ್ಯತಸ್ತ್ವೇವೈನ ಮುಪಮಂತ್ರಯನ್ತೇ ದದಾಮತ ಇತಿ ॥೨॥

'ಈ ಪ್ರಾಣನೇ ಬ್ರಹ್ಮ', ಹೀಗೆ ಪೈಂಗಲ್ಯನೆಂಬಾತನು ಪ್ರಾಣನೇ ಬ್ರಹ್ಮನೆಂದು ಹೇಳುತ್ತಿದ್ದನು. ವಾಕ್ಕಿನ ಹಿಂದೆ ಕಣ್ಣು ಮುಚ್ಚಲ್ಪಡುತ್ತದೆ; ಕಣ್ಣಿನ ಹಿಂದೆ ಕಿವಿಯು ಸೇರಿಕೊಂಡಿದೆ, ಕಿವಿಯ ಹಿಂದೆ ಮನಸ್ಸು ಸೇರಿಕೊಂಡಿದೆ. ಮನಸ್ಸಿನ ಹಿಂದೆ ಪ್ರಾಣವು ಸೇರಿಕೊಂಡಿದೆ. ಈ ಪ್ರಾಣನಿಂದ ಬ್ರಹ್ಮನಿಗೆ ತಾನು ಯಾಚನೆ ಮಾಡದಿದ್ದರೂ ಈ ದೇವತೆಗಳು ಕೊಡುಗೆಯನ್ನು ತರುತ್ತಾರೆ. ಹೀಗೆಯೇ ಇತರ ಎಲ್ಲಾ ದೇವತೆಗಳೂ ಈ ಪ್ರಾಣನು ಯೋಚಿಸದಿದ್ದರೂ ಎಲ್ಲವನ್ನೂ ಸಮರ್ಪಿಸುತ್ತಾರೆ. ಯಾರು ಈ ಉಪನಿಷತ್ತಿನ ಹೇಳಿಕೆಯಂತೆ "ಯಾಚನೆ ಮಾಡಬೇಡ" ಎಂಬುದನ್ನರಿತುಕೊಂಡು ಮಾನವ ಜನ್ಮದಲ್ಲಿ ಗ್ರಾಮದಲ್ಲಿ ಭಿಕ್ಷಾಟನೆ ಮಾಡುವಾಗ ಏನೂ ದೊರೆಯದೆ ಕೆಳಗೆ ಕುಳಿತುಕೊಂಡು "ನಾನು ಏನನ್ನೂ ತಿನ್ನುವುದಿಲ್ಲ" ಎಂದುಕೊಂಡ ಕೂಡಲೇ ಹಿಂದೆ ಯಾರ್ಯಾರು ನಿರಾಕರಿಸಿದ್ದರೋ ಅವರು ತಾವಾಗಿ ಬಂದು ತಮ್ಮ ಕೊಡುಗೆಗಳನ್ನು ಸ್ವೀಕರಿಸಲು ಕೇಳಿಕೊಳ್ಳುತ್ತಾರೆ. ಅವನು ದಾನಿಗಳಲ್ಲಿ ಯಾಚಿಸದಿದ್ದರೂ ಅವರು ತಾವಾಗಿಯೇ ಬಂದು "ಇದನ್ನು ಸ್ವೀಕರಿಸಿ" ಎನ್ನುತ್ತಾರೆ.

ಅಥಾನ ಏಕಧನಾ ವರೋಧನಂ । ಯದೇಕಧನ ಮಭಿಧ್ಯಾಯಾತ್ ಪೌರ್ಣ ಮಾಸ್ಯಾಂ ವಾಽಮಾವಾಸ್ಯಾಂ ವಾ ಶುದ್ಧ ಪಕ್ಷೇ ವಾ ಪುಣ್ಯೇ ನಕ್ಷತ್ರೇಽಗ್ನಿ

ಮುಪ ಸಮಾಧಾಯ ಪರಿಸಮೃಹ್ಯ ಪರಿಸ್ತೀರ್ಯ ಪರ್ಯುಕ್ಷ್ಯೋತ್ಪೂಯ ದಕ್ಷಿಣಂ ಜಾನ್ವಾಚ್ಯ ಸ್ರುವೇಣ ವಾಚ ಮಸೇನ ವಾ ಕಂಸೇನ ವೈತಾ ಆಜ್ಯಾಹುತಿರ್ಜು ಹೋತಿ । ವಾಂಗ್ನಾಮ ದೇವತಾ ಽವರೋಧಿನೀ ಸಾಮೇಽಯಮುಷ್ಮಾದಿದ ಮ ವರಂಧಾಂ ತಸ್ಯೈ ಸ್ವಾಹಾ । ಪ್ರಾಣೋ ನಾಮದೇವತಾಽವರೋಧಿನೀ ಸಾಮೇಽ ಮುಷ್ಮಾದಿದ ಮವರುಂಧಾಂ ತಸ್ಯೈ ಸ್ವಾಹಾ । ಚಕ್ಷುರ್ನಾಮ ದೇವತಾಽ ವರೋಧಿನೀ ಸಾಮೇಽ ಮುಷ್ಮಾದಿದ ಮವರುಂಧಾಂ ತಸ್ಯೈ ಸ್ವಾಹಾ । ಶ್ರೋತ್ರಂ ನಾಮದೇವತಾಽ ವರೋಧಿನೀ ಸಾಮೇಽ ಮುಷ್ಮಾದಿದ ಮವರುಂಧಾಂ ತಸ್ಯೈ ಸ್ವಾಹಾ । ಮನೋನಾಮ ದೇವತಾಽ ವರೋಧಿನೀ ಸಾಮೇಽ ಮುಷ್ಮಾದಿದ ಮವರುಂಧಾಂ ತಸ್ಯೈ ಸ್ವಾಹಾ । ಪ್ರಜ್ಞಾ ನಾಮ ದೇವತಾಽ ವರೋಧಿನೀ ಸಾಮೇಽ ಮುಷ್ಮಾದಿದ ಮವರುಂಧಾಂ ತಸ್ಯೈ ಸ್ವಾಹೇತಿ । ಅಥ ಧೂಮ ಗಂಧಂ ಪ್ರತಿಘ್ರಾಯಾಽಽಜ್ಯಲೇಪೇ ನಾಂಗಾನ್ಯನು ವಿಮೃಜ್ಯ । ವಾಚಂ ಯಮೋಽಭಿಪ್ರವ್ರಾಜ್ಯಾಥ ಬ್ರುವೀತ । ದೂತಂ ವಾ ಪ್ರಹಿಣುಯಾತ್ । ಲಭತೇ ಹೈವ ।೩।

ಮುಂದೆ ಘನವಾದ ಸಂಪತ್ತನ್ನು ಪಡೆಯುವಿಕೆ, ಮನುಷ್ಯನು ಘನವಾದ ಸಂಪತ್ತಿಗೆ ಆಶಿಸಿದರೆ ಆವನು ಪೌರ್ಣಮಿಯ ರಾತ್ರಿಯಲ್ಲಾಗಲೀ, ಅಮಾವಾಸ್ಯೆಯಲ್ಲಾಗಲೀ, ಶುಕ್ಲ ಪಕ್ಷದಲ್ಲಾಗಲೀ, ಒಂದು ಪುಣ್ಯ ನಕ್ಷತ್ರದ ದಿನ ದಲ್ಲಾಗಲೀ ಒಂದು ದಿನ ವೇದಿಕೆಯನ್ನು ಕಟ್ಟಿ, ನೆಲವನ್ನು ಸ್ವಚ್ಛಗೊಳಿಸಿ, ಪರಿಸ್ತರ ಗಳನ್ನೂ ಹರಡಿ, ಸುತ್ತಲೂ ಪ್ರೋಕ್ಷಣೆಯನ್ನು ಮಾಡಿ, ಬಲಮಂಡಿಯನ್ನು ಬಗ್ಗಿಸಿ ಕೊಂಡು, ಸ್ರುವದಿಂದ ಅಗ್ನಿಗೆ ಆಜ್ಯದ ಆಹುತಿಯನ್ನು ಮಂತ್ರಪೂರಿತವಾಗಿ ನೀಡ ಬೇಕು. ಮೊದಲು ವಾಕ್ ನಾಮದೇವತೆಯೇ "ನೀನು ನನಗಾಗಿ ಅವನಿಂದ ಈ ಆಹುತಿಯನ್ನು ಪಡೆದು ಸಂತೃಪ್ತನಾಗು" ಸ್ವಾಹಾ. ಇದೇ ರೀತಿ ಪ್ರಾಣ, ಚಕ್ಷು, ಶ್ರೋತ್ರ, ಮನಸ್ಸು ಮತ್ತು ಪ್ರಜ್ಞೆ ಎಂಬ ದೇವತೆಗಳಿಗೂ ಮಂತ್ರಪೂರಿತವಾಗಿ ಆಜ್ಯದಿಂದ ಆಹುತಿ ಮಾಡಿದ ತರುವಾಯ ಆಜ್ಯದಿಂದ ರಕ್ಷೆಯನ್ನು ಪಡೆದು ಹೋಮ ಧೂಮವನ್ನು ಆಘ್ರಾಣಿಸಿ, ರಕ್ಷೆಯನ್ನು ತನ್ನ ಅಂಗಾಂಗಗಳಿಗೆಲ್ಲಾ ಬಳಿದುಕೊಂಡು ಮೌನವಾಗಿ ಮುಂದೆ ನಡೆದು ಭಗವಂತನಿಗೆ ತನ್ನ ಪ್ರಾರ್ಥನೆಯನ್ನು ಸಲ್ಲಿಸಿದಲ್ಲಿ ಅವನ ಇಷ್ಟಾರ್ಥ ಸಿದ್ಧಿಯಾಗುತ್ತದೆ.

ಅಥಾತೋ ದೇವಃ ಸ್ಮರಃ । ಯಸ್ಯ ಪ್ರಿಯೋ ಬು ಭೂಷೇದ್ಯ ಸ್ಯೈವಾ ಏಷಾಂ ವಾ ಯಾ ಸಾಂ ವಾ ಏಕಸ್ಮಿನ್ ಪರ್ವಣ್ಯಗ್ನಿ ಮುಪ ಸಮಾಧಾಯೈತ ಮೈವಾಽ

ವೃತ್ತೈತಾ ಆಜ್ಯಾಹುತಿರ್ಜು ಹೋತಿ । ವಾಚಸ್ತೇಮಯಿ ಜುಹೋಮ್ಯಸೌ ಸ್ವಾಹಾ । ಪ್ರಾಣಂ ತೇ ಮಯಿ ಜು ಹೊಮ್ಯ ಸೌ ಸ್ವಾಹಾ । ಚಕ್ಷುಸ್ತೇಸೌ ಮಯಿ ಜು ಹೋಮ್ಯ ಸೌ ಸ್ವಾಹಾ । ಶ್ರೋತ್ರಂ ತೇ ಮಯಿ ಜು ಹೋಮ್ಯ ಸ್ವಾಹಾ । ಮನಸೋ ಮಯಿ ಜು ಹೋಮ್ಯ ಸೌ ಸ್ವಾಹಾ । ಪ್ರಜ್ಞಾಂತೇ ಮಯಿ ಜು ಹೋಮ್ಯ ಸೌ ಸ್ವಾಹಾ । ಇತಿ । ಧೂಮ ಗಂಧಂ ಪ್ರಾಜಿಘ್ರಾಯಽಽಜ್ಯಲೇಪೇನಾಂಗಾನ್ಯನು ವಿಮೃಜ್ಯ ವಾಚಂ ಯಮೋಽಭಿ ಪ್ರವ್ರಾಜ್ಯ ಸಂ ಸ್ಪರ್ಶಂ ಜಿಗಾಮಿಷೇತ್ । ಅಪಿವಾತಾದ್ವಾ ಸಂಭಾಷಮಾಣ ಸ್ತಿ ಷ್ಟೇತ್ । ಪ್ರಿಯೋ ಹ್ಯೈವ ಭವತಿ ।ಸ್ಮರನ್ತಿ ಹ್ಯೈವಾಸ್ಯ ॥೪॥

ಈಗ ಮುಂದೆ ದೇವಾಧಿಕಾರ ಸ್ಮರಣೆ. ಈಗ ಯಾರಾದರೂ ಒಬ್ಬ ಪುರುಷನು, ಹೆಂಗಸೊಬ್ಬಳಿಗೆ, ಅಥವಾ ಹೆಂಗಸೊಬ್ಬಳು ಗಂಡಸಿಗೆ ಪ್ರಿಯವಾಗಬೇಕೆನಿಸಿದರೆ ಯಾರಾದರೊಬ್ಬರು ಹಿಂದಿನ ಮಂತ್ರದಲ್ಲಿ ವಿವರಿಸಿರುವಂತೆ ಸರಿಯಾದ ಕಾಲದಲ್ಲಿ ಮತ್ತು ಸರಿಯಾದ ರೀತಿಯಲ್ಲಿ ತುಪ್ಪದಿಂದ ಹೋಮವನ್ನು ಆಚರಿಸತಕ್ಕದ್ದು. ಆಗ "ನಿನ್ನ ವಾಕ್ಕು ನನ್ನಲ್ಲಿ ಹೋಮವಾಗಲೀ ಸ್ವಾಹಾ" ಎಂದು ಹೇಳಿ ಇದೇ ರೀತಿಯಾಗಿ ಪ್ರಾಣ, ಕಣ್ಣು, ಕಿವಿ, ಮನಸ್ಸು ಮತ್ತು ಪ್ರಜ್ಞೆಗಳನ್ನೂ ಕುರಿತು ಪ್ರತ್ಯೇಕವಾಗಿ ಹೋಮ ಮಾಡಿದ ತರುವಾಯ ಹೋಮ ಧೂಮವನ್ನು ಆಘ್ರಾಣಿಸಿ ತುಪ್ಪದಿಂದ ಬೆರೆಸಿದ ರಕ್ಷೆಕೆಯನ್ನು ಅಂಗಾಂಗಗಳಿಗೆಲ್ಲಾ ಬಳಿದುಕೊಳ್ಳಬೇಕು. ಮೌನದಿಂದ ಮುಂದೆ ನಡೆದು ಆ ಇನ್ನೊಬ್ಬರೊಂದಿಗೆ ಸಂಭಾಷಿಸಲು ಕಿಟಕಿಯ ಬಳಿ ನಿಂತುಕೊಂಡು ಗಾಳಿಯ ಮೂಲಕ ನಿಮ್ಮ ಸಂದೇಶವು ಆ ಇನ್ನೊಬ್ಬರಿಗೆ ತಲಪುವಂತೆ ಮಾತನಾಡಬೇಕು. ಆಗ ಅವರು ಪರಸ್ಪರ ಪ್ರೇಮಿಗಳಾಗುತ್ತಾರೆ, ಮತ್ತು ಪರಸ್ಪರರ ಚಿಂತೆಯಲ್ಲಿಯೇ ಇರುತ್ತಾರೆ.

ಅಥಾತಃ ಸಾಂಯಮನಂ ಪ್ರಾತರ್ದನ ಮಾಂತರಮಗ್ನಿ ಹೋತ್ರಾಮಿತಿ ಚಾಽಽಚಕ್ಷತೇ । ಯಾ ವದ್ವೈ ಪುರುಷೋ ಭಾಷತೇ ನತಾವತ್ಪ್ರಾಣಿ ತುಂ ಶಕ್ನೋತಿ । ಪ್ರಾಣಂ ತದಾ ವಾಚಿ ಜು ಹೋತಿ । ಯಾ ವದ್ವೈ ಪುರುಷಃ ಪ್ರಾಣಿತಿ ನತಾ ವದ್ಭಾಷಿತುಂ ಶಕ್ನೋತಿ । ವಾಚಂ ತದಾ ಪ್ರಾಣೇ ಜು ಹೋತಿ । ಏತೇ ಅನನ್ತೇ ಅಮೃತಾ ಹುತೀಜಾ ಗ್ರಚ್ಛ ಸ್ವಪಚ್ಛ ಸನ್ತತಮ ವ್ಯವಚ್ಛಿನ್ನಂ ಜುಹೋತಿ । ಅಥಯಾ ಅನ್ಯಾ ಆಹುತಯೋಽನ್ತವತ್ಯಸ್ತಾಃ ಕರ್ಮ ಮಯ್ಯೋಹಿ ಭವನ್ತಿ । ಏತದ್ಧ ವೈ ಪೂರ್ವೇ ವಿದಾಂಸೋಽಗ್ನಿಹೋತ್ರಂ ನಜುಹುವಾಂ ಚಕ್ರುಃ ॥೫॥

ಈಗ ಮುಂದೆ ಪ್ರತರ್ದನ ಮಾರ್ಗದಲ್ಲಿ ಅಂತಃ ಸಂಯಮ ಯಾಗ ಕ್ರಮವನ್ನು ಗಮನಿಸೋಣ. ಮಾನವನು ಸಾಧಾರಣವಾಗಿ ಮಾತನಾಡುತ್ತಿರುವಾಗ ಮತ್ತು ಉಸಿರಾಡಲು ಸಾಧ್ಯವಾಗದವರೆಗೆ ಅವನು ಉಸಿರಾಡುವುದನ್ನು ವಾಕ್ಕಿನಲ್ಲಿ ಆಹುತಿ ಮಾಡಿದಂತಾಗುತ್ತದೆ. ಇದೇ ರೀತಿ ಅವನು ಉಸಿರಾಡುತ್ತಿರುವಾಗ ಮತ್ತು ಮಾತನಾಡಲಾರದವರೆಗೆ ಅವನು ವಾಕ್ಕನ್ನು ಉಸಿರಿನಲ್ಲಿ ಆಹುತಿ ಮಾಡಿದಂತಾಗುತ್ತದೆ. ಎಂದಿಗೂ ಮುಗಿಯದ ಈ ಎರಡು ಅಮೃತಾಹುತಿಗಳಲ್ಲಿ ಒಂದು ಪರಂಪರೆಯಾಗಿ ಕೆಲಸ ಮಾಡುತ್ತಿರಲೀ. ನಿದ್ರಾವಸ್ಥೆಯಲ್ಲಿರಲೀ ನಡೆದುಕೊಂಡು ಹೋಗುತ್ತಿರುತ್ತವೆ. ಇನ್ನೂ ಇಂತಹ ಇತರ ಯಾಗಗಳಿದ್ದಲ್ಲಿ ಅವುಗಳಿಗೆ ಒಂದು ಅಂತ್ಯವಿದೆ. ಏಕೆಂದರೆ ಅವು ಕಾರ್ಯಗಳಿಗೆ ಸಂಬಂಧಿಸಿರುವುದು. ಇದನ್ನು ಅರಿತುಕೊಂಡೇ ಪೂರ್ವಜರು ಅಗ್ನಿ ಹೋತ್ರ ಯಾಗವನ್ನು ರಚಿಸಲಿಲ್ಲ.

ಉಕ್ಥಂ ಬ್ರಹ್ಮೇತಿ ಹಸ್ಮಾಹ ಶುಷ್ಕ ಭೃಂಗಾರಃ । ತದೃಗಿತ್ಯುಪಾಸೀತ । ಸರ್ವಾಣಿ ಹಾಸ್ಮೈ ಭೂತಾನಿ ಶ್ರೈಷ್ಠ್ಯಾಯ ಯಾಭ್ಯರ್ಚನ್ತೇ । ತದ್ಯಜುರಿತ್ಯುಪಾಸೀತ । ಸರ್ವಾಣಿ ಹಾಸ್ಮೈ ಭೂತಾನಿ ಶ್ರೈಷ್ಠ್ಯಾಯ ಯುಜ್ಯನ್ತೇ । ತತ್ಸಾಮೇತ್ಯುಪಾಸೀತ । ಸರ್ವಾಣಿಹಾಸ್ಮೈ ಭೂತಾನಿ ಶ್ರೈಷ್ಠ್ಯಾಯ ಸಂನಭಂತೇ । ತಚ್ಛ್ರೀರಿ ತ್ಯುಪಾಸೀತ । ತದ್ಯಶ ಇತ್ಯುಪಾಸೀತ । ತತ್ತೇಜ ಇತ್ಯುಪಾಸೀತ । ತದ್ಯಥೈತಚ್ಛ ಸ್ತ್ರಾಣಾಂ ಶ್ರೀಮತ್ತಮಂ ಯಶಸ್ವಿತಮಂ ತೇಜಸ್ವಿತಮಂ ಭವತಿ । ತಥೋ ಏವೈವಂ ವಿದ್ವಾನ್ ಸರ್ವೇಷಾಂ ಭೂತಾನಾಂ ಶ್ರೀಮತ್ತಮೋ ಯಶಸ್ವಿತ ಮಸ್ತೇಜಸ್ವಿತ ಮೋಭವತಿ । ತಮೇತಮೈಷ್ಟಕಂ ಕರ್ಮಮಯ ಮಾತ್ಮಾನ ಮಧ್ವರ್ಯುಃ ಸಂಸ್ಕರೋತಿ । ತಸ್ಮಿನ್ಯಜುರ್ಮಯಂ ಪ್ರವಯತಿ । ಯಜುರ್ಮಯ ಋಙ್ಮಯಂಹೋತಾ । ಋಙ್ಮಯೇ ಸಾಮಮಯ ಮುದ್ಗಾತಾ । ಸಏಷ ಸರ್ವಸ್ಯೈ ತ್ರಯೀ ವಿದ್ಯಾಯಾ ಆತ್ಮಾ । ಏಷವು ಏವಾಸ್ಯಾತ್ಮಾ । ಏತದಾತ್ಮಾ ಭವತಿ ಯಏವಂವೇದ ॥೬॥

ಉಕ್ಥವು ಬ್ರಹ್ಮ. ಹೀಗೆಂದು ಶುಷ್ಕ ಭೃಂಗಾರನು ಹೇಳುತ್ತಾನೆ. ಅವನು ಅದರ ಮೇಲೆ ಋಗ್ವೇದದಲ್ಲಿ ಉಪಾಸನೆ ಮಾಡಲಿ. ಎದುವರೆಗೆ ಎಲ್ಲ ಜೀವಿಗಳೂ ತಮ್ಮ ತಮ್ಮ ಶ್ರೇಷ್ಠತೆಗಾಗಿ ಉಪಾಸನೆ ಮಾಡುತ್ತಾರೋ ಅದುವರೆಗೆ ಯಜುರ್ವೇದ ರೀತಿಯಲ್ಲಿ ಮಾಡಲಿ. ಎದುವರೆಗೆ ಎಲ್ಲಾ ಭೂತಗಳು ಒಟ್ಟಾಗಿ ಸೇರಿ ತಮ್ಮ ಶ್ರೇಷ್ಠತೆಗಾಗಿ ಉಪಾಸನೆ ಮಾಡುತ್ತಾರೋ ಆಗ ಸಾಮವೇದ ರೂಪದಲ್ಲಿ ಮಾಡಲಿ. ಎದುವರೆಗೆ ಎಲ್ಲಾ ಭೂತಗಳೂ ಅವನ ಶ್ರೇಷ್ಠತೆಗಾಗಿ ಶಿರಬಾಗುವರೋ ಅದುವರೆಗೆ

ಅದರ ಸೌಂದರ್ಯಕ್ಕಾಗಿ ಉಪಾಸಿಸಲಿ. ಅವನು ಅದರ ಮೇಲೆ ಯಶಸ್ಸಿಗಾಗಿ ಉಪಾಸಿಸಲಿ. ಅದರ ತೇಜಸ್ಸಿಗಾಗಿ ಉಪಾಸಿಸಲಿ. ಅದರ ವರ್ಚಸ್ಸಿಗಾಗಿ ಉಪಾಸಿಸಲಿ, ಈ ಉಕ್ಥವು ಸೌಂದರ್ಯ ರೂಪವಾಗಿಯೂ, ಯಶಸ್ವಿಯಾಗಿಯೂ, ತೇಜಸ್ವಿಯಾಗಿಯೂ, ವರ್ಚಸ್ವಿಯಾಗಿಯೂ, ಆಗಿರುವ ಪ್ರಾರ್ಥನೆಯಾಗಿರುವುದರಿಂದ ಯಾರು ಹೀಗೆ ಅರಿಯುವರೋ ಅವರು ಎಲ್ಲಾ ಜೀವಿಗಳ ಪೈಕಿ ಸುಂದರರಾಗಿಯೂ, ಯಶಸ್ವಿಗಳಾಗಿಯೂ, ತೇಜಸ್ವಿಗಳಾಗಿಯೂ ವರ್ಚಸ್ವಿಗಳಾಗಿಯೂ, ಆಗುತ್ತಾರೆ. ಆದ್ದರಿಂದ ಅಧ್ವರ್ಯುವಾದ ಆಚಾರ್ಯನು ಸಂಸ್ಕರಿಸುತ್ತಾನೆ, ಇದು ಐಷ್ಟಿಕ ಕರ್ಮಕ್ಕೆ ಸಂಬಂಧಿಸಿದೆ. ಇದು ಯಜುರ್ವೇದದಿಂದ ಹೆಣೆಯಲ್ಪಟ್ಟಿದೆ. ಈ ಯಜುರ್ವೇದ ಸಂಹಿತೆಯಲ್ಲಿ ಹೋತೃವು ಋಗ್ವೇದವನ್ನು ಹೆಣೆಯುತ್ತಾನೆ. ಈ ಋಗ್ವೇದದಲ್ಲಿ ಉದ್ಗಾತೃ ಆಚಾರ್ಯನು ಸಾಮವನ್ನು ಹೆಣೆಯುತ್ತಾನೆ. ಈ ಮೂರು ವಿದ್ಯೆಗಳೂ ಆತ್ಮನಿಗೆ ಸಂಬಂಧಿಸಿದ್ದಾಗಿರುತ್ತದೆ ಇದನ್ನು ಯಾರು ಅರಿಯುತ್ತಾರೆಯೋ ಅವರು ಇಂದ್ರನ ಆತ್ಮೀಯರಾಗುತ್ತಾರೆ.

ಅಥಾತಃ ಸರ್ವಜಿತಃ ಕೌಷೀತಕೇ ಸ್ತ್ರೀಣ್ಯುಪಾಸನಾನಿಭವನ್ತಿ । ಯಜ್ಞೋಪವೀತಂ ಕೃತ್ವಾಽಪ ಆಚಮ್ಯ । ತ್ರಿರುದಪಾತ್ರಂ ಪ್ರಸಿಚ್ಯೋದ್ಯನ್ತ ಮಾದಿತ್ಯಮುಪತಿಷ್ಠೇತು ವರ್ಗೋಽಸಿಪಾಪ್ಮಾನಂ ಮೇ ವೃಂಗ್ಧೀಥಿ । ಏತಯ್ಯೈವಾಽಽವೃತಾಮಧ್ಯೇಸನ್ತಂ । ಉದ್ವರ್ಗೋಽಸಿಪಾಪ್ಮಾನಂ ಮ ಉದ್ ವೃಂಗ್ಧೀತಿ । ಏತಯ್ಯೈವಾಽಽವೃತ್ತಾಽಸ್ತಂ ಯತ್ನಂ । ಸಂವರ್ಗೋಽಸಿಪಾಪ್ಮಾನಂ ಮೇಸಂ ವೃಂಗ್ಧೀತಿ । ಯದಹೋರಾತ್ರಾಭ್ಯಾಂ ಪಾಪಂ ಕರೋತಿ । ಸಂತದ್ ವೃಂಕ್ತೇ ॥೭॥

ಈಗ ಸರ್ವಜಿತವಾದ ಕೌಷೀತಕಿಯ ಮೂರು ವಿಧವಾದ ಉಪಾಸನೆಯು ಹೀಗಿದೆ. ಇದು ಪ್ರಾತಃಕಾಲದ ಸೂರ್ಯನನ್ನು ಪೂಜಿಸುವ ಕ್ರಮವಾಗಿರುತ್ತದೆ. ಮೊದಲು ಯಜ್ಞೋಪವೀತ ಧಾರಣೆಯನ್ನು ಮಾಡಿ ಜಲವನ್ನು ತಂದುಕೊಂಡು ಆಚಮನವನ್ನು ಮಾಡಿ, ಮೂರು ಬಾರಿ ಪಾತ್ರೆಯಲ್ಲಿಯ ನೀರಿನಿಂದ ಪ್ರೋಕ್ಷಣೆ ಮಾಡಿಕೊಂಡು "ನೀನು ಉದ್ಧಾರಕನು. ನನ್ನ ಪಾಪದಿಂದ ನನ್ನನ್ನು ಉದ್ಧರಿಸು" ಎಂದು ಹೇಳಬೇಕು ಮತ್ತು ಮಧ್ಯಾಹ್ನದ ಸೂರ್ಯನನ್ನು ಪೂಜಿಸುವಂತೆ ಉಪಾಸನೆ ಮಾಡಬೇಕು. ಆಗ "ನೀನು ನನ್ನ ಉನ್ನತ ಸಂರಕ್ಷಕನು ನನ್ನ ಪಾಪಗಳಿಂದ ನನ್ನನ್ನು ಉದ್ಧರಿಸು" ಎಂದು ಪ್ರಾರ್ಥಿಸಬೇಕು. ಮತ್ತೆ ಸಾಯಂಕಾಲದಲ್ಲಿ ಮುಳುಗುತ್ತಿರುವ ಸೂರ್ಯನನ್ನು ಪೂಜಿಸುವ ರೀತಿಯಲ್ಲಿ ಉಪಾಸನೆ ಮಾಡಿ "ನೀನು ಸಂಪೂರ್ಣವಾಗಿ ಉದ್ಧರಿಸುವವನು ನನ್ನ ಪಾಪಗಳಿಂದ ನನ್ನನ್ನು ಉದ್ಧರಿಸು" ಎಂದು

ಪ್ರಾರ್ಥಿಸಬೇಕು. ಈ ರೀತಿಯಾಗಿ ಯಾವನು ಹಗಲು ಮತ್ತು ರಾತ್ರಿಯ ಸಮಯದಲ್ಲಿ ಆಚರಿಸುತ್ತಾನೋ ಅವನು ಪಾಪಗಳನ್ನು ಪೂರ್ತಿಯಾಗಿ ಪರಿಹರಿಸಿಕೊಳ್ಳುತ್ತಾನೆ. ಅಹೋರಾತ್ರಿಗಳಲ್ಲಿ ಮಾಡಬಹುದಾದ ಎಲ್ಲಾ ಪಾಪಗಳನ್ನೂ ಪರಿಹರಿಸಿಕೊಳ್ಳುತ್ತಾನೆ.

ಅಥ ಮಾಸಿಮಾಸ್ಯಽಮಾ । ವಾಸ್ಯಾಯಾಂ ಪಶ್ಚಾಚ್ಚಂದ್ರಮ ಸಂದೃಶ್ಯಮಾನ ಮುಪತಿಷ್ಠೇತ್ಯೈ ತಯ್ಯೈವಾಽಽವೃತಾ । ಹರಿತ ತೃಣಾಭ್ಯಾಂ ವಾಕ್ ಪ್ರತ್ಯಸ್ಯತಿ "ಯತ್ತೇಽಸು ಸಾಮಹೃದಯ ಮದಿಚಂದ್ರ ಮಸಿಶ್ರಿತಂ । ತೇನಾ ಮೃತತ್ವಸ್ಯೇಶಾನೇಮಾ ಽಹಂ ಪೌತ್ರಮ ಘಂರುದಮಿತಿ । ನಹಾಸ್ಮಾತ್ ಪೂರ್ವಾ ಪ್ರಜಾಃ ಪ್ರೈತಿ" ಇತಿ ನುಜಾತ ಪುತ್ರಸ್ಯ । ಅಥಾಜಾತ ಪುತ್ರಸ್ಯ "ಆಪ್ಯಾಯ ಸ್ವಸಮೇತುತೇ ಸಂತೇ ಪಯಾಂಸಿ ಸಮುಯನ್ತು ವಾಜಾಃ ಯ ಮಾದಿತ್ಯಾ ಅಂಶು ಮಾಪ್ಯಾಯನ್ತಿ" ಇತ್ಯೇತಾಸ್ತಿಸ್ರ ಋಚೋಽಜಪಿತ್ವಾ । ಮಾಸ್ಮಾಕಂ ಪ್ರಾಣೇನ ಪ್ರಜಯಾ ಪಶುಭಿರಾಪ್ಯಾಯಿಷ್ಠಾಃ । ಯೋಽಸ್ಮಾನ್ ದ್ವೇಷ್ಟಿ । ಯಂಚವಯಂ ದ್ವಿಷ್ಮಃ । ತಸ್ಯ ಪ್ರಾಣೇನ ಪ್ರಜಯಾ ಪಶುಭಿ ರಾಪ್ಯಾಯಸ್ವೇತಿ । ದೈವೀ ಮಾಂವೃತ ಮಾವರ್ತ ಆದಿತ್ಯಸ್ಯಾ ಽಽವೃತಮನ್ವಾ ವರ್ತೇ । ಇತಿ ದಕ್ಷಿಣ ಬಾಹುಂ ಅನ್ವಾವರ್ತತೇ ||೮||

ತರುವಾಯ ಪ್ರತಿ ತಿಂಗಳೂ ಕೃಷ್ಣಪಕ್ಷವು ಕಳೆದ ತರುವಾಯ ಚಂದ್ರನು ಪಶ್ಚಿಮ ದಿಕ್ಕಿನಲ್ಲಿ ಕಾಣಿಸಿಕೊಂಡ ಹಾಗೆಲ್ಲಾ ಹಿಂದೆ ಹೇಳಿದ ರೀತಿಯಲ್ಲಿ ಉಪಾಸನೆ ಮಾಡಬೇಕು. ಅಥವ ಎರಡು ಹಸುರು ಹುಲ್ಲನ್ನು ಅದರ ಕಡೆಗೆ ಹಾಕಿ "ಯತ್ತೇ ಸುಸಾಮ ಹೃದಯಮದಿ ಚಂದ್ರಮಸಿ ಶ್ರಿತಂ । ತೇನಾ ಮೃತತ್ವ ಸ್ಯೇಶಾನೇ ಮಾಽಹಂ ಪೌತ್ರಮಘಂ ರುದ ಮಿತಿ । ಸಹಸ್ಮಾತ್ ಪೂರ್ವಪ್ರಜಾ ಪ್ರೈತಿ" ಈ ಮಂತ್ರವನ್ನು ಹೇಳಬೇಕು. ಇದು ತನಗೆ ಮೊದಲೇ ಮಗನು ಹುಟ್ಟಿದ್ದಲ್ಲಿ ಆಚರಿಸುವ ವಿಧಿ. ಈಗ ಮಗನೇ ಇನ್ನು ಹುಟ್ಟದಿರುವರು "ಆಪ್ಯಾಯ ಸ್ವಸಮೇತುತೇ ಸಂತೇಪಯಾಂಸಿ ಸಮಯನ್ತು ವಾಜಾಃ । ಯಮಾದಿತ್ಯ ಅಂಶು ಮಾಪ್ಯಾಯನ್ತಿ" ಎಂಬ ಋಕ್ ಮಂತ್ರವನ್ನು ಹೇಳಿಕೊಂಡು ಮುವ್ವತ್ತು ದೆಫ ಜಪಿಸಬೇಕು. ತರುವಾಯ "ಮಾಸ್ಮಾಕಂ ಪ್ರಾಣೇನ ಪ್ರಜಯಾ ಪಶುಭಿರಾಪ್ಯಾಯಾಮಿಷ್ಠಾಃ । ಯೋಽಸ್ಮಾನ್ ದ್ವೇಷ್ಟಿ । ಯಂಚವಯಂ ದ್ವಿಷ್ಮಃ । ತಸ್ಯ ಪ್ರಾಣೇನ ಪ್ರಜಯಾಪಶುಭಿ ರಾಪ್ಯಾಯಸ್ವೇತಿ । ದೈವೀ ಮಾವೃತ ಮಾವರ್ತ ಆದಿತ್ಯಸ್ಯಾಽಽವೃತ ಮನ್ವಾವರ್ತೇ" ಈ ಮಂತ್ರವನ್ನು ಜಪಿಸಬೇಕು. ತರುವಾಯ ತನ್ನ ಬಲಗಡೆಗೆ ತಿರುಗಬೇಕು.

ಅಥಪೌರ್ಣಮಾಸ್ಯಾಂ ಪುರಸ್ತಾಚ್ಚಂದ್ರಮಸಂ ದೃಶ್ಯಮಾನಮು ಪತಿಷ್ಠೇ ತೈ ತಯ್ಯೈವಾಽಽವೃತಾ । ಸೋಮೋ ರಾಜಾಽಸಿವಿ ಚಕ್ಷಣಃ ಪಂಚ ಮುಖೋಽಸಿ ಪ್ರಜಾಪತಿಃ । ಬ್ರಾಹ್ಮಣಸ್ತ್ವ ಏಕಂ ಮುಖಂ ತೇನಮುಖೇನ ರಾಜ್ಞೋಽತ್ಸಿ । ತೇನ ಮುಖೇನ ಮಾಮನ್ನಾದಂಕುರು । ರಾಜಾತಯೇಕಂ ಮುಖಂತೇನ ಮುಖೇನ ವಿಶೋಽತ್ಸಿ । ತೇನ ಮುಖೇನ ಮಾಮನ್ನಾದಂ ಕುರು । ಶ್ಯೇನಸ್ತ್ವ ಏಕಂ ಮುಖಂ ತೇನ ಮುಖೇನ ಪಕ್ಷಿಣೋಽಸ್ತ್ಸಿ । ತೇನ ಮುಖೇನ ಮಾಮನ್ನಾದಂಕುರು । ಅಗ್ನಿಷ್ಠ್ವಂ ಏಕಂ ಮುಖಂ ತೇನ ಮುಖೇನ ಪುಂಲೋಕಮಸ್ತ್ಸಿ । ತೇನಮುಖೇನ ಮಾಮನ್ನಾದಂಕುರು । ತ್ವಯಿ ಪಂಚಮಂ ಮುಖಂತೇನ ಮುಖೇನ ಸರ್ವಾಣಿ ಭೂತಾನ್ಯಸ್ತ್ಸಿ । ತೇನ ಮುಖೇನ ಮಾಮನ್ನಾದಂಕುರು । ಮಾಸ್ಮಾಕಂ ಪ್ರಾಣೇನ ಪ್ರಜಯಾಪಶುಭಿರಪಕ್ಷ್ಯೇಷ್ಠಾಃ । ಯೋಽಸ್ಮಾನ್ ದ್ವೇಷ್ಟಿಯಂಚ ವಯಂದ್ವಿಷ್ಮಃ । ತಸ್ಯಪ್ರಾಣೇನ ಪ್ರಜಯಾ ಪಶುಭಿ ರಪಕ್ಷೀಯ ಸ್ವೇತಿ ದೈವೀಮಾ ವೃತಯಾ ವರ್ತ ಆದಿತ್ಯಸ್ಯಾಽಽವೃತ ಮನ್ವಾವರ್ತೇ । ಇತಿ ದಕ್ಷಿಣಂ ಬಾಹು ಮನ್ವಾವರ್ತತೇ ॥೯॥

ಇದೇ ರೀತಿಯಾಗಿ ಪೌರ್ಣಮಿಯ ರಾತ್ರಿ ಚಂದ್ರನು ಪೂರ್ವ ದಿಕ್ಕಿನಲ್ಲಿ ಕಾಣಿಸಿಕೊಂಡಾಗ ಅವನ ಉಪಾಸನೆ ಮಾಡಬೇಕು. "ಹೇ ರಾಜನಾದ ಸೋಮನೇ ನೀನು ವಿಚಕ್ಷಣವಂತನಾಗಿದ್ದು ಪಂಚಮುಖಿಯಾಗಿದ್ದೀಯೆ, ಮತ್ತು ಪ್ರಜಾಪತಿಯೂ ಆಗಿದ್ದೀಯೆ. ಬ್ರಾಹ್ಮಣರು ನಿನ್ನ ಒಂದು ಮುಖ, ಆಮುಖದಿಂದ ನೀನು ಕ್ಷತ್ರಿಯರನ್ನು ಭಕ್ಷಿಸುತ್ತಿ. ಆ ಮುಖದಿಂದ ನನ್ನನ್ನು ಅನ್ನಾದನನ್ನಾಗಿ ಮಾಡು, ದೊರೆಯು ನಿನ್ನ ಇನ್ನೊಂದು ಮುಖ. ಆ ಮುಖದಿಂದ ನೀನು ಪ್ರಜೆಗಳನ್ನು ಭಕ್ಷಿಸುತ್ತಿ. ಆ ಮುಖದಿಂದ ನನ್ನನ್ನು ಅನ್ನಾದನನ್ನಾಗಿ ಮಾಡು, ಪಕ್ಷಿರಾಜನು ನಿನ್ನ ಇನ್ನೊಂದು ಮುಖ, ಈ ಮುಖದಿಂದ ನೀನು ಪಕ್ಷಿಗಳನ್ನು ಭಕ್ಷಿಸುತ್ತಿ. ಆ ಮುಖದಿಂದ ನನ್ನನ್ನು ಅನ್ನಾದನನ್ನಾಗಿ ಮಾಡು. ಅಗ್ನಿಯು ನಿನ್ನ ಇನ್ನೊಂದು ಮುಖ, ಆ ಮುಖದಿಂದ ನೀನು ಲೋಕವನ್ನೇ ಭಕ್ಷಿಸುತ್ತಿ. ಆ ಮುಖದಿಂದ ನನ್ನನ್ನು ಅನ್ನಾದನನ್ನಾಗಿ ಮಾಡು. ನಿನ್ನಲ್ಲಿಯೇ ಐದನೆಯ ಮುಖವಿದೆ. ಆ ಮುಖದಿಂದ ನೀನು ಸರ್ವ ಭೂತಗಳನ್ನೂ ಭಕ್ಷಿಸುತ್ತಿ, ಆ ಮುಖದಿಂದ ನನ್ನನ್ನು ಅನ್ನಾದನನ್ನಾಗಿ ಮಾಡು. ನಮ್ಮ ಪ್ರಾಣಗಳಿಂದ ಅಪವ್ಯಯಮಾಡಬೇಡ, ನಮ್ಮ ಪ್ರಜೆಗಳನ್ನೂ, ದನಗಳನ್ನೂ ಸಂರಕ್ಷಿಸು. ಯಾರು ನಮ್ಮನ್ನು ದ್ವೇಷಿಸುತ್ತಾರೋ ಅಥವಾ ಯಾರನ್ನು ನಾವು ದ್ವೇಷಿಸುತ್ತೇವೋ ಅವರನ್ನು ಸಂಹರಿಸು. ಅವರ ಪ್ರಾಣವನ್ನೂ, ಪ್ರಜೆಗಳನ್ನೂ, ದನಕರುಗಳನ್ನೂ ನೀಗಿಸು. ಈ ರೀತಿಯಾಗಿ

ನಾನು ದೇವತೆಗಳಂತೆ ಹಿಂದಿರುಗು ತ್ತೇನೆ,ನಾನು ಸೂರ್ಯನು ತಿರುಗುತ್ತಿರುವಂತೆ ಅವನ ಸುತ್ತಲೂತಿ ರುಗುತ್ತೇನೆ''. ಈ ಮಾತುಗಳನ್ನು ಹೇಳಿದ ತರುವಾಯ ಅವನು ತನ್ನ ಬಲಗೈಕಡೆಗೆ ತಿರುಗುತ್ತಾನೆ.

ಅಥಸಂವೇಶ್ಯಂ ಜಾಯಾಯೈ ಹೃದಯಮಭಿಮೃಶೇತ್–ಯತ್ತೇಸು ಸೀಮೇ ಹೃದಯೇ ಹಿತಮಂತಃ ಪ್ರಜಾಪತೌ| ಮನ್ಯೇಽಹಂಮಾಂತದ್ವಿದ್ವಾಂಸಂ (ತೇನ)ಮಾಽಹಂ ಪೌತ್ರಮಘಂ ರುದಮಿತಿ ||ನಹಸ್ಮಾತ್ ಪೂರ್ವಾಪ್ರಜಾಃ ಪ್ರೈತೀತಿ ||೧೦||

ಈಗ ಅವನು ತನ್ನ ಪತ್ನಿಯೊಡನೆ ಮಲಗುವಾಗ ಆಕೆಯ ಎದೆಯಮೇಲೆ ತಟ್ಟಿ "ಓ ಸುಂದರಿಯೇ ಯಾವ ಪ್ರಜಾಪತಿ ಇಂದ ನಿನ್ನ ಹೃದಯದಲ್ಲಿ ಎಂದೆಂದೂ ಅಳಿಯದಂತಹ ಸಂತೋಷವನ್ನು ನೆಲೆಗೊಳಿಸಿಕೊಂಡಿರುವೆಯೋ ಹಾಗೆ ನಿನ್ನ ಮಕ್ಕಳ ವಿಚಾರದಲ್ಲಿ ನೀನು ಎಂದೂ ದುಃಖಪಡದಂತಾಗಲಿ'' ಎಂದು ಹೇಳಬೇಕು. ಆಗ ಆಕೆಯು ತನ್ನ ಮಕ್ಕಳನ್ನು ತನ್ನೆದುರಿಗೆ ಕಳೆದುಕೊಳ್ಳುವುದಿಲ್ಲ.

ಅಥ ಪ್ರೋಷ್ಯಾಽಽಯನ್ ಪುತ್ರಸ್ಯಮೂರ್ಧಾನ ಮಭಿಮೃಶೇತ್-"ಅಂಗಾದಂ ಗಾತ್ ಸಂಭವಸಿ ಹೃದಯಾಧಜಾಯಸೇ| ಆತ್ಮಾತ್ವಂ ಪುತ್ರಮಾಽಽವಿಥ ಸಜೀವ ಶರದಃಶತಂ"| ಅಸೌಇತಿನಾಮಸ್ಯಗೃಹ್ಣಾತಿ| "ಅಶ್ಮಾಭವ ಪರಶು ರ್ಭವ| ಹಿರಣ್ಯಮಸ್ತೃತಂಭವ| ತೇಜೋವೈಪುತ್ರನಾ ಮಾಸಿ ಸಜೀವಶರದಃ ಶತಂ| ಅಸೌಇತಿ ನಾಮಸ್ಯ ಗೃಹ್ಣಾತಿ| ಯೇನಂಪ್ರಜಾಪತಿಃ ಪ್ರಜಾಃಪರ್ಯ ಗೃಹ್ಣಾದರಿಷ್ಟ್ಯೈ| ತೇನತ್ವಾಪರಿಗೃಹ್ಣಾಮಿ"| ಅಸೌಇತಿನಾಮಸ್ಯಗೃಹ್ಣಾತಿ"| ಅಥಾಸ್ಯದಕ್ಷಿಣೇ ಕರ್ಣೇಜಪತಿ"–ಅಸ್ಮೈಪ್ರಯಂಧಿ ಮಘವನ್ನೃಜೀಷಿನ್ನಿತಿ| ಇಂದ್ರಶ್ರೇಷ್ಠಾನಿದ್ರವಿಣಾನಿದೇಹಿತಿ| ಸರ್ವೇಮಾಚ್ಛಿತ್ಥಾ ಮಾವ್ಯಥಿಷ್ಠಾಃ ಶತಂಶರದ ಆಯುಷಃ| ಜೀವಸ್ವಪುತ್ರತೇ ನಾಮ್ನಾಮೂರ್ಧಾ ನಮವಾಜಿ ಘ್ರಾಮಿ|" ಅಸೌಇತಿ ತ್ರಿಮೂರ್ಧಾನ ಮವಾಜಿಘ್ರೇತ್| ಗವಾಂತ್ವಾಹಿಂಕಾ ರೇಣಾಭಿ ಹಿಂಕರೋಮಿ| ಇತಿತ್ರಿಮೂರ್ಧಾನಮಪಿ ಹಿಂಕುರ್ಯಾತ್ ||೧೧||

ಈಗ ಅವನು ಎಲ್ಲಿಗಾದರೂ ಹೊರಗೆಹೋಗಿದ್ದು ಮನೆಗೆ ಹಿಂದಿರುಗಿದ ಕೂಡಲೇ ಮಗನ ತಲೆಗೆ ಮುತ್ತನ್ನು ಕೊಟ್ಟು ''ನೀನು ನನ್ನ ಅಂಗಾಂಗಗಳಿಂದ ಜನಿಸಿರುತ್ತಿ; ನೀನು ಹೃದಯಪೂರ್ವಕವಾಗಿ ಜನಿಸಿರುತ್ತಿ. ನೀನು ನನ್ನ ಆತ್ಮೀಯ ಮಗನಾಗಿರುತ್ತಿ

ನೀನು ನೂರು ವರ್ಷಗಳು ಜೀವಂತನಾಗಿರು.'' ಎಂದು ಹೇಳಿ ಅವನನ್ನು ಒಂದು ಹೆಸರಿನಿಂದ ಕರೆದು ''ನೀನು ಗುಂಡುಕಲ್ಲಿನಂತಾಗು ; ಗೊಡ್ಡಲಿಯಂತಾಗು ; ನೀನು ಎಲ್ಲೆಡೆಯೂ ಭಂಗಾರದಂತಾಗು ; ಓ ಮಗನೇ ನೀನು ನನ್ನ ಜ್ಯೋತಿಯೇ ಆಗಿದ್ದೀಯೆ ; ನೀನು ನೂರು ವರ್ಷಗಳು ಜೀವಿಸು.'' ಎಂದು ಅವನ ಹೆಸರನ್ನು ಹೇಳಿ ಅವನನ್ನು ತಬ್ಬಿಕೊಂಡು ''ಯಾವ ರೀತಿ ಪ್ರಜಾಪತಿಯು ತನ್ನ ಸೃಷ್ಟಿಯನ್ನು ಆಲಂಗಿಸಿಕೊಳ್ಳುತ್ತಾನೆಯೋ ಹಾಗೆ ನಿನ್ನನ್ನು ನಾನು ಆಲಂಗಿಸುತ್ತೇನೆ. ಎಂದು ಅವನ ಹೆಸರನ್ನು ಹಿಡಿದು ಹೇಳಿ ಅವನ ಬಲಗಿವಿಯಲ್ಲಿ ''ಓ ಮಘವನ್ನನೇ ಇವನನ್ನು ಖ್ಯಾತಿವಂತನನ್ನಾಗಿ ಮಾಡು.'' ಎಂದು ಹೇಳಿ ಅವನ ಎಡಗಿವಿಯಲ್ಲಿ "ಓ ಇಂದ್ರನೇ ಇವನಿಗೆ ಅತಿ ಶ್ರೇಷ್ಠವಾದ ಸಂಪತ್ತುಗಳನ್ನು ಕರುಣಿಸು ; ನನ್ನ ವಂಶದ ಬಳ್ಳಿಯನ್ನು ಕತ್ತರಿಸಬೇಡ ; ನಿನಗೆ ಹೆದರಿಕೆ ಎಂಬುದು ಇರದಿರಲಿ ; ನೀನು ನೂರು ವರ್ಷಗಳು ಜೀವಿಸು ; ಓ ಮಗನೇ ನಿನ್ನ ಹೆಸರನ್ನು ಹೇಳಿ ನಿನ್ನ ತಲೆಯನ್ನು ಚುಂಬಿಸುತ್ತೇನೆ.'' ಎಂದು ಹೇಳಿ ಅವನ ತಲೆಯನ್ನು ಮೂರು ಬಾರಿ ಚುಂಬಿಸಬೇಕು. ''ಯಾವ ರೀತಿ ಹಸುಗಳು ಹುಂಕಾರವನ್ನು ಮಾಡುತ್ತೋ ಹಾಗೆ ನಾನೂ ಹುಂಕಾರ ಮಾಡುತ್ತೇನೆ ಎಂದು ಹೇಳುತ್ತ ಮೂರು ಬಾರಿ ಹುಂಕರಿಸ ಬೇಕು.

ಅಥಾತೋದೇವಃ ಪರಿಮರಃ । ಏತದ್ವೈಬ್ರಹ್ಮದೀಪ್ಯತೇ ಯದಗ್ನಿರ್ಜ್ವಲತಿ । ಅಥೇತಮ್ರಿಯತೇ ಯನ್ನಜ್ವಲತಿ । ಏತದ್ವೈಬ್ರಹ್ಮದೀಪ್ಯತೇ । ಯ ಆದಿ ತ್ಯೋದೃಶ್ಯತೇ । ಅಥೈತಾನ್ಮ್ರಿಯತೇ ಯನ್ನದೃಶ್ಯತೇ । ತಸ್ಯಚಂದ್ರಮ ಸಮೇವತೇ ಜೋಗಚ್ಛತಿ । ವಾಯುಂ ಪ್ರಾಣಃ । ಏತದ್ವೈಬ್ರಹ್ಮದೀಪ್ಯತೇ ಯ ಚ್ಚಂದ್ರಮಾದೃಶ್ಯತೇ । ಅಥೈತಾನ್ಮ್ರಿಯತೇ ಯನ್ನದೃಶ್ಯತೇ । ತಸ್ಯವಿ ದ್ಯುತಮೇವತೇ ಜೋಗಚ್ಛತಿ । ವಾಯುಂಪ್ರಾಣಃ । ಏತದ್ವೈಬ್ರಹ್ಮದೀಪ್ಯತೇ ಯದ್ವಿದ್ಯುದ್ವಿದ್ಯೋತತೇ । ಅಥೈತಾನ್ಮ್ರಿಯತೇ । ತಸ್ಯವಾಯು ಮೇವ ತೇಜೋಗಚ್ಛತಿ । ವಾಯುಂಪ್ರಾಣಃ ತಾವಾಏತಾಃ ಸರ್ವಾದೇವತಾ ವಾಯು ಮೇವ ಪ್ರವಿಶ್ಯ ವಾಯೌಸುಪ್ತಾನ ಮೃಚ್ಛ್ಯನ್ತೇ । ತಸ್ಮಾದೇವ ಉ ಪುನರು ದೀರತೇ । ಇತ್ಯಧಿದೈವತಂ ! ಅಥಾಧ್ಯಾತ್ಮಂ ||೧೨||

ಇನ್ನು ಭಗವಂತನ ಸನ್ನಿಧಿಗೆ ಹೋಗುವ ವಿಚಾರ–ದೇಹದಲ್ಲಿ ಅಗ್ನಿಯು ಪ್ರಜ್ವಲಿಸು ತ್ತಿರುವವರೆಗೆ ಬ್ರಹ್ಮನೂ ಪ್ರಕಾಶಿಸುತ್ತಿರುತ್ತಾನೆ. ಹೀಗೆಯೇ ಅದು ಜ್ವಲಿಸದಾದಾಗ ಅಳಿಯುತ್ತದೆ. ಆ ಜ್ಯೋತಿಯು ಸೂರ್ಯನಲ್ಲಿಯೂ, ಪ್ರಾಣವು ವಾಯುವಿನಲ್ಲಿಯೂ

ಐಕ್ಯವಾಗುತ್ತದೆ. ಸೂರ್ಯನು ಕಂಡಾಗಲೆಲ್ಲ ಈ ಬ್ರಹ್ಮನೂ ಹೊಳೆಯುತ್ತಿರುತ್ತಾನೆ. ಆದರೆ ಸೂರ್ಯನು ಮುಳುಗಿದಾಗ ಇದೂ ಅಳಿಯುತ್ತದೆ. ಆಗ ಅದರ ಬೆಳಕು ಚಂದ್ರನಲ್ಲಿ ಐಕ್ಯವಾಗುತ್ತದೆ. ಅದರ ಪ್ರಾಣವು ಗಾಳಿಯಲ್ಲಿ ಸೇರುತ್ತದೆ. ಈ ಬ್ರಹ್ಮನು ಮಿಂಚು ಪ್ರಜ್ವಲಿಸಿದಾಗ ಅದೂ ಪ್ರಜ್ವಲಿಸುತ್ತದೆ. ಹಾಗೆಯೇ ಮಿಂಚು ಅಳಿದಾಗ ಅದೂ ಅಳಿಯುತ್ತದೆ. ಆಗ ಅದರ ಬೆಳಕು ಆಕಾಶದಲ್ಲಿ ಸೇರಿ ಹೋಗುತ್ತದೆ. ಅದರ ಪ್ರಾಣವು ಗಾಳಿಯಲ್ಲಿ ಐಕ್ಯವಾಗುತ್ತದೆ. ಈ ಎಲ್ಲಾ ದೇವತೆಗಳೂ ಗಾಳಿಯಲ್ಲಿ ಪ್ರವೇಶಿಸಿ ಅವು ಗಾಳಿಯಲ್ಲಿ ಅಳಿದರೂ ಗಾಳಿಯು ಎಂದೂ ಅಳಿಯದು. ಆದ್ದರಿಂದಲೇ ಅವು ಪುನಃ ಸಜೀವವಾಗಬಲ್ಲದು. ಇಷ್ಟು ದೇವತೆಗಳ ವಿಚಾರವಾಯಿತು ಇನ್ನು ಆತ್ಮದ ವಿಚಾರ.

ಏತದ್ವೈಬ್ರಹ್ಮದೀಪ್ಯತೇಯದ್ವಾಚಾವದತಿ । ಅಥೈತನ್ ಮ್ರಿಯತೇಯನ್ನವದತಿ । ತಸ್ಯಚಕ್ಷುರೇವತೇಜೋಗಚ್ಛತಿ । ಪ್ರಾಣಃ ಪ್ರಾಣಃ । ಏತದ್ವೈಬ್ರಹ್ಮದೀಪ್ಯತೇ ಯಚ್ಚಕ್ಷುಷಾಪಶ್ಯತಿ । ಅಥೈತನ್ ಮ್ರಿಯತೇ ಯನ್ನಪಶ್ಯತಿ । ತಸ್ಯಶ್ರೋತ್ರಮೇವತೇಜೋಗಚ್ಛತಿ । ಪ್ರಾಣಃ ಪ್ರಾಣಃ । ಏತದ್ವೈಬ್ರಹ್ಮದೀಪ್ಯತೇ । ಯಚ್ಛ್ರೋತ್ರೇಣ ಶೃಣೋತಿ । ಅಥೈತನ್ ಮ್ರಿಯತೇ ಯನ್ನಶೃಣೋತಿ । ತಸ್ಯಮನಏವತೇಜೋಗಚ್ಛತಿ । ಪ್ರಾಣಃ ಪ್ರಾಣಃ । ಏತದ್ವೈಬ್ರಹ್ಮದೀಪ್ಯತೇ ಯನ್ಮನಸಾಧ್ಯಾಯತಿ । ಅಥೈತನ್ ಮ್ರಿಯತೇ । ಯನ್ನಧ್ಯಾಯತಿ । ತಸ್ಯಪ್ರಾಣಮೇವತೇಜೋಗಚ್ಛತಿ । ಪ್ರಾಣಃ ಪ್ರಾಣಃ । ತಾವಾಏತಾಃ ಸರ್ವಾದೇವತಾಃ ಪ್ರಾಣಮೇವ ಪ್ರವಿಶ್ಯಪ್ರಾಣೇ ಸೃಪ್ತಾನಮ್ಮೃಚ್ಛನ್ತೇ । ತಸ್ಮಾದೇವಪುನರುದೀರತೇ । ತದ್ಯದಿಹವಾ ಏವಂ ವಿದ್ವಾಂಸಂ ಉಭೌಪರ್ವತಾಭಿಪ್ರವರ್ತೇಯಾತಾಂತು ಸ್ತೂರ್ಷಮಾಣೌದಕ್ಷಿಣಶ್ಚೋತ್ತರಶ್ಚ ನಹೈವೈನಂ ಸ್ತೃಣ್ವೀಯಾತಾಂ । ಅಥಏನಂ ದ್ವಿಷನ್ತಿಯಾಂಶ್ಚ ಸ್ವಯಂದ್ವೇಷ್ಟಿತಏನಂ ಸರ್ವೇಪರಿಭ್ರಿಯನ್ತೇ ॥೧೩॥

ವಾಕ್ಕಿನೊಂದಿಗೆ ವಾಚ್ಯಮಾಡುವಾಗ ಈ ಬ್ರಹ್ಮನು ಮುಂಬೆಳಗುತ್ತಾನೆ. ಹೀಗೆಯೇ ವಾಚ್ಯಮಾಡದಿದ್ದಾಗ ಅದೂ ಅಳಿಯುತ್ತದೆ. ಅದರ ಬೆಳಕು ಕಣ್ಣಿಗೆ ಹೋಗುತ್ತದೆ. ಅದರ ಪ್ರಾಣವು ಪ್ರಾಣವನ್ನು ಸೇರುತ್ತದೆ. ಒಬ್ಬರು ತಮ್ಮ ಕಿವಿಗಳಿಂದ, ಕೇಳುವಾಗ ಈ ಬ್ರಹ್ಮನು ಮುಂಬೆಳಗುತ್ತಾನೆ. ಹೀಗೆಯೇ ಕೇಳದಿದ್ದಾಗ ಈ ಬ್ರಹ್ಮವು ಅಳಿಯುತ್ತದೆ. ಪ್ರಾಣವು ಪ್ರಾಣಕ್ಕೆ ಸೇರುತ್ತದೆ. ಅದರ ಬೆಳಕು ಮನಸ್ಸಿಗೆ

ಹೋಗುತ್ತದೆ. ಮನಸ್ಸಿನಿಂದ ಆಲೋಚನೆ ಮಾಡುವಾಗ ಈ ಬ್ರಹ್ಮನು ಮುಂಬೆಳ ಗುತ್ತಾನೆ. ಹೀಗೆಯೇ ಆಲೋಚನೆ ಮಾಡದಿದ್ದಾಗ ಅಳಿಯುತ್ತದೆ, ಅದರ ಬೆಳಕು ಪ್ರಾಣಕ್ಕೆ ಹೋಗುತ್ತದೆ. ಅದರ ಪ್ರಾಣವು ಪ್ರಾಣಕ್ಕೆ ಸೇರುತ್ತದೆ. ಈ ದೇವತೆ ಗಳೆಲ್ಲರೂ ಪ್ರಾಣನೊಳಗೆ ಐಕ್ಯರಾಗಿ ಅವು ಮರಣ ಹೊಂದಿದಾಗ್ಯೂ ಲಯವಾಗು ವುದಿಲ್ಲ: ಅದು ಪುನಃ ಜನ್ಮವನ್ನು ತಾಳಿಯೇ ತಾಳುತ್ತದೆ. ಹಾಗೆಯೇ ಯಾವ ವಿದ್ವಾಂಸರು ದಕ್ಷಿಣೋತ್ತರಗಳಲ್ಲಿರುವ ಈ ಎರಡು ಪರ್ವತಗಳಿಂದ ಜಜ್ಜಿ ಹೋಗಲು ಹೊರಳಾಡಿದರೂ ಅವು ಜಜ್ಜುವುದಿಲ್ಲವೋ ಬದನ್ನೂ, ಆದರೆ ಯಾರು ಅವನನ್ನು ದ್ವೇಷಿಸುತ್ತಾರೋ ಅಥವ ಅವನಿಂದ ದ್ವೇಷಿಸಲ್ಪಡುತ್ತಾರೋ ಅವರು ಆಗಾಗಲೇ ಮರಣ ಹೊಂದುತ್ತಾರೆಂದು ತಿಳಿಯಬೇಕು.

ಅಥಾತೋ ನಿಃಶ್ರೇಯ ಸಾದಾನಂ | ಸರ್ವಾಹ ವೈದೇವತಾಽ ಹಂ ಶ್ರೇಯಸೇ ವಿವದಮಾನಾ ಅಸ್ಮಾಚ್ಛರೀರಾದುಚ್ಚಕ್ರಮುಃ ತದ್ದಾರು ಭೂತಂ ಶಿಶ್ಯೇ | ಅಥೈತದ್ವಾಕ್ ಪ್ರವಿವೇಶ | ತದ್ವಾಚಾ ವದಚ್ಛಿಶ್ಯ ಏವ | ಅಥೈತಚ್ಚಕ್ಷುಃ ಪ್ರವಿವೇಶ | ತದ್ವಾಚಾ ವದಚ್ಚಕ್ಷುಷಾ ಪಶ್ಯಚ್ಛಿಶ್ಯ ಏವ | ಅಥೈತು ಚ್ಛ್ರೋತ್ರಂ ಪ್ರವಿವೇಶ | ತದ್ವಾಚಾವದಚ್ಚಕ್ಷುಷಾ ಪಶ್ಯ ಚ್ಛ್ರೋತ್ರೇಣ ಶೃಣ್ವಚ್ಛಿಶ್ಯ ಏವ | ಅಥೈ ತನ್ಮಃ ಪ್ರವಿವೇಶ | ತದ್ವಾಚಾವದಚ್ಚ ಕ್ಷುಷಾ ಪಶ್ಯ ಚ್ಛ್ರೋತ್ರೇಣ ಶೃಣ್ವನ್ ಮನಸಾಧ್ಯಾಯ ಚ್ಛಿಶ್ಯ ಏವ | ಅಥೈತತ್ ಪ್ರಾಣಃ ಪ್ರವಿವೇಶ | ತತ್ತತ ಏವ ಸಮುತ್ತ ಸೌ | ತೇದೇವಾಃ ಪ್ರಾಣೇ ನಿಃಶ್ರೇಯ ಸಂವಿದಿತ್ವಾ ಪ್ರಾಣಮೇವ ಪ್ರಜ್ಞಾತ್ಮಾನ ಮಪಿ ಸಂಭೂಯ ಸಹೈತೈಃ ಸರ್ವೈರಸ್ಮಾಲ್ಲೋಕಾ ದುಚ್ಚ ಕ್ರಮುಃ | ತೇ ವಾಯು ಪ್ರತಿಷ್ಠಾ ಆಕಾಶಾತ್ಮನಃ ಸ್ವರೀಯುಃ | ತಥೋ ಏವೈವಂ ವಿದ್ವಾನ್ ಸರ್ವೇಷಾಂ ಭೂತಾನಾಂ ಪ್ರಾಣಮೇವ ಪ್ರಜ್ಞಾತ್ಮಾನ ಮಭಿ ಸಂಭೂಯ ಸಹೈತೈಃ ಸರ್ವೈ ರಸ್ಮಾಚ್ಛರೀರಾ ದುತ್ಕ್ರಾಮತಿ | ಸವಾಯು ಪ್ರತಿಷ್ಟ ಆಕಾಶಾತ್ಮಾ ಸ್ವರೇತಿ| ಸತದ್ಭವತಿ ಯತ್ರೈತೇ ದೇವಾಃ | ತತ್ಪ್ರಾಪ್ಯ ತದ ಮೃತೋ ಭವತಿ | ಯದ ಮೃತಾ ದೇವಾಃ ||೧೪||

ಈಗ ಉಚ್ಚಕ್ರಮ ಶ್ರೇಯಸ್ಸಿನ ವಿಚಾರ–ಈ ದೇವರುಗಳೆಲ್ಲ ಪರಸ್ಪರವಾದಿಸಿ ಕೊಂಡು ಯಾರು ತಮ್ಮ ಪೈಕಿ ಶ್ರೇಷ್ಠರೆಂದು ತಿಳಿಯಲು ದೇಹದಿಂದ ಹೊರೆ ಬರಲು ಯೋಚಿಸಿದರು. ದೇಹವು ಉಸಿರಾಡದಿದ್ದಲ್ಲಿ ಒಣಗಿದ ಮರದ ತುಂಡಿ ನಂತೆ ಬಿದ್ದಿರಬೇಕು. ಇಂತಹ ಪರಿಸ್ಥಿತಿಯಲ್ಲಿ ಮೊದಲು ವಾಕ್ಕು ಪ್ರವೇಶಿಸಿತು.

ಅದು ಮಲಗಿದ್ದ ಹಾಗೆಯೇ ವಾಕ್ಕಿನೊಂದಿಗೆ ಮಾತನಾಡುತ್ತಿತ್ತು. ತರುವಾಯ ಕಣ್ಣು ಪ್ರವೇಶಿಸಿತ್ತು. ಅದು ಮಲಗಿದ್ದ ಹಾಗೆ ವಾಕ್ಕಿನಿಂದ ಮಾತನಾಡುತ್ತಲೂ, ಕಣ್ಣಿನಿಂದ ನೋಡುತ್ತಲೂ ಇದ್ದಿತು. ತರುವಾಯ ಕಿವಿಯು ಪ್ರವೇಶಿಸಿತು. ಅದು ಮಲಗಿಯೇ ವಾಕ್ಕಿನಿಂದ ಮಾತನಾಡುತ್ತ, ಕಣ್ಣುಗಳಿಂದ ನೋಡುತ್ತ, ಕಿವಿಗಳಿಂದ ಕೇಳುತ್ತ, ಇದ್ದಿತು. ತರುವಾಯ ಬುದ್ಧಿಯು ಪ್ರವೇಶಿಸಿತು. ಆಗಲೂ ಅದು ಮಲಗಿದ್ದೇ ವಾಕ್ಕಿನಿಂದ ಮಾತನಾಡುತ್ತ, ಕಣ್ಣಿನಿಂದ ನೋಡುತ್ತ, ಕಿವಿಗಳಿಂದ ಕೇಳುತ್ತ, ಬುದ್ಧಿಇಂದ ಚಿಂತಿಸುತ್ತ ಇದ್ದುಬಿಟ್ಟಿತು. ತರುವಾಯ ಪ್ರಾಣವು ಪ್ರವೇಶಿಸಿತು. ಆಗ ಕೂಡಲೆ ಆ ದೇಹವು ಎದ್ದಿತು. ಆಗ ಇತರ ದೇವತೆಗಳು ಪ್ರಾಣದ ಶ್ರೇಷ್ಠತೆಯನ್ನು ಕಂಡುಕೊಂಡು ಪ್ರಾಣವೇಪ್ರಜ್ಞಾತ್ಮವೆಂದು ತಿಳಿದವು. ಮತ್ತು ಎಲ್ಲರೂ ಸೇರಿ ದೇಹದಿಂದ ಒಂದೇ ಬಾರಿಗೆ ಹೊರಬಿದ್ದವು. ಅವು ಗಾಳಿಯನ್ನು ಪ್ರವೇಶಿಸುತ್ತಲೇ ಆಕಾಶ ರೂಪವಾಗಿ ದೇವಲೋಕವನ್ನು ಸೇರಿದವು. ಹೀಗೆಯೇ ಯಾರು ಪ್ರಾಣನು ಸರ್ವ ಶ್ರೇಷ್ಠನೆಂದು ತಿಳಿದು ಪ್ರಾಣದೊಂದಿಗೆ ಪ್ರಜ್ಞಾತ್ಮನಾದ ಪ್ರಾಣದೊಡನೆ ಈ ದೇಹದಿಂದ ಹೊರಬಂದಾಗ ಎಲ್ಲಾ ಪ್ರಾಣಗಳೂ ವಾಯುವನ್ನು ಪ್ರವೇಶಿಸಿ ಆಕಾಶ ರೂಪವಾಗಿ ದೇವಲೋಕಕ್ಕೆ ಹೋಗುವರೆಂದು ಅರಿಯುವರೋ ಅವರು ಕೂಡ ದೇವಲೋಕಕ್ಕೆ ಹೋಗುವರು. ಅವನು ದೇವರುಗಳು ಇರುವ ಕಡೆಯೇ ಇರುವನು ಅಲ್ಲಿಗೆ ಹೋಗಿ ಸೇರಿದ ತರುವಾಯ ಅಲ್ಲಿಯ ದೇವರುಗಳಂತೆ ತಾನೂ ಅಮೃತವೆಂದು ಅರಿಯುತ್ತಾನೆ.

ಅಥಾತಃ ಪಿತಾ ಪುತ್ರಂ ಪ್ರೈಷ್ಯನ್ನಾಹ್ವಾಯತಿ। ತನ್ವೈಸ್ತೃಣ್ಯೈರ ಗಾರಂ ಸಂಸ್ತೀರ್ಯಾಗ್ನಿ ಮುಪ ಸಮಾಧಾಯೋದ ಕುಂಭಂ ಸಪಾತ್ರ ಮುಪನಿಧಾಯಾಹತೇನ ವಾಸಸಾಸಂ ಪ್ರಚ್ಛನ್ನಃ ಸ್ವಯಂ ಶ್ಯೇತ ಏತ್ಯ ಪುತ್ರ ಉಪರಿಷ್ಟಾದ ಭಿನಿಪದ್ಯತ ಇಂದ್ರಿಯೈ ರಸ್ಯೇಂದ್ರಿಯಾಣಿ ಸಂಸ್ಪೃಶ್ಯ । ಅಪಿ ವಾಽಸ್ಯಾಭಿಮುಖತ ಏವಾಽಽಸೀತ್ । ಅಥಾಸ್ಮೈ ಸಂಪ್ರಯಚ್ಛತಿ । ವಾಚಂಮೇತ್ವಯಿದಧಾನೀತಿ ಪಿತಾ । ವಾಚಂತೇ ಮಯಿ ದಧ ಇತಿ ಪುತ್ರಃ । ಪ್ರಾಣಂ ಮೇತ್ವಯಿ ದಧಾನೀತಿ ಪಿತಾ । ಪ್ರಾಣಂ ತೇ ಮಯಿ ದಧ ಇತಿ ಪುತ್ರಃ । ಚಕ್ಷುರ್ಮೇತ್ವಯಿ ದಧಾ ನೀತಿ ಪಿತಾ । ಚಕ್ಷುಸ್ತೇಮಯಿ ದಧ ಇತಿ ಪುತ್ರಃ । ಶ್ರೋತ್ರಂ ಮೇತ್ವಯಿ ದಧಾ ನೀತಿ ಪಿತಾ । ಶ್ರೋತ್ರಂ ಮೇ ಮಯಿ ದಧ ಇತಿ ಪುತ್ರಃ । ಅನ್ನ ರಸಾನ್ಮೇ ತ್ವಯಿ ದಧಾ ನೀತಿ ಪಿತಾ । ಅನ್ನ ರಸಾಂ ಸ್ತೇಯಯಿ ದಧ ಇತಿ ಪುತ್ರಃ । ಕರ್ಮಾಣಿಮೇ ತ್ವಯಿ ದಧಾ ನೀತಿ ಪಿತಾ । ಕರ್ಮಾಣಿತೇ ಮಯಿ ದಧ ಇತಿ ಪುತ್ರಃ । ಸುಖ ದುಃಖೇಮೇತ್ವಯಿ ದಧಾ ನೀತಿ ಪಿತಾ । ಸುಖ

ದುಃಖೇ ಮೇ ಮಯಿ ದಧ ಇತಿ ಪುತ್ರಃ | ಆನಂದ ರತಿಂ ಪ್ರಜಾತಿಂ ಮೇತ್ವಯಿ ದಧಾನೀತಿ ಪಿತಾ | ಆನಂದ ರತಿಂ ಪ್ರಜಾತಿಂತೇ ಮಯಿ ದಧ ಇತಿ ಪುತ್ರಃ | ಇತ್ಯಾಮೇತ್ವಯಿ ದಧಾ ನೀತಿ ಪಿತಾ | ಇತ್ಯಾಸ್ತೇಮಯಿ ದಧ ಇತಿ ಪುತ್ರಃ | ಧಿಯೋ ವಿಜ್ಞಾತವ್ಯಂ ಕಾಮಾನ್ಮೇ ತ್ವಯಿ ದಧಾ ನೀತಿ ಪಿತಾ | ಧಿಯೋ ವಿಜ್ಞಾನವ್ಯಂ ಕಾಮಾಂಸ್ತೇ ಮ ಯಿ ದಧ ಇತಿ ಪುತ್ರಃ | ಅಥದಕ್ಷಿಣಾವೃತ್ ಪ್ರಾಂಗ್ನ ನಿಷ್ಕ್ರಾಮತಿ ತಂಪಿತಾಽನು ಮಂತ್ರಯತೇ—ಯಶೋ ಬ್ರಹ್ಮ ವರ್ಚಸಮನ್ನಾದ್ಯಂಕೀರ್ತಿ ಸ್ತ್ವಾಜುಷತಾಮಿತಿ | ಅಥೇತರಃ ಸವ್ಯಮಂ ಸಮನ್ವ ವೇಕ್ಷತೇ | ಪಾಣಿನಾಽನ್ತರ್ಧಾಯ ವಸನಾನ್ತೇ ನವಾ ಪ್ರಚ್ಛಾದ್ಯ ಸ್ವರ್ಗಲ್ಲೋಕಾನ್ ಕಾಮಾನಾಪ್ನುಹೀತಿ | ಸಯದ್ಯ ಗದಃ ಸ್ಯಾತ್ ಪುತ್ರಸ್ಯೈಶ್ವರ್ಯೇ ಪಿತಾವಸೇತ್ | ಪರಿ ವಾ ವ್ರಜೇತ್ | ಯದ್ಯುಪ್ರೈ ಪ್ರೇಯಾದ್ಯಪೇವೈನಂ ಸಮಾಪಯತಿ, ತಥಾ ಸಮಾಪಯತಿ ತವ್ಯೋಭವತಿ | ತಥಾ ಸಮಾಪಯಿತವ್ಯೋ ಭವತಿ ||೧೫||

ಮುಂದೆ ತಂದೆ ಮಗನ ಸಂಬಂಧ ಅಥವಾ ಅನುವಂಶಿಕ ಬದಲಾವಣೆಯ ವಿಚಾರ—ತಂದೆಯು ಹೊರಡುವ ಸಮಯದಲ್ಲಿ ಮನೆಗೆ ಹೊಸ ಹುಲ್ಲನ್ನು ಹೊಡೆಸಿ ವೇದಿಕೆಯನ್ನು ಕಟ್ಟಿ ಅಗ್ನಿಯನ್ನು ಪ್ರತಿಷ್ಠಾಪಿಸಿ ಅದರ ಬಳಿಗ ಒಂದು ಉದಕ ಕುಂಭವನ್ನೂ ಇನ್ನೊಂದರಲ್ಲಿ ಚರುವನ್ನು ತುಂಬಿರುವ ಕುಂಭವನಿಟ್ಟು, ತಾನೂ ಹೊಸ ವಸ್ತ್ರಾಭರಣಗಳನ್ನೂ ಏರ್ಪಡಿಸಿಕೊಂಡು ಮಗನನ್ನು ಕೂಗುತ್ತಾನೆ. ಆಗ ಮಗನ್ನು ಬಂದು ತನ್ನ ಮತ್ತು ತಂದೆಯ ಇಂದ್ರಿಯಗಳನ್ನು ಸ್ಪರ್ಶಮಾಡಿಕೊಳ್ಳುತ್ತಾ ತಂದೆಯು ಮುಂದೆ ಕುಳಿತಾಗ ಅವನು ತನ್ನ ವಂಶಾಚಾರ ಪದ್ಧತಿಯನ್ನು ವರ್ಗಾವಣೆ ಮಾಡುತ್ತಾನೆ. ತರುವಾಯ ಅವನಿಗೆ ಈ ರೀತಿ ಸಂಭೋಧಿಸುತ್ತಾನೆ.

ತಂದೆ—ನನ್ನ ವಾಕ್ಕನ್ನ ನಿನ್ನಲ್ಲಿ ಸ್ಥಾಪಿಸುತ್ತೇನೆ.

ಮಗ—ನಿಮ್ಮ ವಾಕ್ಕನ್ನು ನಾನು ಸ್ವೀಕರಿಸುತ್ತೇನೆ.

ತಂದೆ—ನನ್ನ ಪ್ರಾಣವನ್ನು ನಿನ್ನಲ್ಲಿ ಸ್ಥಾಪಿಸುತ್ತೇನೆ.

ಮಗ—ನಾನು ನಿನ್ನ ಪ್ರಾಣವನ್ನು ಸ್ವೀಕರಿಸುತ್ತೇನೆ.

ತಂದೆ—ನನ್ನ ಕಣ್ಣನ್ನು ನಿನ್ನಲ್ಲಿ ಸ್ಥಾಪಿಸುತ್ತೇನೆ.

ಮಗ—ನಿನ್ನ ಕಣ್ಣನ್ನು ನಾನು ಸ್ವೀಕರಿಸುತ್ತೇನೆ.

ತಂದೆ—ನನ್ನ ಕಿವಿಯನ್ನು ನಿನ್ನಲ್ಲಿ ಸ್ಥಾಪಿಸುತ್ತೇನೆ.

ಮಗ—ನಿನ್ನ ಕಿವಿಯನ್ನು ನಾನು ಸ್ವೀಕರಿಸುತ್ತೇನೆ.

ತಂದೆ—ನನ್ನ ಅನ್ನ ರಸವನ್ನು ನಿನ್ನಲ್ಲಿ ಸ್ಥಾಪಿಸುತ್ತೇನೆ.

ಮಗ—ನಿನ್ನ ಅನ್ನರಸವನ್ನು ನಾನು ಸ್ವೀಕರಿಸುತ್ತೇನೆ.
ತಂದೆ—ನನ್ನ ಕರ್ಮಗಳನ್ನು ನಿನ್ನಲ್ಲಿ ಸ್ಥಾಪಿಸುತ್ತೇನೆ.
ಮಗ—ನಿನ್ನ ಕರ್ಮಗಳನ್ನು ನಾನು ಸ್ವೀಕರಿಸುತ್ತೇನೆ,
ತಂದೆ—ನನ್ನ ಸುಖ ದುಃಖಗಳನ್ನು ನಿನ್ನಲ್ಲಿ ಸ್ಥಾಪಿಸುತ್ತೇನೆ.
ಮಗ—ನಿನ್ನ ಸುಖ ದುಃಖಗಳನ್ನು ನಾನು ಸ್ವೀಕರಿಸುತ್ತೇನೆ.
ತಂದೆ—ನನ್ನ ಆನಂದ, ರತಿ, ಪ್ರಜಾತಿಗಳನ್ನು ನಿನ್ನಲ್ಲಿ ಸ್ಥಾಪಿಸುತ್ತೇನೆ.
ಮಗ—ನಿನ್ನ ಆನಂದ, ರತಿ, ಪ್ರಜಾತಿಗಳನ್ನು ನಾನು ಸ್ವೀಕರಿಸುತ್ತೇನೆ.
ತಂದೆ—ನನ್ನ ಸ್ಥಿತ್ಯಂತರವನ್ನು ನಿನ್ನಲ್ಲಿ ಸ್ಥಾಪಿಸುತ್ತೇನೆ.
ಮಗ—ನಿನ್ನ ಸ್ಥಿತ್ಯಂತರವನ್ನು ನಾನು ಸ್ವೀಕರಿಸಿರುತ್ತೇನೆ.
ತಂದೆ—ನನ್ನ ಮನಸ್ಸನ್ನು ನಿನ್ನಲ್ಲಿ ಸ್ಥಾಪಿಸುತ್ತೇನೆ.
ಮಗ—ನಿನ್ನ ಮನಸ್ಸನ್ನು ನಾನು ಸ್ವೀಕರಿಸುತ್ತೇನೆ.
ತಂದೆ—ನನ್ನ ಧೀಶಕ್ತಿಯನ್ನು ಮತ್ತು ವಿಜ್ಞಾನವನ್ನು ನಿನ್ನಲ್ಲಿ ಸ್ಥಾಪಿಸುತ್ತೇನೆ.
ಮಗ—ನಿನ್ನ ಧೀಶಕ್ತಿ ಮತ್ತು ವಿಜ್ಞಾನವನ್ನು ನಾನು ಸ್ವೀಕರಿಸುತ್ತೇನೆ.

ತಾನು ಇನ್ನು ಹೆಚ್ಚಾಗಿ ಮಾತನಾಡಲು ಶಕ್ತಿ ಇಲ್ಲದವನಾದಾಗ ತಂದೆಯು ಹೀಗೆ ಹೇಳುತ್ತಾನೆ. "ನಾನು ನನ್ನ ಪ್ರಾಣವನ್ನು ನಿನ್ನಲ್ಲಿ ಸ್ಥಾಪಿಸುತ್ತೇನೆ." ಆಗ ಮಗನು "ನಿನ್ನ ಪ್ರಾಣವನ್ನು ನಾನು ಸ್ವೀಕರಿಸುತ್ತೇನೆ. ಆ ತರುವಾಯ ಅವನು ಬಲಕ್ಕೆ ತಿರುಗಿಕೊಂಡು ಪೂರ್ವದ ಕಡೆಗೆ ಹೋಗುತ್ತಾನೆ. ಆಗ ತಂದೆಯು ಅವನನ್ನು ಹಿಂದೆಯೇ ಕೂಗಿ ಹೇಳುತ್ತಾನೆ "ನನ್ನಯಶ, ವರ್ಚಸ್ಸು, ಅನ್ನಾದ್ಯ, ಕೀರ್ತಿ, ಇವು ನಿನಗೆ" ಎನ್ನಲು ಮಗನು ಅವನ ಎಡ ಭುಜಗಳ ಕಡೆ ನೋಡಿ ಕೊಳ್ಳುತ್ತಾನೆ. ಮತ್ತು ಅವನ ಕೈಗಳಿಂದ ಮುಖವನ್ನು ಮುಚ್ಚಿಕೊಂಡು ಅಥವಾ ವಸ್ತ್ರಗಳಿಂದ ಮುಚ್ಚಿಕೊಂಡು ಹೇಳುತ್ತಾನೆ "ನಿನಗೆ ಸ್ವರ್ಗಲೋಕವು ಪ್ರಾಪ್ತವಾಗಿ ನಿನ್ನ ಇಷ್ಟಾರ್ಥವು ಸಿದ್ಧಿಸಲಿ. "ಆ ತರುವಾಯವೂ ತಂದೆಯು ಬದುಕಿದ್ದರೆ ಅವನು ಮಗನ ಆಶ್ರಯದಲ್ಲಿರಬೇಕು. ಇಲ್ಲದಿದ್ದರೆ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಹೊರಟು ಹೋಗಬೇಕು. ಹಾಗೆ ಅವನು ಹೊರಟು ಹೋದ ಕೂಡಲೆ ಅವನ ಕರ್ಮಾಂತರಗಳನ್ನು ಅವರ ಯೋಗ್ಯತೆಗೆ ತಕ್ಕಂತೆ ಮಾಡಬೇಕು.

## ಅಥ ತೃತೀಯ ಅಧ್ಯಾಯಃ

ಪ್ರತರ್ದನೋಹವೈದೇವೋದಾಸಿ ರಿಂದ್ರಸ್ಯ ಪ್ರಿಯಂಧಾಮೋಪ ಜಗಾಮ ಯುದ್ಧೇನಚ ಪೌರುಷೇಣಚ। ತಂಹೇಂದ್ರ ಮುವಾಚ–ಪ್ರತರ್ದನ ವರಂ ದದಾನೀತಿ। ಸಹೋವಾಚ ಪ್ರತರ್ದನಃ–ತ್ವಮೇವಮೇ(ವರಂ) ವೃಣೀಷ್ವಯಂ ತ್ವಂಮನುಷ್ಯಾಯ ಹಿತತಮಂ ಮನ್ಯಸ ಇತಿ। ತಂಹೇಂದ್ರ ಉವಾಚ–ನವೈವರಂ ಪರಸ್ಮೈ ವೃಣೀತೇ। ತ್ವಮೇವ ವೃಣೀಷ್ವೇತಿ। ಏವಮುವರೋ ವೈಕಿಲಮ ಇತಿ ಹೋವಾಚ ಪ್ರತರ್ದನಃ। ಅಥೋಖಲ್ವಿಂದ್ರಃ ಸತ್ಯಾದೇವನೇಯಾಯ। ಸತ್ಯಂಹೀನ್ದ್ರಃಸಹೋವಾಚ–ಮಾಮೇವ ವಿಜಾನೀಹಿ। ಏತದೇವಾಹಂ ಮನುಷ್ಯಾಯ ಹಿತತಮಂ ಮನ್ಯೇಯನ್ಮಾಂ ವಿಜಾನೀಯಾತ್। ತ್ರಿಶೀರ್ಷಾಣಾಂತ್ವಾಷ್ಟ್ರಮಹನಂ। ಅರುರ್ಮುಖಾನ್ ಯತೀನ್ಸಾಲಾವೃಕೇಭ್ಯಃ ಪ್ರಾಯಚ್ಛಂ। ಬಹ್ವೀಃ ಸಂಧಾ ಅತಿಕ್ರಮ್ಯ ದಿವಿ ಪ್ರಹ್ಲಾದೀಯಾನತೃಣಮಹಮನ್ತರಿಕ್ಷೇ ಪೌಲೋಮಾನ್ ಪೃಥಿವ್ಯಾಂ ಕಾಲಖಂಜಾನ್। ತಸ್ಯಮೇತತ್ರಸಲೋಮಚ ನಾಮೀಯತ। ಸಯೋಮಾಂ ವಿಜಾನೀಯಾ-ನ್ನಾಸ್ಯಕೇನಚಕರ್ಮಣಾಲೋಕೋಮೀಯತೇ। ನಮಾತೃವಧೇನ ನಪಿತೃವಧೇನ ನಸ್ತೇಯೇನ ಭ್ರೂಣಹತ್ಯಯಾ। ನಾಸ್ಯಪಾಪಂಚ ನಚಕ್ರೃಷೋ ಸುಖಾನ್ನೀಲ ವ್ಯೇತೀತಿ ||೧||

ಯುದ್ಧದಲ್ಲಿ ಮತ್ತು ಪೌರುಷದಲ್ಲಿ ಮಿಗಿಲಾದ ದಿವೋದಾಸನ ಮಗ ಪ್ರತರ್ದನನು ಇಂದ್ರನ ಪ್ರಿಯವಾದ ಮನೆಗೆ ಬಂದನು. ಆಗ ಇಂದ್ರನು ಅವನಿಗೆ ಒಂದು ವರವನ್ನು ಕೇಳಿಕೊಳ್ಳೆಂದು ಹೇಳಿದನು. ಆಗ ಪ್ರತರ್ದನನು ಹೇಳುತ್ತಾನೆ ''ಜನಸಾಮಾನ್ಯರಿಗೆ ಅನುಕೂಲವಾದಂತಹ ಒಂದು ವರವನ್ನು ನೀವೇ ಆರಿಸಿ ದಯಪಾಲಿಸಿರಿ'' ಎಂದನು. ಆಗ ಇಂದ್ರನು ಹೇಳುತ್ತಾನೆ. ''ದೊಡ್ಡವರು ಅವರ ಕೈಕೆಳಗಿನವರಿಗೆ ಆರಿಸಕೂಡದು. ಆದ್ದರಿಂದ ನೀನೇ ಹುಡುಕಿಕೋ.'' ಆಗ ಪ್ರತರ್ದನನು ''ನನಗೆ ವರವೇ ಬೇಡ'' ಎಂದನು. ಸತ್ಯದಮೂರ್ತಿಯಾದ ಇಂದ್ರನು ತಾನು ಕೊಟ್ಟಿದ್ದ ಮಾತಿಗೆ ತಪ್ಪುವ ಹಾಗಿರಲಿಲ್ಲ. ಆದ್ದರಿಂದ ಇಂದ್ರನು ಅವನಿಗೆ "ನನ್ನನ್ನು ಚೆನ್ನಾಗಿ ತಿಳಿದುಕೋ ಅದರಿಂದ ಮನುಷ್ಯವರ್ಗಕ್ಕೆ ಬಹಳ ಅನುಕೂಲವಾಗುತ್ತದೆ." ಎಂದು ಹೇಳಿದನು. ಇನ್ನೂ ಹೇಳುತ್ತಾನೆ ''ಇತರರು ನನ್ನನ್ನು ಚೆನ್ನಾಗಿ ತಿಳಿಯಬೇಕು. ಏಕೆಂದರೆ ನಾನು ತ್ವಷ್ಟ್ರಿ ಎಂಬುವವನ ಮಗನಾದ ಮೂರು ತಲೆ ಇದ್ದ

ರಾಕ್ಷಸನನ್ನು ಇರಿದೆನು. ಅರುಣ್ಮುಖರೆಂಬ ಸನ್ಯಾಸಿಗಳನ್ನು ತೋಳಗಳಿಗೆ ಹಂಚಿದೆನು. ನಮ್ಮಲ್ಲಿ ಆದ ಒಡಂಬಡಿಕೆಗಳನ್ನು ಮೀರಿ ಪ್ರಹ್ಲಾದನ ಜನಗಳನ್ನು ಆಕಾಶದಲ್ಲಿ ಕೊಂದೆನು. ಪೌಲೋಮರನ್ನು ಅಂತರಿಕ್ಷದಲ್ಲೂ, ಕಾಲಖಂಜರನ್ನು ಭೂಮಿಯ ಮೇಲೂ ಕೊಂದೆನು. ಆ ಕಾಲದಲ್ಲಿ ನನ್ನ ಒಂದು ಕೂದಲೂ ಗಾಯಗೊಳ್ಳಲಿಲ್ಲ. ಆದ್ದರಿಂದ ನನ್ನನ್ನು ಯಾರು ಈ ರೀತಿ ತಿಳಿದುಕೊಳ್ಳುತ್ತಾರೋ ಯಾವ ವಿಧವಾದ ಕಾರ್ಯಗಳಿಂದಾಗಲೀ ಅವನ ಮತ್ತು ಅವನ ಲೋಕವು ತೊಂದರೆಗೆ ಒಳಗಾಗುವುದಿಲ್ಲ. ಕಳ್ಳತನದಿಂದಾಗಲೀ, ಭ್ರೂಣಹತ್ಯೆ ಇಂದಾಗಲೀ, ಮಾತೃಹತ್ಯೆ ಇಂದಾಗಲೀ, ಪಿತೃಹತ್ಯೆ ಇಂದಾಗಲೀ, ಯಾವ ತೊಂದರೆಗೂ ಒಳಗಾಗುವುದಿಲ್ಲ. ಅವನು ತಾನಾಗಿ ಪಾಪಮಾಡಲು ಇಚ್ಛಿಸಿದರೆ ಅವನ ಮುಖದ ಮೇಲೆ ಕಪ್ಪುಮಚೆಯುಂಟಾಗಿ ಅದು ಎಂದೆಂದಿಗೂ ಅಳಿಸಿಹೋಗದು.

ಸಹೋವಾಚ–ಪ್ರಾಣೋಽಸ್ಮಿ ಪ್ರಜ್ಞಾತ್ಮಾ। ತಂ ಮಾಮಾಯುರಮೃತ ಮಿತ್ಯುಪಾಸ್ಸ್ವ। ಆಯುಃ ಪ್ರಾಣಃ। ಪ್ರಾಣೋವಾ ಆಯುಃ। ಪ್ರಾಣ ಏವಾಮೃತಂ। ಯಾವ ವಧ್ಯಸ್ಮಿನ್ ಶರೀರೇ ಪ್ರಾಣೋವಸತಿ ತಾವದಾಯುಃ। ಪ್ರಾಣೇನ ಹ್ಯೇವಾಮುಷ್ಮಿಲ್ಲೋಕೇಽಮೃತತ್ವಮಾಪ್ನೋತಿ। ಪ್ರಜ್ಞಯಾ ಸತ್ಯಂ ಸಂಕಲ್ಪಂ। ಸಯೋಮಾಮಾಯುರಮೃತ ಮಿತ್ಯುಪಾಸ್ತೇ। ಸರ್ವಮಾಯುರಸ್ಮಿನ್ ಲ್ಲೋಕ ಏತಿ। ಆಪ್ನೋತ್ಯಮೃತತ್ವಕ್ಷಿತಿಂ ಸ್ವರ್ಗೇಲೋಕೇ। ತದ್ಧೈಕ ಆಹುರೇಕಭೂಯಂ ವೈಪ್ರಾಣಾಗಚ್ಛಂತೀತಿ। ನಹಿಕಶ್ಚನಶಕ್ನುಯಾತ್ ಸಕೃದ್ವಾಚಾನಾಮ ಪ್ರಜ್ಞಾಪಯಿತುಂ ಚಕ್ಷುಷಾರೂಪಂ ಶ್ರೋತ್ರೇಣ ಶಬ್ದಂ ಮನಸಾಧ್ಯಾತುಂ। ಇತ್ಯೇಕಭೂಯಂ ವೈಪ್ರಾಣಾಃ। ಏಕೈಕಮೇತಾನಿ ಸರ್ವಾಣ್ಯೇವ ಪ್ರಜ್ಞಾಪಯನ್ತಿ। ವಾಚಂ ವದಂತೀಂ। ಸರ್ವೇಪ್ರಾಣಾ ಅನುವದನ್ತಿ। ಚಕ್ಷುಃ ಪಶ್ಯತ್ಸರ್ವೇ ಪ್ರಾಣಾ ಅನುಪಶ್ಯನ್ತಿ। ಶ್ರೋತ್ರಂ ಶೃಣ್ವತ್ಸರ್ವೇ ಪ್ರಾಣಾ ಅನುಶೃಣ್ವನ್ತಿ। ಮನೋಧ್ಯಾಯಾತ್ಸರ್ವೇ ಪ್ರಾಣಾ ಅನುಧ್ಯಾಯನ್ತಿ। ಪ್ರಾಣಂ ಪ್ರಾಣಾನ್ತಂ ಸರ್ವೇಪ್ರಾಣಾ ಅನುಪ್ರಾಣನ್ತೀತಿ। ಏವಮುಹೈತದಿತಿಹೇಂದ್ರ ಉವಾಚ। ಅಸ್ತಿತ್ವೇವ ಪ್ರಾಣಾನಾಂನಿಃಶ್ರೇಯ ಸಮಿತಿ ॥೨॥

ಇಂದ್ರನು ಮತ್ತೆ ಹೇಳುತ್ತಾನೆ: "ನಾನು ಪ್ರಾಣನೇ ಆಗಿದ್ದೇನೆ. ನನ್ನನ್ನು ಸ್ಮಿತಪ್ರಜ್ಞನೆಂದೂ, ಆಯುರಮೃತನೆಂದೂ, ಉಪಾಸನೆಮಾಡು. ಆಯುವೇ

ಪ್ರಾಣ, ಪ್ರಾಣವೇ ಆಯು. ಏಕೆಂದರೆ ದೇಹದಲ್ಲಿ ಪ್ರಾಣವಿರುವವರೆಗೆ ಆಯಸ್ಸು ಇರುತ್ತದೆ. ಆದ್ದರಿಂದ ಪ್ರಾಣದಿಂದ ಈ ಆಮುಷ್ಮಿಕ ಲೋಕದಲ್ಲಿ ಅಮೃತತ್ವವನ್ನು ಪ್ರಜ್ಞೆ, ಸತ್ಯ, ಸಂಕಲ್ಪಗಳಿಂದ ಪಡೆಯಬಹುದಾಗಿದೆ. ಹೀಗಾಗಿ ಯಾರು ಇಂದ್ರನಾದ ನನ್ನನ್ನು ಅಮೃತನಾದ ಪ್ರಾಣನೆಂದು ಉಪಾಸನೆ ಮಾಡುವರೋ ಅವನು ಅವನ ಪೂರ್ಣಕಾಲ ಈ ಲೋಕದಲ್ಲಿ ಜೀವಿಸುತ್ತಿದ್ದು ನಂತರ ದೇವಲೋಕದಲ್ಲಿ ಅಮೃತತ್ವವನ್ನೂ, ಅವಿನಾಶತ್ವವನ್ನೂ ಪಡೆಯುತ್ತಾನೆ. ಈ ವಿಷಯದ ಮೇಲೆ ಕೆಲವರು ಪ್ರಾಣವು ಏಕತ್ವವನ್ನು ಹೊಂದುತ್ತದೆಂದು ಹೇಳುತ್ತಾರೆ. ಇಲ್ಲದಿದ್ದಲ್ಲಿ ಯಾರೂ ತಕ್ಷಣ ಒಂದು ಹೆಸರನ್ನು ವಾಕ್ಕಿನಿಂದಾಗಲೀ, ಒಂದು ಆಕಾರವನ್ನು ಕಣ್ಣಿನಿಂದಾಗಲೀ, ಒಂದು ಶಬ್ದವನ್ನು ಕಿವಿ ಇಂದಾಗಲೀ, ಒಂದು ಆಲೋಚನೆಯನ್ನು ಮನಸ್ಸಿನಿಂದಾಗಲೀ ಮಾಡುವುದಕ್ಕೆ ಸಾಧ್ಯವಿಲ್ಲ. ಆದರೆ ಪ್ರಾಣವು ಏಕತ್ವವನ್ನು ಹೊಂದಿದಲ್ಲಿ ಇವೆಲ್ಲವುಗಳನ್ನೂ ಒಂದೊಂದಾಗಿ ತಿಳಿಯಪಡಿಸಬಹುದು. ವಾಕ್ಕಿನಿಂದ ಮಾತನಾಡುವಾಗ ಎಲ್ಲ ಪ್ರಾಣಗಳೂ ಅದರ ತರುವಾಯ ವಾಚಿಸುತ್ತವೆ. ಕಣ್ಣು ಎಲ್ಲವನ್ನೂ ನೋಡುತ್ತಿರುವಾಗ ಪ್ರಾಣವು ತರುವಾಯ ನೋಡುತ್ತದೆ ; ಕಿವಿಗಳು ಕೇಳುತ್ತಿರುವಾಗ ಪ್ರಾಣವು ತರುವಾಯ ಕೇಳುತ್ತದೆ ; ಮನಸ್ಸು ಯೋಚಿಸುತ್ತಿರುವಂತೆ ಅದರ ಜೊತೆಯಲ್ಲಿ ಪ್ರಾಣವೂ ಯೋಚಿಸುತ್ತಿರುತ್ತದೆ. "ಇದು ಈ ರೀತಿ ಇರುತ್ತದೆ ಎಂದು ಪ್ರಾಣವು ಉಸಿರಾಡುತ್ತಿರುವಂತೆ ಅದರ ಜೊತೆಯಲ್ಲಿ ಇತರ ಎಲ್ಲಾ ಪ್ರಾಣಗಳೂ ಚೈತನ್ಯವಾಗಿರುತ್ತದೆ,'' ಇದು ಈ ರೀತಿ ಇರುತ್ತದೆ ಎಂದು ಇಂದ್ರನು ಹೇಳಿದನು. ಆದ್ದರಿಂದ ಪ್ರಾಣಗಳಲ್ಲಿ ನಿಃಶ್ರೇಯಸವು ಅಡಗಿರುತ್ತದೆ ಎಂದು ಹೇಳಿದನು.

ಜೀವತಿವಾಗಪೇತಃ । ಮೂಕಾರ್ಹಿ ಪಶ್ಯಾಮಃ । ಜೀವತಿಚಕ್ಷುರಪೇತಃ । ಬಧಿರಾಹ್ನಿಪಶ್ಯಾಮಃ । ಜೀವತಿಮನೋಪೇತಃ । ಬಾಲಾಹ್ನಿಪಶ್ಯಾಮಃ । ಜೀವನಿಬಾಹುಚ್ಛಿನ್ನಃ । ಜೀವತಿ ಊರುಚ್ಛಿನ್ನ ಇತಿ । ಏವಹಿಪಶ್ಯಾಮ ಇತಿ । ಅಥಖಲು ಪ್ರಾಣಏವ ಪ್ರಜ್ಞಾತ್ಮೇದಂ ಶರೀರಂ ಪರಿಗೃಹ್ಯೋತ್ಥಾಪಯತಿ । ತಸ್ಮಾದೇತದೇವೋಕ್ಥ ಮುಪಾಸೀತ್ । ಯೋವೈಪ್ರಾಣಃ ಸಾಪ್ರಜ್ಞಾ । ಯಾವಾ ಪ್ರಜ್ಞಾಸ ಪ್ರಾಣಃ । ಸಹಹ್ಯೇತಾ ವಸ್ಮಿಂಶರೀರೇ ವಸತಃ । ಮಹೋತ್ಕ್ರಾಮತಃ । ತಸ್ಯೈಷೈವದೃಷ್ಟಿಃ । ಏತದ್ವಿಜ್ಞಾನಂ । ಯತ್ರೈತತ್ಪುರುಷಃ ಸುಪ್ತಸ್ವಪ್ನಂ ನಕಂಚನಪಶ್ಯತಿ । ಅಥಾಸ್ಮಿನ್ಪ್ರಾಣ ಏವೈಕಥಾ ಭವತಿ । ತದೈನಂ ವಾಕ್ಸರ್ವೈರ್ ನಾರ್ಮಭಿಃ ಸಹಾಪ್ಯೇತಿ । ಚಕ್ಷುಃ ಸರ್ವೇರ್ ರೂಪೈಃ ಸಹಾಪ್ಯೇತಿ । ಶ್ರೋತ್ರಂ ಸರ್ವೈಃ ಶಬ್ದೈಃ ಸಹಾಪ್ಯೇತಿ । ಮನ

ಸರ್ವೈರ್ಥಾನ್ಯೈಃ ಸಮಾಪ್ಯೇತಿ। ಸಯದಾಪ್ರತಿಬುಧ್ಯತೇ। ಯಥಾಗ್ನೇರ್ಜ್ವಲತಃ ಸರ್ವಾದಿಶೋ ವಿಸ್ಫುಲಿಂಗಾ ವಿಪ್ರತಿಷ್ಠೇರನ್ನೇವ ಮೇವೈತಸ್ಮಾದಾತ್ಮನಃ ಪ್ರಾಣಾ ಯಥಾಯತನಂ ವಿಪ್ರತಿಷ್ಠನ್ತೇ ಪ್ರಾಣೇಭ್ಯೋದೇವಾಃ। ದೇವೇಭ್ಯೋಲೋಕಾಃ। ತಸ್ಯೈಷೈವಸಿದ್ಧಿಃ। ಏತದ್ವಿಜ್ಞಾನಂ। ಯತ್ರೈತತ್ಪುರುಷ ಆರ್ತೋರ್ಮರಿಷ್ಯಾನ್ನಾಬಾಲ್ಯಂ ನ್ಯೇತ್ಯಸಮ್ಮೋಹಂನ್ಯೇತಿ। ತದಾಹುಃ- ಉದಕ್ರಮೀಚ್ಛಿತ್ತಂ। ನಶೃಣೋತಿ। ನಪಶ್ಯತಿ। ನವಾಚಾವದತಿ। ನಧ್ಯಾಯತಿ (ಇತಿ) ಅಥಾಸ್ಮಿನ್ ಪ್ರಾಣ ಏಕೈಕಧಾಭವತಿ। ತದೈನಂ ವಾಕ್ ಸರ್ವೈರ್ನಾಮಭಿಃ ಸಹಾಪ್ಯೇತಿ। ಚಕ್ಷುಃ ಸರ್ವೈಃ ರೂಪೈಃ ಸಹಾಪ್ಯೇತಿ। ಶ್ರೋತ್ರಂ ಸರ್ವೈಃ ಶಬ್ದೈಃ ಸಹಾಪ್ಯೇತಿ। ಮನಃ ಸರ್ವೈಃ ಧ್ಯಾನೈಃಸಹಾಪ್ಯೇತಿ। ಸಯದಾಽಸ್ಮಾಚ್ಛರೀರಾದುತ್ಕ್ರಾಮತಿ। ಸಹೈವೈತೈಃ ಸರ್ವೈರುತ್ಕ್ರಾಮತಿ। ಸಯದಾಪ್ರತಿಬುದ್ಧ್ಯತೇ। ಯಥಾಽಗ್ನೇರ್ಜ್ವಲತೋ ವಿಸ್ಫುಲಿಂಗಾ। ವಿಪ್ರತಿಷ್ಠೇರನ್ನೇವ ಮೇವೈತಸ್ಮಾದಾತ್ಮನಃ। ಪ್ರಾಣಾಯಥಾಯತನಂ ವಿಪ್ರತಿಷ್ಠನ್ತೇ। ಪ್ರಾಣೇಭ್ಯೋದೇವಾಃ। ದೇವೇಭ್ಯೋಲೋಕಾಃ ||೩||

ನಾವು ಮೂಗರನ್ನು ಕಂಡಾಗ ವಾಕ್ಕಿನಿಂದ ವಂಚಿತರಾಗಿರುವುದನ್ನು ಅರಿಯುತ್ತೇವೆ; ಕಿವುಡರನ್ನು ಕಂಡಾಗ ಶ್ರೋತ್ರವಿನಿಂದ ವಂಚಿತರಾಗಿರುವುದನ್ನು ಅರಿಯುತ್ತೇವೆ; ಹುಚ್ಚರನ್ನು ಕಂಡಾಗ ಮನಸ್ಸಿನಿಂದ ವಂಚಿತರಾಗಿರುವುದನ್ನು ಕಾಣುತ್ತೇವೆ. ಕುಂಟರನ್ನು ಕಂಡಾಗ ಕಾಲುಗಳಿಂದ ವಂಚಿತರಾಗಿರುವುದನ್ನು ಕಾಣುತ್ತೇವೆ; ಇವು ನಮಗೆ ಗೋಚರಿಸುತ್ತಿವೆ. ಆದರೆ ಅದನ್ನು ಪ್ರಾಣನು ತನ್ನ ಪ್ರಜ್ಞಾವಿಶೇಷದಿಂದ ಈ ದೇಹದ ಅಧಿಕಾರವನ್ನು ಸ್ವಾಧೀನಪಡಿಸಿಕೊಂಡು ಎಚ್ಚರಿಸುತ್ತಿರುತ್ತದೆ. ಆದ್ದರಿಂದ ಈ ದೇವನನ್ನು ಉಕ್ಥನೆಂದು ಉಪಾಸನೆಮಾಡಬೇಕು. ಇವೆಲ್ಲವೂ ಪ್ರಾಣದ ಪ್ರಜ್ಞೆಯಿಂದ ಆಗಿರುತ್ತಿರುವುದೆಂದು ಹೇಳಲಾಗುತ್ತಿದೆ. ಅಂದಮೇಲೆ ಪ್ರಾಣವು ಯಾವುದು? ಅದೊಂದು ಪ್ರಜ್ಞಾತ್ಮ ಪ್ರಜ್ಞಾತ್ಮ ಎಂದರೇನು? ಅದೇ ಪ್ರಾಣ. ಇದೇ ತಿಳುವಳಿಕೆ. ಇದೇ ಅವರ ವಿಜ್ಞಾನ. ಒಬ್ಬ ಮನುಷ್ಯನು ನಿದ್ರೆಮಾಡುತ್ತಿದ್ದು ಯಾವ ಕನಸುಗಳನ್ನೂ ಕಾಣದಿರುವ ಸ್ಥಿತಿಯಲ್ಲಿದ್ದಾಗ ಅವನು ಪ್ರಾಣದಲ್ಲಿ ಐಕ್ಯನಾಗಿರುತ್ತಾನೆ. ಆಗ ವಾಕ್ಕು ತನ್ನ ಸರ್ವ ನಾಮಗಳಿಂದ ಅವನಲ್ಲಿಗೆ ಹೋಗುತ್ತದೆ; ಕಣ್ಣು ಅದರ ಸರ್ವ ಆಕಾರಗಳೊಡನೆ ಅವನ ಬಳಿಗೆ ಹೋಗುತ್ತದೆ; ಕಿವಿಯೂ ಅದರ ಎಲ್ಲಾ ಶಬ್ದಗಳೊಂದಿಗೆ ಅವನ ಬಳಿಗೆ ಹೋಗುತ್ತದೆ. ಬುದ್ಧಿಯು ಅದರ ಎಲ್ಲಾ ಆಲೋಚನೆಗಳೊಂದಿಗೆ ಅವನ ಬಳಿಗೆಹೋಗುತ್ತದೆ; ಆದರೆ ಅವನು ಎಚ್ಚರವಾದಾಗ ಹೇಗೆ ಜ್ವಲಿಸುತ್ತಿರುವ ಅಗ್ನಿಯಿಂದ ಪ್ರಭೆಗಳು ಎಲ್ಲ ಕಡೆಗೂ ಹರಡುತ್ತದೆಯೋ

ಹಾಗೆ ಈ ಆತ್ಮದಿಂದಲೂ ಹೊರಡುತ್ತದೆ; ಪ್ರಾಣವು ತನ್ನ ಯಥಾಸ್ಥಾನವನ್ನು ಸೇರುತ್ತದೆ. ಪ್ರಾಣವೇ ದೇವರು, ದೇವರೇ ಲೋಕವು. ಇವುಗಳಿಂದಲೇ ಸಿದ್ಧಿ, ಇದೇ ವಿಜ್ಞಾನ; ಯಾವಾಗ ಆ ಪುರುಷನು ಆರ್ತನೂ, ಬಾಲ್ಯಾವಸ್ಥೆಯವನೂ, ಆಗಿದ್ದಾಗ ಸಮ್ಮೋಹದಿಂದಿರುತ್ತಾನೆ. ಆಗ ಅವನು ಚಂಚಲ ಸ್ವಭಾವದವನಾಗಿಯೂ ಇರುತ್ತಾನೆ. ಕೇಳುವುದಿಲ್ಲ, ಕಾಣುವುದಿಲ್ಲ, ಮಾತನಾಡುವುದಿಲ್ಲ, ಧ್ಯಾನಮಾಡುವುದಿಲ್ಲ. ಅವನ ಪ್ರಾಣವು ಹೋಗುವ ಸ್ಥಿತಿಯಲ್ಲಿ ಪ್ರಜ್ಞಾಹೀನ ಸ್ಥಿತಿಯಲ್ಲಿರುವಾಗ ಇತರರು "ಅವನ ಬುದ್ಧಿಯು ಹೊರಟುಹೋಗಿದೆ; ಅವನಿಗೆ ಕೇಳಿಸುತ್ತಿಲ್ಲ; ಅವನಿಗೆ ಕಾಣುತ್ತಿಲ್ಲ; ಅವನು ಮಾತನಾಡುತ್ತಿಲ್ಲ; ಅವನು ಯೋಚಿಸುತ್ತಿಲ್ಲ; ಅವನು ಪ್ರಾಣದಲ್ಲಿ ಐಕ್ಯಹೊಂದಿದ್ದಾನೆ ಎಂದು ಹೇಳುತ್ತಾರೆ. ತರುವಾಯ ವಾಕ್ಕು ಅದರ ಸರ್ವನಾಮಗಳೊಡನೆ ಹೊರಟುಹೋಗುತ್ತದೆ; ಕಣ್ಣು ತನ್ನ ಸರ್ವರೂಪಗಳೊಡನೆ ಹೊರಟು ಹೋಗುತ್ತದೆ; ಕಿವಿಯು ತನ್ನ ಸರ್ವ ಶಬ್ದಗಳೊಡನೆ ಹೊರಟು ಹೋಗುತ್ತದೆ, ಮನಸ್ಸು ತನ್ನ ಸರ್ವ ಧ್ಯಾನಗಳೊಂದಿಗೆ ಹೊರಟು ಹೋಗುತ್ತದೆ. ಇವೆಲ್ಲವೂ ಶರೀರದೊಂದಿಗೆ ಉತ್ಕ್ರಾಂತಿಯನ್ನು ಹೊಂದುತ್ತವೆ. ದೇಹದಲ್ಲಿ ಅಗ್ನಿಯಂತೆ ಜ್ವಲಿಸುತ್ತಿದ್ದ ಮತ್ತು ಹೊಳೆಯುತ್ತಿರುವ ಜ್ಯೋತಿಯಂತಿದ್ದ ಆತ್ಮನೂ ದೇಹದ ಪತನದೊಂದಿಗೆ ಮಾಯವಾಗುತ್ತದೆ. ಆದ್ದರಿಂದ ಪ್ರಾಣವೇ ದೇವರು. ದೇವರೇ ಲೋಕವು.

ವಾಗಸ್ಮಾತ್ ಸರ್ವಾಣಿ ನಾಮಾನ್ಯಭಿವಿಸೃಜತೇ । ವಾಚಾ ಸರ್ವಾಣಿ ನಾಮಾನ್ಯಾಪ್ನೋತಿ । ಪ್ರಾಣೋಽಸ್ಮಾತ್ ಸರ್ವಾನ್ ಗಂಧಾನ್ ಅಭಿವಿಸೃಜತೇ । ಪ್ರಾಣೇನ ಸರ್ವಾನ್ ಗಂಧಾನ್ ಆಪ್ನೋತಿ । ಚಕ್ಷುರಸ್ಮಾತ್ಸರ್ವಾಣಿ ರೂಪಾಣ್ಯಭಿವಿಸೃಜತೇ । ಚಕ್ಷುಷಾ ಸರ್ವಾಣಿ ರೂಪಾಣ್ಯಾಪ್ನೋತಿ । ಶ್ರೋತ್ರಮಸ್ಮಾತ್ಸರ್ವಾನ್‌ಶಬ್ದಾನ್ ಅಭಿವಿಸೃಜತೇ । ಶ್ರೋತ್ರೇಣ ಸರ್ವಾನ್ಶಬ್ದಾನ್ ಆಪ್ನೋತಿ। ಮನೋಽಸ್ಮಾತ್ ಸರ್ವಾಣಿಧ್ಯಾನಾನ್ಯಭಿವಿಸೃಜತೇ । ಮನಸಾಸರ್ವಾಣಿಧ್ಯಾನಾನ್ಯಾಪ್ನೋತಿ । ಸೈಷಾಪ್ರಾಣೇ ಸರ್ವಾಪ್ತಿಃ । ಯೋವೈಪ್ರಾಣಃ ಸಾಪ್ರಜ್ಞಾ । ಯಾವಾಪ್ರಜ್ಞಾಸಪ್ರಾಣಃ । ಸಹಹ್ಯೇತಾವಸ್ಮಿನ್ಶರೀರೇ ವಸತಃ। ಸಹೋತ್ಕ್ರಾಮತಃ । ಅಥಖಲುಯಥಾಽಸ್ಯೈಪ್ರಜ್ಞಾಯೈಸರ್ವಾಣಿಭೂತಾನ್ಯೇಕಂಭವನ್ತಿ ತದ್ವ್ಯಾಖ್ಯಾಸ್ಯಾಮಃ ॥೪॥

ಎಲ್ಲ ಹೆಸರುಗಳಲ್ಲಿ ಮಿಳಿತನಾದ ಪ್ರಾಣನನ್ನು ವಾಕ್ಕು ಅವನಿಗಾಗಿ ಬಿಟ್ಟುಕೊಡುತ್ತದೆ. ವಾಕ್ಕಿನಿಂದ ಅವನು ಎಲ್ಲಾ ಹೆಸರುಗಳನ್ನೂ ಪಡೆಯುತ್ತಾನೆ. ಪ್ರಾಣವು

ಅವನಿಗೆ ಎಲ್ಲ ಗಂಧಗಳನ್ನೂ ಬಿಟ್ಟುಕೊಡುತ್ತದೆ. ಪ್ರಾಣದಿಂದ ಅವನು ಎಲ್ಲ ಗಂಧಗಳನ್ನೂ ಪಡೆಯುತ್ತಾನೆ, ಕಣ್ಣು ಅವನಿಗೆ ಎಲ್ಲ ರೂಪಗಳನ್ನೂ ಬಿಟ್ಟುಕೊಡುತ್ತದೆ. ಕಣ್ಣಿನಿಂದ ಅವನು ಎಲ್ಲಾ ರೂಪಗಳನ್ನೂ ಪಡೆಯುತ್ತಾನೆ. ಕಿವಿಯು ಅವನಿಗೆ ಎಲ್ಲಾ ಶಬ್ದಗಳನ್ನೂ ಬಿಟ್ಟುಕೊಡುತ್ತದೆ. ಕಿವಿಯಿಂದ ಅವನು ಎಲ್ಲ ಶಬ್ದಗಳನ್ನೂ ಕೇಳುತ್ತಾನೆ. ಮನಸ್ಸು ಅವನಿಗೆ ಎಲ್ಲ ಧ್ಯಾನಗಳನ್ನೂ ಬಿಟ್ಟುಕೊಡುತ್ತದೆ. ಮನಸ್ಸಿನಿಂದ ಅವನು ಎಲ್ಲ ಧ್ಯಾನಗಳನ್ನೂ ಪಡೆಯುತ್ತಾನೆ. ಆದ್ದರಿಂದ ಪ್ರಾಣವು ಸರ್ವವ್ಯಾಪ್ತಿಯುಳ್ಳದ್ದು. ಅದೇ ಪ್ರಾಣವು ಪ್ರಜ್ಞೆಯೂ ಆಗಿದೆ. ಪ್ರಾಣವು ಪ್ರಜ್ಞೆಯೇ. ಅವೆರಡೂ ಒಟ್ಟಿಗೆ ದೇಹದಲ್ಲಿ ವಾಸಿಸುತ್ತಿದ್ದು ಎರಡೂ ಒಟ್ಟಿಗೆ ಹೊರಡುತ್ತದೆ. ಈಗ ನಾವು ಹೇಗೆ ಪ್ರಜ್ಞೆಯು ಎಲ್ಲ ಭೂತಗಳಲ್ಲಿ ಏಕೀಭವಿಸಿ ಇರುತ್ತದೆ ಎಂಬುದನ್ನು ವಿವರಿಸೋಣ.

ವಾಗೇವಾಸ್ಯಾಏಕಮಂಗೂಗ ಮುದೂಳ್ಹಂ । ತಸ್ಯೈನಾಮಪರಸ್ತಾತ್ ಪ್ರತಿವಿಹಿತಾಭೂತಮಾತ್ರಾ । ಪ್ರಾಣಾಏವಾಸ್ಯಏಕಮಂಗೂಗಮುದೂಳ್ಹಂ । ತಸ್ಯ ಗಂಧಾಃಪರಸ್ತಾತ್ ಪ್ರತಿವಿಹಿತಾಭೂತಮಾತ್ರಾ । ಚಕ್ಷುರೇವಸ್ಯ ಏಕಮಂಗೂಗಮುದೂಳ್ಹಂ । ತಸ್ಯರೂಪಂಪರಸ್ತಾತ್ ಪ್ರತಿವಿಹಿತಾಭೂತಮಾತ್ರಾ । ಶ್ರೋತ್ರಮೇವಾಸ್ಯಏಕಮಂಗೂಗಮುದೂಳ್ಹಂ । ತಸ್ಯಶಬ್ದಃ ಪರಸ್ತಾತ್ ಪ್ರತಿವಿಹಿತಾಭೂತಮಾತ್ರಾ । ಜಿಹ್ವೈವಾಸ್ಯಾ ಏಕಮಂಗೂಗಮುದೂಳ್ಹಂ । ತಸ್ಯಾಅನ್ನರಸಃ ಪರಸ್ತಾತ್ ಪ್ರತಿವಿಹಿತಾ ಭೂತಮಾತ್ರಾ । ಹಸ್ತಾವೇವಾಸ್ಯಾ ಏಕಮಂಗೂಗಮುದೂಳ್ಹಂ । ತಯೋಃ ಕರ್ಮಪರಸ್ತಾತ್ ಪ್ರತಿವಿಹಿತಾಭೂತಮಾತ್ರಾ । ಶರೀರಮೇವಾಸ್ಯಾಏಕಮಂಗೂಗಮುದೂಳ್ಹಂ । ತಸ್ಯಸುಖದುಃಖೇ ಪರಸ್ತಾತ್ ಪ್ರತಿವಿಹಿತಾಭೂತಮಾತ್ರಾ । ಉಪಸ್ಥಏವಾಸ್ಯಾಏಕಮಂಗೂಗಮುದೂಳ್ಹಂ । ತಸ್ಯಾನಂದೋರತಿಃ ಪ್ರಜಾತಿಃ ಪರಸ್ತಾತ್ ಪ್ರತಿವಿಹಿತಾಭೂತಮಾತ್ರಾ । ಪಾದಾವೇವಾಸ್ಯಾಏಕಮಂಗೂಗಮುದೂಳ್ಹಂ । ತಯೋರಿತ್ಯಾಃ ಪರಸ್ತಾತ್ ಪ್ರತಿವಿಹಿತಾಭೂತಮಾತ್ರಾ । ಪ್ರಜ್ಞೈವಾಸ್ಯಾಏಕಮಂಗೂಗಮುದೂಳ್ಹಂ । ತಸ್ಯೈಧಿಯೋವಿಜ್ಞಾತವ್ಯಾಂಕಾಮಾಃಪರಸ್ತಾತ್ ಪ್ರತಿ ವಿಹಿತಾ ಭೂತಮಾತ್ರಾ ॥೫॥

ಅವರಿಂದ ವಾಕ್ಕನ್ನು ಒಂದು ಭಾಗವಾಗಿ ತೆಗೆಯಲ್ಪಟ್ಟಿರೆ. ಹೆಸರು ಅದರ ಗುಣದಲ್ಲಿ ಸಂಬಂಧಿಸಿದ ಮುಖ್ಯವಾದ ಇನ್ನೊಂದು ಭಾಗ. ಪ್ರಾಣವನ್ನು ಅದರಿಂದ ಒಂದು ಭಾಗವಾಗಿ ತೆಗೆದರೆ ಗಂಧವು ಅದರ ಗುಣದಲ್ಲಿ ಸಂಬಂಧಿಸಿದ ಮುಖ್ಯವಾದ

ಇನ್ನೊಂದು ಭಾಗ. ಕಣ್ಣನ್ನು ಅದರಿಂದ ಒಂದು ಭಾಗವಾಗಿ ತೆಗೆಯಲ್ಪಟ್ಟರೆ ರೂಪವು ಅದರ ಗುಣದಲ್ಲಿ ಸಂಬಂಧಿಸಿದ ಮುಖ್ಯವಾದ ಒಂದು ಭಾಗ. ಕಿವಿಯನ್ನು ಅದರಿಂದ ಒಂದು ಭಾಗವಾಗಿ ತೆಗೆಯಲ್ಪಟ್ಟರೆ ಶಬ್ದವು ಅದರ ಗುಣದಲ್ಲಿ ಸಂಬಂಧಿಸಿದ ಮುಖ್ಯವಾದ ಇನ್ನೊಂದು ಭಾಗ. ನಾಲಿಗೆಯನ್ನು ಅದರಿಂದ ಒಂದು ಭಾಗವಾಗಿ ತೆಗೆಯಲ್ಪಟ್ಟರೆ ಅನ್ನರಸವು ಅದರ ಗುಣದಲ್ಲಿ ಸಂಬಂಧಿಸಿದ ಮುಖ್ಯವಾದ ಇನ್ನೊಂದು ಭಾಗ, ಕೈಗಳನ್ನು ಅದರಿಂದ ಒಂದು ಭಾಗವಾಗಿ ತೆಗೆಯಲ್ಪಟ್ಟರೆ ಕರ್ಮವು ಅದರ ಗುಣದಲ್ಲಿ ಸಂಬಂಧಿಸಿದ ಮುಖ್ಯವಾದ ಇನ್ನೊಂದು ಭಾಗ. ಶರೀರವನ್ನು ಅದರಿಂದ ಒಂದು ಭಾಗವಾಗಿ ತೆಗೆಯಲ್ಪಟ್ಟರೆ ಸುಖ ದುಃಖಗಳು ಅದರ ಗುಣದಲ್ಲಿ ಸಂಬಂಧಿಸಿದ ಮುಖ್ಯವಾದ ಇನ್ನೊಂದು ಭಾಗ. ಜನನೇಂದ್ರಿಯಗಳನ್ನು ಅದರಿಂದ ಒಂದು ಭಾಗವಾಗಿ ತೆಗೆಯಲ್ಪಟ್ಟರೆ ಆನಂದ, ರತಿ, ಪ್ರಜಾತಿಗಳು ಅದರ ಗುಣದಲ್ಲಿ ಸಂಬಂಧಿಸಿದ ಮುಖ್ಯವಾದ ಇನ್ನೊಂದು ಭಾಗ. ಪಾದಗಳನ್ನು ಅದರಿಂದ ಒಂದು ಭಾಗವಾಗಿ ತೆಗೆಯಲ್ಪಟ್ಟರೆ ಚಲನೆಗಳು ಅದರ ಗುಣದಲ್ಲಿ ಸಂಬಂಧಿಸಿದ ಮುಖ್ಯವಾದ ಇನ್ನೊಂದು ಭಾಗ. ಪ್ರಜ್ಞೆಯನ್ನು ಅದರಿಂದ ಒಂದು ಭಾಗವಾಗಿ ತೆಗೆಯಲ್ಪಟ್ಟರೆ ಯೋಚನೆ, ಕಾಮ, ಮತ್ತು ವಿಜ್ಞಾನಗಳು ಅದರ ಗುಣದಲ್ಲಿ ಸಂಬಂಧಿಸಿದ ಮುಖ್ಯವಾದ ಇನ್ನೊಂದು ಭಾಗ.

ಪ್ರಜ್ಞಾ ಯವಾಚಂಸಮಾರುಹ್ಯವಾಚಾಸರ್ವಾಣಿನಾಮಾನ್ಯಾಪ್ನೋತಿ। ಪ್ರಜ್ಞಾಯ-ಪ್ರಾಣಂಸಮಾರುಹ್ಯ । ಪ್ರಾಣೇನಸರ್ವಾನ್ ಗಂಧಾನಾಪ್ನೋತಿ । ಪ್ರಜ್ಞಯಾಚಕ್ಷುಃ ಸಮಾರುಹ್ಯಚಕ್ಷುಷಾಸರ್ವಾಣಿರೂಪಾಣ್ಯಾಪ್ನೋತಿ । ಪ್ರಜ್ಞಯಾಶ್ರೋತ್ರಂಸಮಾರುಹ್ಯ । ಶ್ರೋತ್ರೇಣಸರ್ವಾನ್ಶಬ್ದಾನ್ ಆಪ್ನೋತಿ । ಪ್ರಜ್ಞಯಾಜಿಹ್ವಾಂಸಮಾರುಹ್ಯಜಿಹ್ವಯಾ ಸರ್ವಾನನ್ನರಸಂ ಆಪ್ನೋತಿ । ಪ್ರಜ್ಞಯಾಹಸ್ತೌಸಮಾರುಹ್ಯಹಸ್ತಾಭ್ಯಾಂ ಸರ್ವಾಣಿ ಕರ್ಮಾಣ್ಯಾಪ್ನೋತಿ । ಪ್ರಜ್ಞಯಾಶರೀರಂ ಸಮಾರುಹ್ಯಶರೀರೇಣಸುಖದುಃಖೇಆಪ್ನೋತಿ । ಪ್ರಜ್ಞಯೋಪಸ್ಥಂಸಮಾರುಹ್ಯಉಪಸ್ಥೇನಾಽಽನಂದಂರತಿಂಪ್ರಜಾತಿಮಾಪ್ನೋತಿ । ಪ್ರಜ್ಞಯಾಪಾದೌಸಮಾರುಹ್ಯಪಾದಾಭ್ಯಾಂಸರ್ವಾಇತ್ಯಾಪ್ನೋತಿ । ಪ್ರಜ್ಞಯೈವಧಿಯಂಸಮಾರುಹ್ಯ ಪ್ರಜ್ಞಯೈವಧಿಯೋ ವಿಜ್ಞಾತವ್ಯಂ ಕಾಮಾನಾಪ್ನೋತಿ ||೬||

ಪ್ರಜ್ಞೆಯಿಂದ ವಾಕ್ಕನ್ನು ಸ್ವಾಧೀನಪಡಿಸಿಕೊಂಡರೆ ವಾಕ್ಕಿನಿಂದ ಎಲ್ಲಾ ಹೆಸರುಗಳನ್ನೂ ಪಡೆಯುತ್ತಾನೆ.ಪ್ರಜ್ಞೆ ಇಂದ ಪ್ರಾಣನನ್ನು ಸ್ವಾಧೀನಪಡಿಸಿಕೊಂಡರೆ ಪ್ರಾಣ

ದಿಂದ ಸರ್ವಗಂಧಗಳನ್ನೂ ಗ್ರಹಿಸುತ್ತಾನೆ. ಪ್ರಜ್ಞೆಯಿಂದ ಕಣ್ಣುಗಳನ್ನು ಸಮರ್ಥಿಸಿಕೊಂಡರೆ ಕಣ್ಣುಗಳಿಂದ ಎಲ್ಲ ರೂಪಗಳನ್ನೂ ಕಾಣಬಲ್ಲವನಾಗುತ್ತಾನೆ. ಪ್ರಜ್ಞೆಯಿಂದ ಕಿವಿಗಳನ್ನು ಸಮರ್ಥಿಸಿಕೊಂಡರೆ ಕಿವಿಗಳಿಂದ ಎಲ್ಲ ಶಬ್ದಗಳೂ ಕೇಳಬರುತ್ತವೆ. ಪ್ರಜ್ಞೆಯಿಂದ ನಾಲಗೆಯನ್ನು ಸಮರ್ಥಿಸಿಕೊಂಡರೆ ನಾಲಿಗೆಯಿಂದ ಎಲ್ಲ ಅನ್ನರಸವೂ ಗ್ರಹಣವಾಗುತ್ತದೆ. ಪ್ರಜ್ಞೆಯಿಂದ ಕೈಗಳನ್ನು ಸಮರ್ಥಿಸಿಕೊಂಡರೆ ಕೈಗಳಿಂದ ಸರ್ವ ಕರ್ಮಗಳೂ ಜರುಗುತ್ತವೆ. ಪ್ರಜ್ಞೆಯಿಂದ ಶರೀರವನ್ನು ಸಮರ್ಥಿಸಿಕೊಂಡರೆ ಶರೀರದಿಂದ ಎಲ್ಲಾ ಸುಖದುಃಖಗಳೂ ಉಂಟಾಗುತ್ತವೆ. ಪ್ರಜ್ಞೆಯಿಂದ ಜನನೇಂದ್ರಿಯಗಳನ್ನು ಸಮರ್ಥಿಸಿಕೊಂಡರೆ ಜನನೇಂದ್ರಿಯಗಳಿಂದ ಆನಂದ, ರತಿ ಪ್ರಜಾತಿಗಳು ಉಂಟಾಗುತ್ತವೆ. ಪ್ರಜ್ಞೆಯಿಂದ ಪಾದಗಳನ್ನು ಸಮರ್ಥಿಸಿಕೊಂಡರೆ ಪಾದಗಳಿಂದ ಸರ್ವ ನಡಿಗೆಗಳೂ ಆಗುತ್ತವೆ. ಪ್ರಜ್ಞೆಯಿಂದ ಬುದ್ಧಿಯನ್ನು ಸಮರ್ಥಿಸಿಕೊಂಡರೆ ಬುದ್ಧಿಯಿಂದ ವಿಜ್ಞಾನವನ್ನು ಪಡೆಯುತ್ತಾನೆ.

ನಹಿಪ್ರಜ್ಞಾಪೇತಾವಾಂಗ್ನಾಮಕಿಂಚನ ಪ್ರಜ್ಞಾಪಯೇತ್ । ಅನ್ಯತ್ರಮೇಮನೋಽಭೂದಿತ್ಯಾಹ । ನಾಹಮೇತನ್ನಾಮ ಪ್ರಾಜ್ಞಾಸಿಷಮಿತಿ । ನಪ್ರಜ್ಞಾಪೇತಃ ಪ್ರಾಣೋಗಂಧಃ ಕಂಚನಪ್ರಜ್ಞಾಪಯೇತ್ । ಅನ್ಯತ್ರಮೇಮನೋಽಭೂದಿತ್ಯಾಹ । ನಾಹಮೇತಂಗಂಧಂಪ್ರಜ್ಞಾಸಿಷಮಿತಿ । ನಹಿಪ್ರಜ್ಞಾಪೇತಂ । ಚಕ್ಷೂರೂಪಂಕಿಂಚನ ಪ್ರಜ್ಞಾಪೇತಂ । ಅನ್ಯತ್ರಮೇಮನೋಽಭೂದಿತ್ಯಾಹ । ನಾಹಮೇತದ್ರೂಪಂಪ್ರಜ್ಞಾಸಿಷಮಿತಿ । ನಹಿಪ್ರಜ್ಞಾಪೇತಂ ಶ್ರೋತ್ರಂ ಶಬ್ದಂ ಕಂಚನಪ್ರಜ್ಞಾಪಯೇತ್ । ಅನ್ಯತ್ರಮೇ ಮನೋಽಭೂದಿತ್ಯಾಹ । ನಾಹಮೇತಂಶಬ್ದಂ ಪ್ರಾಜ್ಞಾಸಿಷಮಿತಿ । ನಹಿಪ್ರಜ್ಞಾಪೇತಾ ಜಿಹ್ವಾಽನ್ನರಸಂ ಕಂಚನ ಪ್ರಜ್ಞಾಪಯೇತ್ । ಅನ್ಯತ್ರಮೇ ಮನೋಽಭೂದಿತ್ಯಾಹ । ನಾಹಮೇತಮನ್ನರಸಂ ಪ್ರಾಜ್ಞಾಸಿಷಮಿತಿ । ನಹಿಪ್ರಜ್ಞಾಪೇತೌಹಸ್ತೌಕರ್ಮಕಿಂಚನಪ್ರಜ್ಞಾಪೇತಾಂ । ಅನ್ಯತ್ರಮೇಮನೋಽಭೂದಿತ್ಯಾಹ । ನಾಹಮೇತತ್ಕರ್ಮಪ್ರಾಜ್ಞಾಸಿಷಮಿತಿ । ನಹಿಪ್ರಜ್ಞಾಪೇತಂ ಶರೀರಂಸುಖದುಃಖಂಕಿಂಚನಪ್ರಜ್ಞಾಪಯೇತ್ । ಅನ್ಯತ್ರಮೇಮನೋಽಭೂಧಿತ್ಯಾಹ । ನಾಹಮೇತಂ ಸುಖಂದುಃಖಂ ಪ್ರಾಜ್ಞಾಸಿಷಮಿತಿ । ನಹಿಪ್ರಜ್ಞಾಪೇತಂ ಉಪಸ್ಥಂ ಆನಂದಂ ರತಿಂ ಪ್ರಜಾತಿಂ ಕಂಚನಪ್ರಜ್ಞಾಪಯೇತ್ । ಅನ್ಯತ್ರಮೇಮನೋಽಭೂದಿತ್ಯಾಹ । ನಾಹಮೇತಮಾನಂದಂ ರತಿಂ ಪ್ರಜಾತಿಂ ಪ್ರಾಜ್ಞಾಸಿಷಮಿತಿ । ನಹಿಪ್ರಜ್ಞಾಪೇತೌಪಾದಾ

ವಿತ್ಯಾಂ ಕಿಂಚನಪ್ರಜ್ಞಾಪಪಿತಾಂ | ಅನ್ಯತ್ರಮೇಮನೋಽಭೂದಿತ್ಯಾಹ | ನಹಮೇತಾಮಿತ್ಯಾಂ ಪ್ರಾಜ್ಞಾಸಿಷಮಿತಿ | ನಹಿಪ್ರಜ್ಞಾಪೇತಾಧೀಃ ಕಾಂಚನ ಸಿದ್ಧ್ಯೇತ್ | ನಹಿಪ್ರಜ್ಞಾತವ್ಯಂ ಪ್ರಜ್ಞಾಏತ ||೭||

ಪ್ರಜ್ಞೆಯು ಇಲ್ಲದಿದ್ದಲ್ಲಿ ವಾಕ್ಕು ಪ್ರಾಣನಿಗೆ ಯಾವ ಹೆಸರನ್ನೂ ತಿಳಿಸಲಾರದು. ಏನಾದರಾಗಲೀ "ನನ್ನ ಮನಸ್ಸು ಎಲ್ಲಿಯೋ ಇತ್ತು, ನಾನು ಆ ಹೆಸರಿನ ಇರುವಿಕೆ ಯನ್ನೇ ಅರಿಯಲಾಗಲಿಲ್ಲ" ಎನ್ನುತ್ತಾನೆ. ಹಾಗೆಯೇ ಪ್ರಜ್ಞೆಯು ಇಲ್ಲದಿದ್ದಲ್ಲಿ ಪ್ರಾಣವು ಯಾವ ಗಂಧವನ್ನೂ ತಿಳಿಸಲಾರದು "ನನ್ನ ಮನಸ್ಸು ಎಲ್ಲಿಯೋ ಇತ್ತು, ಆದ್ದರಿಂದ ನಾನು ಆ ಗಂಧದ ಇರುವಿಕೆಯನ್ನೇ ಅರಿಯಲಾಗಲಿಲ್ಲ" ಎನ್ನುತ್ತಾನೆ. ಪ್ರಜ್ಞೆ ಇಲ್ಲದಿದ್ದಲ್ಲಿ ಕಣ್ಣು ಯಾವ ರೂಪವನ್ನೂ ಕಾಣಿಸುತ್ತಿರಲಿಲ್ಲ "ನನ್ನ ಮನಸ್ಸು ಎಲ್ಲಿಯೋ ಇತ್ತು ಆದ್ದರಿಂದ ನಾನು ಆ ರೂಪವನ್ನು ಗಮನಿಸಲಿಲ್ಲ" ಎನ್ನುತ್ತಾನೆ. ಪ್ರಜ್ಞೆ ಇಲ್ಲದಿದ್ದಲ್ಲಿ ಕಿವಿಯು ಯಾವ ಶಬ್ದವನ್ನೂ ಕೇಳಿಸುತ್ತಿರಲಿಲ್ಲ "ನನ್ನ ಮನಸ್ಸು ಎಲ್ಲಿಯೋ ಇದ್ದಿತು, ನಾನು ಶಬ್ದದ ಇರುವಿಕೆಯನ್ನೇ ಗಮನಿಸಲಿಲ್ಲ" ಎನ್ನುತ್ತಾನೆ. ಪ್ರಜ್ಞೆಯು ಇಲ್ಲದಿದ್ದಲ್ಲಿ ಜಿಹ್ವೆಯು ಅನ್ನರಸದ ಇರುವಿಕೆಯನ್ನು ತಿಳಿಸುತ್ತಿರಲಿಲ್ಲ. "ನನ್ನ ಮನಸ್ಸು ಎಲ್ಲಿಯೋ ಇದ್ದಿತು, ನಾನು ಅನ್ನರಸದ ಇರುವಿಕೆಯನ್ನೇ ಗಮ ನಿಸಲಿಲ್ಲ" ಎನ್ನುತ್ತಾನೆ. ಪ್ರಜ್ಞೆಯು ಇಲ್ಲದಿದ್ದಲ್ಲಿ ಕೈಗಳು ಕರ್ಮವನ್ನು ತಿಳಿಸುತ್ತಿರ ಲಿಲ್ಲ "ನನ್ನ ಮನಸ್ಸು ಎಲ್ಲಿಯೋ ಇದ್ದಿತು ನಾನು ಕರ್ಮದ ಕಡೆಗೆ ಗಮನಿಸಲಿಲ್ಲ" ಎನ್ನುತ್ತಾನೆ. ಪ್ರಜ್ಞೆಯು ಇಲ್ಲದಿದ್ದಲ್ಲಿ ಶರೀರದ ಸುಖದುಃಖವನ್ನು ಪ್ರಸ್ತಾಪಿಸ ಲಾಗುತ್ತಿರಲಿಲ್ಲ "ನನ್ನ ಮನಸ್ಸು ಎಲ್ಲಿಯೋ ಇದ್ದಿತು, ಆದ್ದರಿಂದ ಸುಖದುಃಖ ಗಳನ್ನು ಗಮನಿಸಲಿಲ್ಲ" ಎನ್ನುತ್ತಾನೆ. ಪ್ರಜ್ಞೆಯು ಇಲ್ಲದಿದ್ದಲ್ಲಿ ಜನನೇಂದ್ರಿಯಗಳು ಆನಂದ ರತಿ ಮತ್ತು ಪ್ರಜಾತಿಯನ್ನು ಹೊರಗೆಡಹುತ್ತಿರಲಿಲ್ಲ "ನನ್ನ ಮನಸ್ಸು ಎಲ್ಲಿಯೋ ಇದ್ದಿತು, ಆದ್ದರಿಂದ ಆನಂದ ರತಿ ಮತ್ತು ಪ್ರಜಾತಿಯ ಕಡೆಗೆ ಗಮನ ವನ್ನು ಹರಿಸಲಿಲ್ಲ" ಎನ್ನುತ್ತಾನೆ, ಪ್ರಜ್ಞೆಯು ಇಲ್ಲದಿದ್ದಲ್ಲಿ ಎರಡು ಪಾದಗಳೂ ಚಲನೆಯನ್ನು ಮಾಡುತ್ತಿರಲಿಲ್ಲ "ನನ್ನ ಮನಸ್ಸು ಎಲ್ಲಿಯೋ ಇದ್ದಿತು. ನಾನು ಚಲನೆಯ ಕಡೆ ಗಮನವನ್ನೇ ಕೊಡಲಿಲ್ಲ ಎನ್ನುತ್ತಾನೆ. ಜ್ಞಾನವಿಲ್ಲದಿದ್ದಲ್ಲಿ ಯಾವ ವಿಜ್ಞಾನವೂ ಫಲಿಸುತ್ತಿರಲಿಲ್ಲ, ಯಾವುದರ ಇರುವಿಕೆಯನ್ನು ಅರಿತುಕೊಳ್ಳಬೇಕಾ ಗಿತ್ತೋ ಅವುಗಳನ್ನು ಅರಿಯುತ್ತಿರಲಿಲ್ಲ.

ನ ವಾಚಂ ವಿಜಿಜ್ಞಾಸೀತ | ವಕ್ತಾರಂ ವಿದ್ಯಾತ್ | ನಗಂಧಂ ವಿಜಿಜ್ಞಾಸೀತ | ಘ್ರಾತಾರಂ ವಿದ್ಯಾತ್ | ನರೂಪಂ ವಿಜಿಜ್ಞಾಸೀತ | ರೂಪಂ ವಿಧಂ ವಿದ್ಯಾತ್ | ನ ಶಬ್ದಂ ವಿಜಿಜ್ಞಾಸೀತ | ಶ್ರೋತಾರಂ ವಿದ್ಯಾತ್ | ನಾನ್ನರಸಂ ವಿಜಿಜ್ಞಾ

ಸೀತ । ಅನ್ನರಸಸ್ಯ ವಿಜ್ಞಾತಾರಂವಿದ್ಯಾತ್ । ನಕರ್ಮವಿಜಿಜ್ಞಾಸೀತ । ಕರ್ತಾರಂ ವಿದ್ಯಾತ್ । ನಸುಖದುಃಖೇ ವಿಜಿಜ್ಞಾಸೀತ । ಸುಖದುಃಖಯೋರ್ವಿಜ್ಞಾತಾರಂವಿದ್ಯಾತ್ । ನಾऽऽನಂದರತಿಂನಪ್ರಜಾತಿವಿಜಿಜ್ಞಾಸೀತ । ಆನಂದಸ್ಯರತೇಃ ಪ್ರಜಾತೇರ್ವಿಜ್ಞಾತಾರಂವಿದ್ಯಾತ್ । ತೇತ್ಯಾಂ ವಿಜಿಜ್ಞಾಸೀತ । ಏತಾರಂ ವಿದ್ಯಾತ್ । ನಮನೋ ವಿಜಿಜ್ಞಾಸೀತ । ಮನ್ತಾರಂ ವಿದ್ಯಾತ್ । ತಾವಾ ಏತಾದಶೈವ ಭೂತ ಮಾತ್ರಾ ಅಧಿಪ್ರಜ್ಞಂ । ದಶಪ್ರಜ್ಞಾಮಾತ್ರಾ ಅಧಿಭೂತಂ । ಯದ್ಧಿ ಭೂತಾಮಾತ್ರಾನಸ್ಯುರ್ನ ಪ್ರಜ್ಞಾಮಾತ್ರಾಃ ಸ್ಯುಃ । ಯದ್ವಾ ಪ್ರಜ್ಞಾ ಮಾತ್ರಾನಸ್ಯುರ್ನಭೂತ ಮಾತ್ರಾಃಸ್ಯುಃ । ನಹ್ಯನ್ಯತರತೋ ರೂಪಂ ಕಿಂಚನ ಸಿದ್ಧ್ಯೇತು । ನೋ ಏತನ್ನಾನಾ । ತದ್ಯಥಾ ರಥಸ್ಯಾರೇಷು ನೇಮಿರರ್ಪಿತಃ । ನಾಭಾವರಾ ಅರ್ಪಿತಾಃ । ಏವಮೇವೈತಾ ಭೂತಮಾತ್ರಾಃ । ಪ್ರಜ್ಞಾಮಾತ್ರಾ ಸ್ವರ್ಪಿತಾಃ । ಸ ಏಷ ಪ್ರಾಣ ಏವ ಪ್ರಜ್ಞಾತ್ಮಾऽऽನಂದೋऽಜರೋऽಮೃತಃ । ನ ಸಾಧು ನಾ ಕರ್ಮಣಾಭೂಯಾನ್ । ನೋ ಏವ ಸಾಧುನಾಕನೀಯಾನ್ । ಏಷಹ್ಯೇವೈನಂ ಸಾಧು ಕರ್ಮಕಾರಯತಿ । ತಂಯ ಮೇಭ್ಯೋ ಲೋಕೇಭ್ಯ ಉನ್ನಿನೀಷತೇ । ಏಷ ಉ ಏವೈನ ಮ ಸಾಧು ಕರ್ಮಕಾರಯತಿ । ತಂಯಮ ಧೋ ನಿನೀಷತೇ । ಏಷ ಲೋಕಪಾಲಃ । ಏಷ ಲೋಕಾಧಿಪತಿಃ । ಏಷ ಸರ್ವೇಶಃ । ಸಮ ಆತ್ಮೇತಿ ವಿದ್ಯಾತ್ ಸಮ ಆತ್ಮೇತಿ ವಿದ್ಯಾತ್ ॥೮॥

ವಾಕ್ಯವನ್ನು ಯಾರೂ ಅರ್ಥಮಾಡಿಕೊಳ್ಳಲು ಬಯಸುವುದಿಲ್ಲ. ಆದರೆ ಮಾತನಾಡುವವನನ್ನು ತಿಳಿದುಕೊಳ್ಳಬೇಕಾಗುತ್ತದೆ. ಹೀಗೆಯೇ ಗಂಧವನ್ನು ಯಾರೂ ತಿಳಿಯ ಬಯಸುವುದಿಲ್ಲ. ಆದರೆ ಆ ಗಂಧವು ಎಲ್ಲಿಂದ ಹೊರಬರುತ್ತಿದೆ ಎಂಬುದನ್ನು ತಿಳಿಯಬೇಕು. ರೂಪವು ಏನೆಂಬುದನ್ನು ಯಾರೂ ತಿಳಿಯಬಯಸುವುದಿಲ್ಲ. ಆದರೆ ಆ ರೂಪವು ಯಾರದೆಂದು ತಿಳಿಯಬೇಕಾಗುತ್ತದೆ. ಶಬ್ದವು ಏನೆಂಬುದನ್ನು ಯಾರೂ ತಿಳಿಯಬಯಸುವುದಿಲ್ಲ. ಆದರೆ ಶಬ್ದವನ್ನು ಕೇಳುವವರು ಯಾರೆಂಬುದನ್ನು ತಿಳಿಯಬೇಕಾಗುತ್ತದೆ. ಅನ್ನ ರಸದ ವಿಚಾರವಾಗಿ ಯಾರೂ ತಿಳಿಯಬಯಸುವುದಿಲ್ಲ. ಆದರೆ ಆ ರುಚಿಯ ಮೂಲವನ್ನು ವಿವರವಾಗಿ ತಿಳಿಯಬೇಕಾಗುತ್ತದೆ. ಕರ್ಮವು ಏನೆಂಬುದನ್ನು ಯಾರೂ ತಿಳಿಯಬಯಸುವುದಿಲ್ಲ. ಆದರೆ ಕರ್ಮವನ್ನು ಮಾಡುವವರಾರೆಂದು ತಿಳಿಯಬೇಕಾಗುತ್ತದೆ. ಸುಖ ದುಃಖಗಳು ಏನೆಂದು ತಿಳಿದುಕೊಳ್ಳಲು ಯಾರೂ ಬಯಸುವುದಿಲ್ಲ. ಆದರೆ ಸುಖ ದುಃಖಗಳು ಏತರಿಂದ

ಅನುಭವಿಸಲಾಗುತ್ತದೆ ಎಂಬುದನ್ನು ತಿಳಿಯಬೇಕಾಗುತ್ತದೆ. ಆನಂದ ರತಿ ಪ್ರಜಾತಿಗಳ ವಿಚಾರವನ್ನು ತಿಳಿದುಕೊಳ್ಳಲು ಯಾರೂ ಬಯಸುವುದಿಲ್ಲ. ಆದರೆ ಆನಂದ ರತಿ ಪ್ರಜಾತಿಗಳನ್ನನುಭವಿಸುವವರ ವಿಚಾರವಾಗಿ ತಿಳಿದುಕೊಳ್ಳಬೇಕಾಗುತ್ತದೆ. ಚಲನೆಯು ಏನು ಎಂಬುದನ್ನು ತಿಳಿದುಕೊಳ್ಳಲು ಯಾರೂ ಬಯಸರು. ಆದರೆ ಚಲಿಸುವವರು ಯಾರು ಎಂಬುದನ್ನು ಅರಿಯಬೇಕಾಗುತ್ತದೆ. ಮನಸ್ಸು ಎಂತಹುದೆಂಬುದನ್ನು ಯಾರೂ ತಿಳಿಯಬಯಸುವುದಿಲ್ಲ. ಆದರೆ ಯೋಚನೆ ಮಾಡುತ್ತಿರುವವರು ಯಾರೆಂದು ಅರಿಯಬೇಕಾಗುತ್ತದೆ. ಇವು ಹತ್ತೂ ಸಜೀವಿಗಳ ಸಂಬಂಧವಾದುದು ಹತ್ತು ಪ್ರಜ್ಞಾಭೂತಗಳು ಜೀವಿಗಳಿಗೆ ಸಂಬಂಧಿಸಿದುದು. ಏಕೆಂದರೆ ನಿಜವಾಗಿ ಸಜೀವಿಗಳಿಲ್ಲದಿದ್ದಲ್ಲಿ ಪ್ರಜ್ಞಾ ವಿಶೇಷಗಳೇ ಇರುತ್ತಿರಲಿಲ್ಲ. ಹಾಗೂ ಪ್ರಜ್ಞಾ ವಿಶೇಷಗಳು ಇಲ್ಲದಿದ್ದಲ್ಲಿ ಸಜೀವಿಗಳೂ ಇರುತ್ತಿರಲಿಲ್ಲ. ಏಕೆಂದರೆ ಯಾವ ಒಂದೂ ಸ್ವರೂಪದಿಂದ ಕಂಗೊಳಿಸಲಾರದು ಮತ್ತು ಪ್ರಜ್ಞಾತ್ಮಗಳೂ ಅನೇಕವೇನಿಲ್ಲ. ಯಾವ ರೀತಿ ರಥವು ಕುಂಭದ ಮೇಲೂ, ಕುಂಭವು ಆರೇ ಕಾಲುಗಳ ಮೇಲೂ, ಆರೇ ಕಾಲುಗಳು ಪಟ್ಟಿಗಳ ಮೇಲೂ ಆಧಾರಗೊಂಡಿರುವುದೋ ಹಾಗೆ ಈ ಜೀವಭೂತಗಳು ಪ್ರಜ್ಞಾಭೂತಗಳ ಮೇಲೂ, ಪ್ರಜ್ಞಾಭೂತಗಳು ಪ್ರಾಣನ ಮೇಲೂ ಆಧಾರಗೊಂಡಿವೆ. ಈ ಪ್ರಜ್ಞಾತ್ಮವು ಆನಂದವೂ, ವಯೋಮಾನವಿಲ್ಲದ್ದೂ, ಅಮೃತವೂ ಆಗಿರುತ್ತೆ. ಅವನು ಸತ್ಕರ್ಮಗಳಿಂದ ಹಿಗ್ಗುವುದಿಲ್ಲ ಮತ್ತು ದುಷ್ಕರ್ಮಗಳಿಂದ ಕುಗ್ಗುವುದೂ ಇಲ್ಲ. ಆದರೆ ಈ ಲೋಕಗಳಿಂದ ಪಾರಾಗಿ ಉನ್ನತ ಲೋಕಗಳನ್ನು ಪಡೆಯಲು ಸಾಧನವಾಗಿರುತ್ತದೆ. ಈ ಸತ್ಕರ್ಮಗಳು ಅಥವಾ ದುಷ್ಕರ್ಮಗಳು ಯಾರನ್ನು ಮೇಲೇರಿಸಬೇಕು, ಯಾರನ್ನು ಕೆಳಗೆ ಬೀಳಿಸ ಬೇಕೆಂಬುದಕ್ಕೆ ಕಾರಣವಾಗಿರುತ್ತೆ. ಆ ಪ್ರಜ್ಞಾತ್ಮನೇ ಲೋಕಪಾಲಕನಾಗಿರುತ್ತಾನೆ. ಹಾಗೂ ಲೋಕದ ಸಾರ್ವಭೌಮನೂ ಆಗಿದ್ದಾನೆ. ಅವನು ಎಲ್ಲರಿಗೂ ಅಧಿಪತಿಯಾಗಿದ್ದಾನೆ. ಅವನೇ ನಮ್ಮ ಆತ್ಮನೂ ಆಗಿದ್ದಾನೆ. ಈ ಒಂದನ್ನು ಎಲ್ಲರೂ ತಿಳಿದುಕೊಳ್ಳಬೇಕು ; ಈ ಒಂದನ್ನು ಎಲ್ಲರೂ ತಿಳಿದುಕೊಳ್ಳಬೇಕು.

## ಅಥ ಚತುರ್ಥೋಽಧ್ಯಾಯಃ

ಅಥಗಾರ್ಗ್ಯೋ ಹ ವೈ ಬಾಲಾಕಿರನೂಚಾನಃ ಸಂಸ್ಪೃಷ್ಟಆಸ । ಸೋಽವಸದುಶೀನರೇಷು ಸವಶಮತ್ಸ್ಯೇಷು, ಕುರುಪಾಂಚಾಲೇಷು ಕಾಶಿವಿದೇಹೇಷ್ವಿತಿ ।

ಸಹಾಽಜಾತಶತ್ರುಂಕಾಶ್ಯಮೇತ್ಯೋವಾಚ–ಬ್ರಹ್ಮತೇ ಬ್ರವಾಣೀತಿ । ತಂಹೋೀ ವಾಚಾಽಜಾತಶತ್ರುಃಸಹಸ್ರಂದದ್ಮಸ್ತ್ಮಇತ್ಯೇತಸ್ಯಾಂವಾಚಿ । ಜನಕೋಜನಕ ಇತಿ ವಾ ಉಜಾನಾ ಧಾವನ್ತೀತಿ ॥೧॥

ಒಂದು ಕಾಲದಲ್ಲಿ ಪ್ರಖ್ಯಾತನಾದ ವೇದ ಪಾರಂಗತನಾದ ಗಾರ್ಗ್ಯ ಬಾಲಾಕಿ ಎಂಬು ವವನಿದ್ದನು. ಈತನು ಉಶೀನರರನೊಂದಿಗೂ ಮತ್ಸ್ಯರೊಂದಿಗೂ, ಕುರು ಪಾಂಚಾಲರೊಂದಿಗೂ, ಕಾಶಿ ವಿದೇಹರೊಂದಿಗೂ ವಾಸಿಸುತ್ತಿದ್ದನೆಂದು ಹೇಳ ಲಾಗಿತ್ತು. ಅವನು ಕಾಶಿಯ ಅಜಾತ ಶತೃವಿನ ಬಳಿಗೆ ಬಂದು ಹೇಳುತ್ತಾನೆ. "ನಾನು ನಿನಗೆ ಬ್ರಹ್ಮಜ್ಞಾನವನ್ನು ಬೋಧಿಸುತ್ತೇನೆ". ಆಗ ಅಜಾತ ಶತ್ರುವು ''ಹಾಗಾದರೆ ನಿಮಗೆ ನಾವು ಒಂದು ಸಾವಿರ ಗೋವುಗಳನ್ನು ಕೊಡುತ್ತೇವೆ". ಹೀಗೆ ಹೇಳಿದುದನ್ನು ಕೇಳಿ ಪ್ರಜೆಗಳು ಜನಕ, ಜನಕ ಎಂದು ಕೂಗಿಕೊಂಡು ಓಡಲಾರಂಭಿ ಸಿದರು.

ಸಹೋವಾಚಬಾಲಾಕಿಃ—ಯಏವೈಷಆದಿತ್ಯೇ ಪುರುಷಸ್ತಮೇವಾಹ ಮುಪಾಸ ಇತಿ । ತಂಹೋವಾಚಾಜಾತ ಶತೃಃ— ಮಾಮೈತಾಸ್ಮಿನ್ ಸಂವಾದಯಿಷ್ಠಾಃ । ಬೃಹನ್ಪಾಂರಡವಾಸಾಅತಿಷ್ಟಾಃ । ಸರ್ವೇಷಾಂ ಭೂತಾನಾಂ ಮಾರ್ಧೋತಿವಾ ಅಹಮೇತಮುಪಾಸಇತಿ । ಸಯೋಹ್ಯೆತಮೇವಮುಪಾಸ್ತೇಽತಿಷ್ಠಾಃ । ಸರ್ವೇ ಷಾಂಭೂತಾನಾಂಮೂರ್ಧಾಭವತಿ ॥೨॥

ತರುವಾಯ ಬಾಲಾಕಿಯು ಹೇಳುತ್ತಾನೆ. "ಯಾರು ಸೂರ್ಯನಲ್ಲಿ ಪುರುಷ ರೂಪ ದಲ್ಲಿರುವರೋ ಅವನನ್ನು ನಾನು ಉಪಾಸನೆ ಮಾಡುತ್ತೇನೆ." ಆಗ ಅವನಿಗೆ ಅಜಾತ ಶತ್ರುವು ಹೇಳುತ್ತಾನೆ. "ನಾನು ಅವನ ವಿಚಾರದಲ್ಲಿ ಸಂವಾದ ಮಾಡಲು ಇಚ್ಛಿಸುವುದಿಲ್ಲ. ನಾನು ಅವನನ್ನು "ಬೃಹತ್" ಎಂದೂ, "ಶ್ವೇತವಸನಿ" ಎಂದೂ, ಅತ್ಯುತ್ತಮನೆಂದೂ, ಸಮಸ್ಥ ಭೂತಗಳಿಗೂ ಒಡೆಯನೆಂದೂ ನಾನು ಉಪಾಸಿಸು ತ್ತಿದ್ದೇನೆ." ಯಾರು ಅವನ ಮೇಲೆ ಹೀಗೆ ಉಪಾಸಿಸುವರೋ ಅವರೂ ಅತಿ ಶ್ರೇಷ್ಠರೂ, ಸಮಸ್ಥರ ಮುಖ್ಯಸ್ಥರೂ ಆಗುತ್ತಾರೆ.

ಸಹೋವಾಚಬಾಲಾಕಿಃ–ಯಏವೈಷಚಂದ್ರಮಸಿ ಪುರುಷಸ್ತಮೇವಾಹಮುಪಾಸ ಯತಿ । ತಂಹೋವಾಚಾಜಾತಶತೃಃ—ಮಾಮೈತಸ್ಮಿನ್ ಸಂವಾದಯಿಷ್ಠಾಃ । ಸೋಮೋರಾಜಾಽನ್ನಸ್ಯಾಽಽತ್ಮೇತಿವಾಅಹಮೇತ ಮುಪಾಸಇತಿ । ಸಯೋಹ್ಯೆ ತಮೇವ ಮುಪಾಸ್ತೇಽನ್ನಸ್ಯಾಽಽತ್ಮಾಭವತಿ ॥೩॥

ತರುವಾಯ ಬಾಲಾಕಿಯು ಹೇಳುತ್ತಾನೆ. "ಚಂದ್ರನಲ್ಲಿರುವ ಪುರುಷನನ್ನು ನಾನು ಉಪಾಸಿಸುತ್ತೇನೆ." ಆಗ ಅಜಾತಶತ್ರುವು ಹೇಳುತ್ತಾನೆ : ''ಅವನ ಮೇಲೆ ಚರ್ಚೆ ಮಾಡಲು ನಾನುಇಷ್ಟಪಡುವುದಿಲ್ಲ. ಏಕೆಂದರೆ ನಾನು ಅವನನ್ನು ಅನ್ನದ ಆತ್ಮ ನೆಂದು ಉಪಾಸಿಸುತ್ತೇನೆ. ಯಾರು ಅವನನ್ನು ಈ ರೀತಿ ಉಪಾಸಿಸುತ್ತಾರೋ ಅವರು ಅನ್ನದ ಆತ್ಮರೇ ಆಗುತ್ತಾರೆ''.

ಸಹೋವಾಚಬಾಲಾಕಿಃ–ಯಏವೈಷವಿದ್ಯುತಿಪುರುಷಸ್ತಮೇವಾಹಮುಪಾಸಇತಿ| ತಂಹೋವಾಚಾಜಾಶತ್ರುಃ—ಮಾಮೈತಸ್ಮಿನ್ ಸಂವಾದಯಿಷ್ಠಾಃ | ತೇಜಸವಾ ಆತ್ಮೇತಿವಾಅಹಮೇತಮುಪಾಸಇತಿ | ಸಯೋಹೈತಮೇವಮುಪಾಸ್ತೇ ತೇಜಸ ಆತ್ಮಾಭವತಿ ||೪||

ತರುವಾಯ ಬಾಲಾಕಿಯು ಹೇಳುತ್ತಾನೆ : "ಮಿಂಚಿನಲ್ಲಿರುವ ಪುರುಷನನ್ನು ನಾನು ಉಪಾಸನೆ ಮಾಡುತ್ತೇನೆ." ಅವನಿಗೆ ಅಜಾತಶತ್ರುವು ಹೇಳುತ್ತಾನೆ : "ಅವನ ಮೇಲೆ ನಾನು ಚರ್ಚಿಸಲು ಇಷ್ಟಪಡುವುದಿಲ್ಲ. ನಾನು ಅವನನ್ನು ತೇಜಸ್ಸಿನ ಆತ್ಮನೆಂದು ಉಪಾಸಿಸುತ್ತೇನೆ. ಯಾರು ಈ ರೀತಿಯಾಗಿ ಅವನನ್ನು ಉಪಾಸಿಸುತ್ತಾರೋ ಅವರು ತೇಜಸಾತ್ಮರಾಗುತ್ತಾರೆ".

ಸಹೋವಾಚಬಾಲಾಕಿಃ–ಯಏವೈಷಸ್ತನಇನ್ತೌ ಪುರುಷಸ್ತ ಮೇವಾಹಮುಪಾಸ ಇತಿ | ತಂಹೋವಾಚೌಜಾತಶತ್ರುಃ–ಮಾಮೈತಸ್ಮಿನ್ ಸಂವಾದಯಿಷ್ಠಾಃ | ಶಬ್ದ ಸ್ಯಾತ್ಮೇತಿವಾ ಅಹಮೇತಮುಪಾಸಇತಿ | ಸಯೋಹೈತಮೇವ ಮುಪಾಸ್ತೇ ಶಬ್ದಸ್ಯಾಽಽತ್ಮಾಭವತಿ ||೫||

ತರುವಾಯ ಬಾಲಾಕಿಯು ಹೇಳುತ್ತಾನೆ. "ಯಾವ ಪುರುಷನು ಗುಡುಗಿನಲ್ಲಿರು ವನೋ ಅವನನ್ನು ನಾನು ಉಪಾಸಿಸುತ್ತೇನೆ. ಅವನಿಗೆ ಅಜಾತ ಶತ್ರುವು ಹೇಳು ತ್ತಾನೆ "ನಾನು ಅವನ ಮೇಲೆ ಚರ್ಚಿಸಲು ಇಚ್ಛಿಸುವುದಿಲ್ಲ. ನಾನು ಅವನನ್ನು ಶಬ್ದದಲ್ಲಿರುವ ಆತ್ಮನೆಂದು ಉಪಾಸಿಸುತ್ತೇನೆ. ಯಾರು ಅವನನ್ನು ಹೀಗೆ ಉಪಾಸಿ ಸುವರೋ ಅವರೂ ಶಬ್ದದ ಆತ್ಮರೇ ಆಗುತ್ತಾರೆ."

ಸಹೋವಾಚ ಬಾಲಾಕಿಃ–ಯಏವೈಷ ಆಕಾಶೇಪುರುಷಸ್ತಮೇವಾಹ ಮುಪಾಸ ಇತಿ | ತಂಹೋವಾಚಾಜಾತ ಶತ್ರುಃ–ಮಾಮೈತಸ್ಮಿನ್ ಸಂವಾದಯಿಷ್ಠಾಃ | ಪೂರ್ಣಮ ಪ್ರವರ್ತಿ ಬ್ರಹ್ಮೇತಿವಾ ಅಹಮೇತ ಮುಪಾಸಇತಿ | ಸಯೋಹೈತ್ ಮೇವಮುಪಾಸ್ತೇಪೂರ್ಯತೇ ಪ್ರಜಯಾಪಶುಭಿಃ | ನೋಏವನಾಸ್ಯ ಪ್ರಜಾ ಪುರಾಕಾಲಾತ್ ಪ್ರವರ್ತತೇ ||೬||

ತರುವಾಯ ಬಾಲಾಕಿಯು ಹೇಳುತ್ತಾನೆ. "ನಾನು ಆಕಾಶದಲ್ಲಿರುವ ಪುರುಷನನ್ನು ಉಪಾಸಿಸುತ್ತೇನೆ." ಆಗ ಅಜಾತ ಶತೃವು ಹೇಳುತ್ತಾನೆ. "ಅವನ ಮೇಲೆ ಚರ್ಚೆ ಮಾಡಲು ನಾನು ಇಚ್ಛಿಸುವುದಿಲ್ಲ. ನಾನು ಅವನನ್ನು ಪೂರ್ಣವಾಗಿ ಅಪ್ರವರ್ತಿಯಾದ ಬ್ರಹ್ಮನೆಂದು ಉಪಾಸಿಸುತ್ತೇನೆ. ಯಾರು ಅವನನ್ನು ಹೀಗೆ ಉಪಾಸಿಸವರೋ ಅವರಿಗೆ ಪ್ರಜೆ, ಪಶು, ಕೀರ್ತಿಗಳಲ್ಲಿ ಅಭಿವೃದ್ಧಿಯೂ, ಬ್ರಹ್ಮಜ್ಞಾನವೂ ಉಂಟಾಗಿ ದೇವಲೋಕಕ್ಕೆ ಹೋಗುವವಲ್ಲದೆ ಇಲ್ಲಿಯೂ ಚಿರಂಜೀವಿತ್ವವುಂಟಗುತ್ತದೆ.

ಸಹೋವಾಚಬಾಲಾಕಿಃ—ಯಏವೈಷವಾಯೌ ಪುರುಷಸ್ತ್ಮಮೇವಾಹ ಮುಪಾಸ ಇತಿ । ತಂಹೋವಾಚಾಜಾತಶತ್ರುಃ—ಮಾಮೈತಸ್ಮಿನ್ ಸಂವಾದಯಿಷ್ಠಾಃ । ಇಂದ್ರೋವೈಕುಂಠೋಽಪರಾಜಿತಾ ಸೇನೇತಿವಾಅಹಮೇತ ಮುಪಾಸಇತಿ । ಸಯೋಹ್ಯೆತಮೇವಮುಪಾಸ್ತೇ । ಜಿಷ್ಣುರ್ಹವಾಽಪರಾಜಯಿಷ್ಣುರ ನ್ಯತ್ರಸ್ತ್ಯ ಜಾಯಿಭವತಿ ॥೭॥

ತರುವಾಯ ಬಾಲಾಕಿಯು ಹೇಳುತ್ತಾನೆ. "ವಾಯುವಿನಲ್ಲಿರುವ ಆ ಪುರುಷನನ್ನು ನಾನು ಉಪಾಸಿಸುತ್ತೇನೆ." ಆಗ ಅಜಾತಶತೃವು ಹೇಳುತ್ತಾನೆ "ಅವನ ಮೇಲೆ ಚರ್ಚೆ ಮಾಡಲು ನಾನು ಇಚ್ಛಿಸುವುದಿಲ್ಲ. ಅವನನ್ನು ನಾನು ಅಜೇಯನಾದ ವೈಕುಂಠವ ಇಂದ್ರನೆಂದು ಉಪಾಸಿಸುತ್ತೇನೆ." ಯಾರು ಹೀಗೆ ಅವನನ್ನು ಉಪಾಸಿಸುತ್ತಾರೋ ಅವರು ಯಾವಾಗಲು ಜಯಶಾಲಿಗಳಾಗಿಯೂ, ಅಜೇಯರಾಗಿಯೂ, ಇತರರನ್ನು ಜಯಿಸುವವರಾಗಿಯೂ, ಆಗುತ್ತಾರೆ.

ಸಹೋವಾಚಬಾಲಕಿ ! ಸಏವೈಷೋಽಗ್ನೌಪುರುಷಸ್ತಮೇವಾಹಮುಪಾಸಇತಿ! ತಂಹೋವಾಚಾಜಾತಶತೃಃ—ಮಾಮೈತಸ್ಮಿನ್ ಸಂವಾದಯಿಷ್ಠಾಃ । ವಿಷಾಸಹಿರಿತಿವಾ ಆಹಮೇತಮುಪಾಸಇತಿ । ಸಯೋಹ್ಯೆತಮೇವಮುಪಾಸ್ತೇವಿಷಾಸಹಿರ್ಹ್ಯೆವಾನ್ವೇಷಭವತಿ ॥೮॥

ತರುವಾಯ ಬಾಲಾಕಿಯು ಹೇಳುತ್ತಾನೆ. "ಅಗ್ನಿಯಲ್ಲಿರುವ ಆ ಪುರುಷನನು ನಾನು ಉಪಾಸಿಸುತ್ತೇನೆ. ಆಗ ಅವನಿಗೆ ಅಜಾತ ಶತೃವು ಹೇಳುತ್ತಾನೆ. ಆತನ ವಿಷಯವಾಗಿ ನಾನು ಚರ್ಚಿಸಲು ಇಚ್ಛಿಸುವುದಿಲ್ಲ. ನಾನು ಅವನನ್ನು ದೋಷರಹಿತನೆಂದು ಉಪಾಸಿಸುತ್ತಾನೆ." ಯಾರು ಅವನನ್ನು ಹೀಗೆಂದು ಉಪಾಸಿಸುವರೋ ಅವರು ಇತರರ ವಿಚಾರದಲ್ಲೂ ದೋಷರಹಿತರಾಗುತ್ತಾರೆ.

ಸಹೋವಾಚಬಾಲಾಕಿಃ-ಯಏವೈಷೋಽಪ್ಸುಪುರುಷಸ್ತಮೇವಾಹ ಮುಪಾಸಇತಿ। ತಂಹೋವಾಚಾಜಾತಶತ್ರುಃ – ಮಾಮೈತಸ್ಮಿನ್ಸಂವಾದಯಿಷ್ಠಾಃ। ನಾಮ್ನ ಆತ್ಮೇತಿವಾಅಹಮೇತಮುಪಾಸ ಇತಿ। ಸಯೋಽಹ್ಯೈತಮೇವಮುಪಾಸ್ತೇಽನಾಮ್ನ ಆತ್ಮಾಭವತಿ। ಇತ್ಯಧಿ ದೈವತಂ। ಅಥಾಧ್ಯಾತ್ಮಂ ||೯||

ತರುವಾಯ ಬಾಲಾಕಿಯು ಹೇಳುತ್ತಾನೆ. "ಜಲದಲ್ಲಿರುವ ಪುರುಷನನ್ನು ನಾನು ಉಪಾಸಿಸುತ್ತೇನೆ." ಆಗ ಅವನಿಗೆ ಅಜಾತಶತ್ರುವು ಹೇಳುತ್ತಾನೆ. "ನಾನು ನಿನ್ನೊಡನೆ ಅವನ ವಿಚಾರವಾಗಿ ಚರ್ಚಿಸಲು ಇಚ್ಛಿಸುವುದಿಲ್ಲ. ನಾನು ಅವನನ್ನು ಆತ್ಮಜ್ಯೋತಿ ಎಂದು ಉಪಾಸಿಸುತ್ತೇವೆ. ಯಾರು ಅವನನ್ನು ಹೀಗೆ ಉಪಾಸಿಸುವರೋ ಅವರೂ ಆತ್ಮ ಜ್ಯೋತಿಗಳಾಗುತ್ತಾರೆ. ದೇವತೆಗಳ ವಿಚಾರವಾಯ್ತು ಇನ್ನು ಆಧ್ಯಾತ್ಮದ ವಿಚಾರ.

ಸಹೋವಾಚ ಬಾಲಾಕಿಃ ಯಏವೈಷ ಆದರ್ಶೇ ಪುರುಷಸ್ತಮೇವಾಹ ಮುಪಾಸ ಇತಿ। ತಂಹೋವಾಚಾಜಾತ ಶತ್ರುಃ–ಮಾಮೈತಸ್ಮಿನ್ ಸಂವಾದಯಿಷ್ಠಾಃ। ಪ್ರತಿ ರೂಪ ಇತಿ ವಾ ಅಹಮೇತ ಮುಪಾಸ ಇತಿ। ಸಯೋಽಹ್ಯೈತ ಮೇವ ಮುಪಾಸ್ತೇ ಪ್ರತಿರೂಪೋ ಪ್ರಜಯಾಮಾ ಜಾಯತೇ ನಾ ಪ್ರತಿರೂಪಃ ||೧೦||

ತರುವಾಯ ಬಾಲಾಕಿಯು ಹೇಳುತ್ತಾನೆ. 'ನಾನು ಕನ್ನಡಿಯಲ್ಲಿರುವ ಪುರುಷನನ್ನು ಉಪಾಸನೆ ಮಾಡುತ್ತೇನೆ." ಆದಕ್ಕೆ ಅಜಾತ ಶತ್ರುವು ಹೇಳುತ್ತಾನೆ "ನಾನು ಅವನ ವಿಚಾರವಾಗಿ ಚರ್ಚಿಸುವಂತೆ ಮಾಡಬೇಡ. ನಾನು ಅವನನ್ನು ಪ್ರತಿರೂಪನೆಂದು ಮಾತ್ರ ಉಪಾಸಿಸುತ್ತೇನೆ." ಯಾರು ಹೀಗೆಂದು ಅವನನ್ನು ಉಪಾಸಿಸುತ್ತಾರೋ ಅವರಿಗೆ ತಮ್ಮ ಪ್ರತಿ ರೂಪದಂತಿರುವ ಸಂತಾನವು ಲಭಿಸುತ್ತದೆ.

ಸಹೋವಾಚ ಬಾಲಕಿಃ—ಯ ಏವೈಷ ಪ್ರತಿಶ್ರುತ್ಕಾಯಾಂಪು ರುಷಸ್ತಮೇವಾಹ ಇತಿ। ತಂಹೋವಾಚಾಜಾತಶತ್ರುಃ—ಮಾ ಮೈತಸ್ಮಿನ್ ಸಂವಾದಯಿಷ್ಠಾಃ ದ್ವಿತೀಯೋಽನಪಗಇತಿವಾ ಅಹಮೇತಮುಪಾಸಇತಿ। ಸಯೋಽಹ್ಯೈತಮೇವಮು ಪಾಸ್ತೇ। ವಿಂದತೇ ದ್ವಿತಿಯಾತ್। ದ್ವಿತಿಯವಾನ್ಭವತಿ ||೧೧||

ತರುವಾಯ ಬಾಲಾಕಿಯು ಹೇಳುತ್ತಾನೆ "ನೆರಳಿನಲ್ಲಿರುವ ಪುರಷನನ್ನೇ ನಾನು ಉಪಾಸನೆ ಮಾಡುತ್ತೇನೆ." ತರುವಾಯ ಅವನಿಗೆ ಅಜಾತಶತ್ರುವು ಹೇಳುತ್ತಾನೆ "ಅವನ "ಮೇಲೆ ಚರ್ಚಿಸಲು ನಾನು ಇಷ್ಟಪಡುವುದಿಲ್ಲ. ನಾನು ಅವನನ್ನು ಅದ್ವಿತೀಯ

ನೆಂದು ಉಪಾಸಿಸುತ್ತೇನೆ. ಯಾರು ಅವನನ್ನು ಹೀಗೆ ಉಪಾಸಿಸುವರೋ ಅವರೂ ಅದ್ವಿತೀಯರಾಗಿ ಎಲ್ಲವುದರಲ್ಲೂ ಎರಡನೆಯವರು (ಗೃಹಸ್ಥರು) ಆಗುತ್ತಾರೆ.

ಸಹೋವಾಚ ಬಾಲಕಿಃ ಯಏವೈಷ ಶಬ್ದಃ ಪುರುಷಮನ್ವೇತಿ ತಮೇವಾಹ ಮುಪಾಸಇತಿ | ತಂಹೋವಾಚಾಜಾತಶತ್ರುಃ—ಮಾಮೈತಸ್ಮಿನ್ ಸಂವಾದ ಯಿಷ್ಠಾಃ | ಅಸುರಿತಿವಾ ಅಹಮೇತಮುಪಾಸಇತಿ | ಸಯೋಹೈತಮೇವಮು ಪಾಸ್ತೇನೋ ಏವಸ್ವಯಾನಾಸ್ಯ ಪ್ರಜಾ ಪುರಾಕಾಲಾತ್ ಸಮ್ಮೋಹಮೇತಿ||೧೨||

ತರುವಾಯ ಬಾಲಾಕಿಯು ಹೇಳುತ್ತಾನೆ. "ಶ್ರುತಿಧ್ವನಿಯಲ್ಲಿರುವ ಪುರುಷನನ್ನು ನಾನು ಉಪಾಸಿಸುತ್ತೇನೆ." ಆಗ ಅವನಿಗೆ ಅಜಾತಶತ್ರುವು ಹೇಳುತ್ತಾನೆ "ನನ್ನನ್ನು ಆತನ ವಿಚಾರದಲ್ಲಿ ಚರ್ಚೆಗೆ ಎಳೆಯಬೇಡ, ನಾನು ಅವನನ್ನು ಪ್ರಾಣನೆಂದೇ ಉಪಾ ಸಿಸುತ್ತಿದ್ದೇನೆ." ಈ ರೀತಿಯಾಗಿ ಯಾರು ಅವನನ್ನು ಉಪಾಸಿಸುವರೋ ಅವರು ಆ ಕಾಲದಲ್ಲಿ ಸ್ಮೃತಿ ತಪ್ಪುವವರಾಗುವುದಿಲ್ಲ.

ಸಹೋವಾಚಬಾಲಾಕಿಃ—ಯಏವೈಷಚ್ಛಾಯಾಪುರುಷ ಸ್ತಮೇವಾಹಮುಪಾಸ ಇತಿ | ತಂಹೋವಾಚಾಜಾತಶತ್ರುಃಮಾಮೈತಸ್ಮಿನ್ಸಂವಾದಯಿಷ್ಠಾಃ | ಮೃತ್ಯು ರಿತಿವಾಅಹಮೇತಮುಪಾಸಇತಿ | ಸಹೋಹೈತಮೇವಮುಪಾಸ್ತೇನೋಏವಸ್ವ ಯಂನಾಸ್ಯಪ್ರಜಾಪುರಾಕಾಲಾತ್ ಪ್ರಮೀಯತೇ ||೧೩||

ತರುವಾಯ ಬಾಲಾಕಿಯು ಹೇಳುತ್ತಾನೆ "ನಾನು ಛಾಯಾಪುರುಷನನ್ನು ಉಪಾಸನೆ ಮಾಡುತ್ತೇನೆ. ಆಗ ಅಜಾತಶತ್ರುವು ಹೇಳುತ್ತಾನೆ" ಈ ವಿಚಾರದಲ್ಲಿ ನಿನ್ನೊಡನೆ ಸಂವಾದಮಾಡಲು ನಾನು ಇಚ್ಛಿಸುವುದಿಲ್ಲ. ನಾನು ಅವನನ್ನು ಮೃತ್ಯುವೆಂದು ಉಪಾ ಸಿಸುತ್ತಿದ್ದೇನೆ." ಯಾರು ಹೀಗೆಂದು ಉಪಾಸಿಸುವರೋ ಅವರು ಅಕಾಲ ಮರಣಕ್ಕೆ ತುತ್ತಾಗುವುದಿಲ್ಲ.

ಸಹೋವಾಚಬಾಲಾಕಿಃ—ಯಏವೈಷಶರೀರಃ ಪುರುಷಸ್ತಮೇವಾಹಮುಪಾಸ ಇತಿ | ತಂಹೋವಾಚಾಜಾತಶತ್ರುಃ—ಮಾಮೈತಸ್ಮಿನ್ಸಂವಾದಯಿಷ್ಠಾಃ | ಪ್ರಜಾ ಪತಿರಿತಿವಾಅಹಮೇತಮುಪಾಸಇತಿ | ಸಯೋಹೈತಮೇವಮುಪಾಸ್ತೇಪ್ರಜಾ ಯತೇಪ್ರಜಯಾಪಶುಭಿಃ ||೧೪||

ತರುವಾಯ ಬಾಲಕಿಯು ಹೇಳುತ್ತಾನೆ. ''ಈ ದೇಹದಲ್ಲಿರುವ ಪುರುಷನನ್ನು ನಾನು ಉಪಾಸಿಸುತ್ತೇನೆ.'' ಅದಕ್ಕೆ ಅಜಾತಶತ್ರುವು ಹೇಳುತ್ತಾನೆ ''ನನ್ನನ್ನು ಈ ವಿಚಾರದಲ್ಲಿ ಸಂವಾದಕ್ಕೆ ಎಳೆಯಬೇಡ. ನಾನು ಅವನನ್ನು ಸೃಷ್ಟಿಕರ್ತನಾದ ಪ್ರಜಾಪತಿ ಎಂದು ಉಪಾಸಿಸುತ್ತಿದ್ದೇನೆ. ಯಾರು ಹೀಗೆಂದು ಉಪಾಸಿಸುವರೋ ಅವರು ಸಂತಾನ, ಪಶು, ಕೀರ್ತಿ, ಪವಿತ್ರತೆ ಮತ್ತು ದೇವಲೋಕವನ್ನು ಪಡೆಯುತ್ತಾರೆ. ಅವರು ಸಂಪೂರ್ಣ ಕಾಲ ಜೀವಿಸಿರುತ್ತಾರೆ.

ಸಹೋವಾಚಬಾಲಾಕಿಃ–ಯಏವೈಷಪ್ರಾಜ್ಞಆತ್ಮಾಯೇನೈತತ್ಪುರುಷಃ ಸುಪ್ತಃ ಸ್ವಪ್ನಯಾಚರತಿತಮೇವಾಹಮುಪಾಸಇತಿ । ತಂಹೋವಾಚಾಜಾತಶತ್ರುಃ–ಮಾಮೈತಸ್ಮಿನ್ಸಂವಾದಯಿಷ್ಠಾಃ । ಯಮೋರಾಜೇತಿವಾಅಹಮೇತಮುಪಾಸ ಇತಿ । ಸಯೋಹೈತಮೇವಮುಪಾಸ್ತೇಸರ್ವಂಹಾಸ್ಮಾಇದಂಶ್ರೈಷ್ಠ್ಯಾಯಯಮ್ಯತೇ ||೧೫||

ಆಗ ಬಾಲಕಿಯು ಹೇಳುತ್ತಾನೆ ''ಮನುಷ್ಯನು ನಿದ್ರಾವಸ್ಥೆಯಲ್ಲಿದ್ದಾಗ ಸ್ವಪ್ನಲೋಕದಲ್ಲಿ ವಿಹರಿಸುವನಲ್ಲ ಅವನನ್ನು ನಾನು ಉಪಾಸಿಸುತ್ತೇನೆ.'' ಆಗ ಅವನಿಗೆ ಅಜಾತಶತ್ರುವು ಹೇಳುತ್ತಾನೆ "ಅವನ ಮೇಲೆ ಸಂವಾದಮಾಡಲು ನಾನು ಇಚ್ಛಿಸುವುದಿಲ್ಲ, ನಾನು ಅವನನ್ನು ಯಮನೆಂದು ಉಪಾಸಿಸುತ್ತೇನೆ''. ಯಾರುಹೀಗೆಂದು ಉಪಾಸಿಸುವರೋ ಅವರು ಇಲ್ಲಿ ಮಾಡುವುದೆಲ್ಲ ಶ್ರೇಷ್ಠವಾದುದೂ, ಯೋಗಕ್ಷೇಮಕರವಾದುದೂ, ಆಗುತ್ತದೆ''

ಸಹೋವಾಚಬಾಲಾಕಿಃ ಯಏವೈಷದಕ್ಷಿಣೇಽಕ್ಷನ್—ಪುರುಷಸ್ತಮೇವಾಹಮುಪಾಸಇತಿ । ತಂಹೋವಾಚಾಜಾತಶತ್ರುಃ–ಮಾಮೈತಸ್ಮಿನ್ಸಂವಾದಯಿಷ್ಠಾಃ । ನಾಮ್ನಆತ್ಮಾಽಗ್ನೇರಾತ್ಮಾ, ಜ್ಯೋತಿಷಆತ್ಮೇ, ತಿವಾಅಹಮೇತಮುಪಾಸ ಇತಿ । ಸಯೋಹೈತಮೇವಮುಪಾಸ್ತಏತೇಷಾಂ ಸರ್ವೇಷಾಮಾತ್ಮಾ ಭವತಿ ||೧೬||

ತರುವಾಯ ಬಾಲಾಕಿಯು ಹೇಳುತ್ತಾನೆ. "ಬಲಗಣ್ಣಿನಲ್ಲಿರುವ ಪುರುಷನನ್ನು ನಾನು ಉಪಾಸಿಸುತ್ತೇನೆ." ಆಗ ಅಜಾತ ಶತ್ರುವು ಹೇಳುತ್ತಾನೆ "ನಾನು ಅವನ ವಿಚಾರವಲ್ಲಿ ಸಂವಾದ ಮಾಡಲು ಇಚ್ಛಿಸುವುದಿಲ್ಲ. ನಾನು ಅವನನ್ನು ವಾಕ್ಕಿನ ಆತ್ಮನೆಂದೂ, ಅಗ್ನಿಯ ಆತ್ಮನೆಂದೂ, ಜ್ಯೋತಿಷದ ಆತ್ಮನೆಂದೂ, ಉಪಾಸಿಸುತ್ತೇನೆ. ಯಾರು ಹೀಗೆ ಅವನನ್ನು ಉಪಾಸಿಸುವರೋ ಅವರು ಇವೆಲ್ಲವೂ ಆಗುತ್ತಾರೆ.

ಸಹೋವಾಚ ಬಾಲಾಕಿಃ ಸಏವೈಷ ಸವ್ಯೇ ಅಕ್ಷ್ಣಪುರುಷಸ್ತಮೇವಾಹ ಮುಪಾಸ ಇತಿ । ತಂಹೋವಾಚಾಜಾತಶತ್ರುಃ–ಮಾಮೈತಸ್ಮಿನ್ ಸಂವಾದ ಯಿಷ್ಠಾಃ । ಸತ್ಯಸ್ಯಾತ್ಮಾ, ವಿದ್ಯುತ ಆತ್ಮಾ, ತೇಜಸ ಆತ್ಮೇತಿವಾ ಅಹಮೇ ತಮುಪಾಸ ಇತಿ । ಸಯೋಹ್ಯೇತ ಮೇವ ಮುಪಾಸ್ತ ಏತೇಷಾಂ ಸರ್ವೇಷಾ ಮಾತ್ಮಾಭವತಿ ||೧೭||

ತರುವಾಯ ಬಾಲಾಕಿಯು ಹೇಳುತ್ತಾನೆ. "ನಾನು ಎಡಕಣ್ಣಿನಲ್ಲಿರುವ ಪುರುಷನನ್ನು ಉಪಾಸಿಸುತ್ತೇನೆ. ಆಗ ಅಜಾತ ಶತ್ರುವು ಹೇಳುತ್ತಾನೆ "ನಾನು ಅವನ ವಿಷಯ ದಲ್ಲಿ ಸಂವಾದ ಮಾಡಲು ಇಚ್ಛಿಸುವುದಿಲ್ಲ. ನಾನು ಅವನನ್ನು ಸತ್ಯದ ಆತ್ಮನೆಂದೂ ವಿದ್ಯುತ್ತಿನ ಆತ್ಮನೆಂದೂ, ತೇಜಸ್ಸಿನ ಆತ್ಮನೆಂದೂ ಉಪಾಸಿಸುತ್ತೇನೆ. ಯಾರು ಈ ರೀತಿ ಅವನನ್ನು ಉಪಾಸಿಸುತ್ತಾರೋ ಅವರು ಎಲ್ಲವುಗಳ ಆತ್ಮರೇ ಆಗುತ್ತಾರೆ.

ತತಉಹ ಬಾಲಾಕಿ ಸ್ತೂಷ್ಣೀಮಾಸ । ತಂಹೋವಾಚಾಜಾತಶತ್ರುಃ–ಏತಾ ವನ್ನು ಬಾಲಾಕಾ೩ಇತಿ । ಏತಾವದ್ಧೀತಿ ಹೋವಾಚ ಬಾಲಾಕಿಃ । ತಂಹೋ ವಾಚಾಜಾತ ಶತ್ರುಃ–ಮೃಷಾವೈ ಕಿಲಮಾಸಮವಾದಯಿಷ್ಠಾಃ । ಬ್ರಹ್ಮತೇ ಬ್ರವಾಣೀತಿ । ಸಹೋವಾಚ–ಯೋವೈ ಬಾಲಾಕ ಏತೇಷಾಂ ಪುರುಷಾಣಾಂ ಕರ್ತಾಯಸ್ಯ ವೈತತ ಕರ್ಮಸವೈವೇದಿತವ್ಯ ಇತಿ । ತತ ಉಹ ಬಾಲಾಕಿಃ ಸಮಿತ್ಪಾಣಿಃ ಪ್ರತಿಚಕ್ರಮ ಉಪಾಯಾ ನೀತಿ । ತಂಹೋವಾಚಾಜಾತಶತ್ರುಃ– ಪ್ರತಿಲೋಮ ರೂಪಮೇವ ತತ್ ಸ್ಯಾದ್ಯಾತ್ ಕ್ಷತ್ರಿಯೋ ಬ್ರಾಹ್ಮಣ ಮುಪನ ಯೇತ್ । ಏಹಿವ್ಯೇವ ತ್ವಾಜ್ಞಾ ಪಯಿಷ್ಯಾಮೀತಿ । ತಂಹ ಪಾಣಾ ವಭಿಪದ್ಯ ಪ್ರವವ್ರಾಜ । ತೌಹ ಸುಪ್ತಂ ಪುರುಷಾ ಮಾಜಗ್ಮತುಃ । ತಂಹಾಜಾತಶತ್ರು ರಾಮಂತ್ರಯಾಂ ಚಕ್ರೇ–ಬೃಹನ್ಪಾಂಡರವಾಸಃ ಸೋಮರಾಜನ್ನಿತಿ । ಸವುಹ ಶಿಶ್ಯ ಏವ । ತತ್ ಉ ಹೈನಂ ಯಷ್ಟ್ಯಾ ವಿಚಿಕ್ಷೇಪ । ಸತತ ಏವ ಸಮುತ್ತ ಸ್ಥೌ । ತಂಹೋವಾಚಾಜಾತಶತ್ರುಃ–ಕ್ವೈಷ ಏತದ್ಬಾಲಕೋ ಪುರುಷೋಽಶ ಯಿಷ್ಟ । ಕ್ವೈತದಭೂತ್ । ಕುತಏತದಾಗಾ೩ದಿತಿ ತತ ಉಹ ಬಾಲಾಕಿರ್ನವಿಜಿ ಜ್ಞೇತಂಹೋವಾಚಾಜಾತಶತ್ರುಃ–ಯತ್ರೈಷ ಏತದ್ಬಾಲಕೋಽಪುರುಷೋಽಶ ಯಿಷ್ಟ । ಯತ್ರೈತದಭೂತ್ । ಯತ ಏತ ದಾಗಾದಿತಿ । ಹಿತಾನಾಮ

ಹೃದಯಸ್ಯನಾಡ್ಯೋ ಹೃದಯಾತ್ ಪುರೀತತ ಮಭಿಪ್ರತನ್ವನ್ತಿ । ತದ್ಯಥಾ ಸಹಸ್ರಧಾಕೇಶೋ ವಿಪಟಿತ ಸ್ತಾವ ದಂಡ್ಯಃ ಪಿಂಗಲ ಸ್ಯಾಣಿಮ್ನಾಂತಿಷ್ಠನ್ತಿ । ಶುಕ್ಲಸ್ಯ ಕೃಷ್ಣಸ್ಯ ಪೀತಸ್ಯ ಲೋಹಿತಸ್ಯೇತಿ । ತಾಸುಧಾಭವತಿ । ಯದಾಸುಪ್ತಃ ಸ್ವಪ್ನಂ ನ ಕಂಚನ ಪಶ್ಯತಿ । ಅಥಾಸ್ಮಿನ್ ಪ್ರಾಣ ಏಕೈಕಧಾಭವತಿ । ತಪ್ಯೈನಂ ವಾಕ್ ಸರ್ವೈರ್ನಾಮಭಿಃಸಹಾಪ್ಯೇತಿ । ಚಕ್ಷುಃ ಸರ್ವೈ ರೂಪೈಃ ಸಹಾಪ್ಯೇತಿ । ಶ್ರೋತ್ರಂ ಸರ್ವೈಃ ಶಬ್ದೈಃ ಸಹಾಪ್ಯೇತಿ । ಮನಃ ಸರ್ವೈಃಧ್ಯಾನೈಃಸಹಾಪ್ಯೇತಿ । ಸಯದಾ ಪ್ರತಿಬುಧ್ಯತೇ । ಯಥಾಗ್ನೇರ್ಜ್ವಲತಃ ಸರ್ವಾದಿಶೋ ವಿಸ್ಫುಲಿಂಗಾ ವಿಪ್ರತಿಷ್ಠೇರನ್ನೇವಮೇವೈ ತಸ್ಮಾದಾತ್ಮನಃ ಪ್ರಾಣಾಯಥಾಯತ ಸಂವಿಪ್ರತಿಷ್ಠನ್ತೇ । ಪ್ರಾಣೇಭ್ಯೋದೇವಾಃ ದೇವೇಭ್ಯೋಲೋಕಾಃ ॥೧೮॥

- ಇಷ್ಟಾದ ತರುವಾಯ ಬಾಲಾಕಿಯು ಸುಮ್ಮನಾದನು. ತರುವಾಯ ಅಜಾತ ಶತ್ರುವು ಹೇಳಿದನು. ವೃಥಾ ನೀನು ನನಗೆ ಮಾದಿನುವಂತೆ ಮಾಡಿ "ನಿನಗೆ ಬ್ರಹ್ಮ ಜ್ಞಾನವನ್ನು ಬೋಧಿಸುವೆ ಎಂದೆ". ಓ ಬಾಲಾಕಿ ಈಗ ಹೇಳು "ನೀನು ಇದುವರೆಗೆ ಒಬ್ಬೊಬ್ಬರಾಗಿ ವಿವರಿಸಿದ ಪುರುಷರ ಸೃಷ್ಟಿಕರ್ತನು ಯಾರು? ಈ ಕೆಲಸವೆಲ್ಲಾ ನಡೆಯುತ್ತಿರುವುದು ಯಾರಿಂದ? ಅವನನ್ನು ಮಾತ್ರ ನಾವೀಗ ಅರಿತುಕೊಳ್ಳ ಬೇಕಾಗಿದೆ". ಆ ತರುವಾಯ ಬಾಲಾಕಿಯು ಕೈಯ್ಯಲ್ಲಿ ಸಮಿಧೆಗಳನ್ನು ಹಿಡಿದು ಕೊಂಡು ಅಜಾತ ಶತ್ರುವಿನ ಬಳಿಗೆ ಬಂದು ಹೇಳುತ್ತಾನೆ "ನನ್ನನ್ನು ಶಿಷ್ಯನನ್ನಾಗಿ ಸ್ವೀಕರಿಸಿರಿ." ಅವನಿಗೆ ಅಜಾತ ಶತ್ರುವು ಹೇಳುತ್ತಾನೆ "ಇದು ಅರ್ಷೇಯದಿಂದ ಬಂದ ಪದ್ಧತಿಗೆ ವಿರೋಧವಾಗಿದೆ. ಕ್ಷತ್ರಿಯರು ಯಾರೂ ಬ್ರಾಹ್ಮಣರನ್ನು ಶಿಷ್ಯ ರಾಗಿ ಪರಿಗ್ರಹಿಸಿಲ್ಲ. ಆದರೂ ಬಾ ನಿನಗೆ ತಿಳಿಯಹೇಳುತ್ತೇನೆ" ಎಂದು ಬಾಲಾಕಿಯ ಕೈಯ್ಯನ್ನು ಹಿಡಿದುಕೊಂಡು ಮುಂದೆ ನಡೆದನು. ಇಬ್ಬರೂ ಒಂದು ಕಡೆ ಒಬ್ಬ ಮನುಷ್ಯನು ನಿದ್ರೆ ಮಾಡುತ್ತಿದ್ದ ಸ್ಥಳಕ್ಕೆ ಬಂದರು. ಆಗ ಅಜಾತ ಶತ್ರುವು ಆ ಮಲಗಿದ್ದವನನ್ನು ಕುರಿತು "ಓ ಮಹಾನುಭಾವನೇ, ಶ್ವೇತವಸ್ತ್ರಧಾರಿಯೇ, ಸೋಮರಾಜನೇ ಎದ್ದೇಳು" ಎಂದು ಹೇಳಿದನು, ಆದರೆ ಅವನು ಎಚ್ಚರವಾಗದೆ ಹಾಗೆಯೇ ಮಲಗಿದ್ದನು. ಆಗ ಒಂದು ಕಟ್ಟಿಗೆ ಇಂದ ಅವನನ್ನು ನೂಕಲು ಆಗ ತಕ್ಷಣವೇ ಅವನು ಮೇಲೆದ್ದನು. ಆಗ ಅಜಾತ ಶತ್ರುವು ಬಾಲಾಕಿಯನ್ನು ಕುರಿತು ಹೇಳುತ್ತಾನೆ "ಈ ಮನುಷ್ಯನು ಇಲ್ಲಿ ಮಲಗಿದ್ದಾಗ ಅವನಿಗೆ ಏನಾಗಿತ್ತು ಮತ್ತು ಹೇಗೆ ಜಾಗ್ರತಾ ವಸ್ಥೆಗೆ ಬಂದನು?'' ಇದಕ್ಕೆ ಉತ್ತರವನ್ನು ಹೇಳಲು ಬಾಲಾಕಿಗೆ ತೋಚಲಿಲ್ಲ: ಆಗ ಅವನಿಗೆ ಅಜಾತಶತ್ರುವು ಹೇಳುತ್ತಾನೆ ''ಈ ಮನುಷ್ಯನು ಮಲಗಿದ್ದಾಗ ಅವನೇನಾಗಿದ್ದ ಮತ್ತು ಎಲ್ಲಿಂದ ಜಾಗ್ರತಾ ವಸ್ಥೆಗೆ ಬಂದ ಎಂದು

ಕೇಳಿದ್ದರ ಅರ್ಥ. ಮನುಷ್ಯನ ಹೃದಯದಿಂದ ಹೊರಟು ಅವನ ದೇಹವನ್ನೆಲ್ಲಾ ಆವರಿಸಿ ಕೊಂಡಂತೆ "ಹಿತಾ" ಎಂಬ ನಾಡಿಯು ಕವಲುಗಳಾಗಿ ಒಡೆದಿರುತ್ತದೆ. ಈ ನಾಡಿಗಳು ಎಷ್ಟು ಸೂಕ್ಷ್ಮವಾಗಿರುತ್ತೆಂದರೆ ಒಂದು ಕೂದಲನ್ನು ಒಂದು ಸಾವಿರ ಭಾಗ ಮಾಡಿದಷ್ಟಿರುತ್ತದೆ. ಅವು ತೆಳುವಾದ ಒಂದು ಬಗೆಯ ದ್ರವದಿಂದ ಕೂಡಿದ್ದು ಅದು ಬಿಳಿಪು, ಕಪ್ಪು, ಹಳದಿ, ಮತ್ತು ಕೆಂಪುಬಣ್ಣದ್ದಾಗಿರುತ್ತದೆ. ಇವುಗಳಲ್ಲಿ ಒಬ್ಬನು ನಿದ್ರಿಸುವಾಗ ಅವನಿಗೆ ಯಾವ ಕನಸುಗಳೂ ಕಾಣುವುದಿಲ್ಲ. ಆಗ ಅವನು ಪ್ರಾಣದಲ್ಲಿ ಐಕ್ಯನಾಗಿರುತ್ತಾನೆ. ಆಗ ವಾಕ್ಕು ತನ್ನ ಎಲ್ಲ ಹೆಸರುಗಳೊಡನೆ ಒಳಕ್ಕೆ ಪ್ರವೇಶಿಸುತ್ತದೆ ; ಕಣ್ಣು ಅದರ ಎಲ್ಲಾ ರೂಪಗಳೊಡನೆ ಅದರ ಬಳಿಗೆ ಹೋಗುತ್ತದೆ." ಕಿವಿಯು ಅದರ ಎಲ್ಲಾ ಶಬ್ದಗಳೊಡನೆ ಅದರ ಬಳಿಗೆ ಹೋಗುತ್ತದೆ. ಮನಸ್ಸು ಅದರ ಎಲ್ಲಾ ಧ್ಯಾನಗಳ ಸಮೇತ ಅದರ ಬಳಿಗೆಹೋಗುತ್ತದೆ ; ಅವನು ಜಾಗ್ರುದವಸ್ಥೆಗೆ ಬಂದಾಗ ಯಾವ ರೀತಿ ಜ್ವಲಿಸುತ್ತಿರುವ ಅಗ್ನಿ ಇಂದ ಕಿಡಿಗಳು ಹೊರಗೆ ಬರುತ್ತದೆಯೋ ಹಾಗೆ ಈ ಆತ್ಮನಿಂದ ಆಯಾಯಾ ಪ್ರಾಣಗಳು ಹೊರಟು ತಮ್ಮ ತಮ್ಮ ಸ್ಥಳಗಳಿಗೆ ಹೋಗಿ ಸೇರುತ್ತದೆ. ಪ್ರಾಣದಿಂದ ದೇವರು. ದೇವರಿಂದ ಲೋಕಗಳು.

ತದ್ಯಥಾ ಕ್ಷುರಃಕ್ಷುರಧಾನೇಽವಹಿತಃಸ್ಯಾತ್ । ವಿಶ್ವಂಭರೋವಾವಿಶ್ವಂಭರಕುಲಾಯೇ । ಏವಮೇವೈಷಪ್ರಾಜ್ಞಆತ್ಮೇದಂ ಶರೀರಮಾತ್ಮಾನ ಮನುಪ್ರವಿಷ್ಟ ಆಲೋಮಭ್ಯಆನಖೇಭ್ಯಃ । ತಮೇತಮಾತ್ಮಾನಮೇತಆತ್ಮಾನೋಽನ್ವವಸ್ಯನ್ತಿ । ಯಥಾಶ್ರೇಷ್ಠಿನಂಸ್ವಾಹಾ । ತದ್ಯಥಾಶ್ರೇಷ್ಠೀಸ್ವೈರ್ಭುಂಕ್ತೇ । ಯಥಾವಾ ಶ್ರೇಷ್ಠಿನಂಸ್ವಾಭುಂಜನ್ತಿ । ಏವಮೇವೈಷ ಪ್ರಜ್ಞಾತ್ಮೈತಾತತ್ಮಭಿಭುಂಕ್ತೇ । ಯಥಾಶ್ರೇಷ್ಠಿಸ್ವೈಃ । ಏವಂವೈತಮಾತ್ಮಾನಮೇವ ಆತ್ಮಾನೋಽನ್ವವಸ್ಯನ್ತಿ । ಯಥಾಶ್ರೇಷ್ಠಿನಂಸ್ವಾಹಾ । ಸಯಾವದ್ಧವಾಇಂದ್ರಏತಮಾತ್ಮಾನಂ ನವಿಜಜ್ಞೇ ತಾವದೇನಮಸುರಾಅಭಿಬಭೂವುಃ । ಸಯದಾವಿಜಜ್ಞೇಽಥಹತ್ವಾಽಸುರಾನ್ ವಿಜಿತ್ಯಸರ್ವೇಷಾಂ ದೇವಾನಾಂಶ್ರೈಷ್ಠ್ಯಂ ಸ್ವಾರಾಜ್ಯಮಾಧಿಪತ್ಯಂ ಪರೀಯಾಯ । ತಥೋಽಏವೈವಂ ವಿದ್ವಾನ್ ಸರ್ವಾನ್‌ಪಾಪ್ಮನೋಽಪಹತ್ಯ ಸರ್ವೇಷಾಂ ಭೂತಾನಾಂಶ್ರೈಷ್ಠ್ಯಂಸ್ವಾರಾಜ್ಯಮಾಧಿಪತ್ಯಂಪರ್ಯೇತಿ । ಯಏವಂವೇದಯ ಏವಂವೇದ ॥೧೯॥

ಈ ಶರೀರ ಆತ್ಮನು ಕಡೆಗೆ ಪ್ರಜ್ಞಾತ್ಮನು ತಮ್ಮ ಕೂದಲು ಮತ್ತು ಉಂಗುರಗಳ ಸಮೇತ ಯಾವ ರೀತಿ ಕ್ಷೌರಿಕನ ಕತ್ತಿಯು ಅದರ ಗೂಡಿನೊಳಗೆ ಅಡಗಿರುತ್ತದೆಯೋ ಅಥವಾ ಅಗ್ನಿಯು ಅಗ್ನಿಕುಂಡದಲ್ಲಿ ಅಡಗಿರುತ್ತದೆಯೋ ಹಾಗೆ ಈ ದೇಹ

ವನ್ನು ಪ್ರವೇಶಿಸಿರುತ್ತದೆ. ಹೀಗೆಯೇ ಈ ದೇಹದ ಚೌಕಟ್ಟಿನಲ್ಲೂ ಉಳಿದಿರುತ್ತದೆ. ಈ ಇತರ ಆತ್ಮಗಳು ಒಬ್ಬ ಮುಂಖಡನ ಮೇಲೆ ಅವನ ಪ್ರಜೆಗಳು ಅವಲಂಬಿಸಿರುವಂತೆ ಆತ್ಮನ ಮೇಲೆ ಅವಲಂಬಿಸಿರುತ್ತವೆ. ಹೇಗೆ ಮುಖಂಡನು ಅವನ ಸ್ವಂತ ಜನಗಳಿಂದ ಸೇವಿಸಲ್ಪಡುವನೋ ಅಥವ ಅವನ ಸ್ವಂತ ಜನಗಳು ಒಬ್ಬ ಮುಖಂಡನ ಸೇವೆಯಲ್ಲಿರುವರೋ ಹಾಗೆ ಈ ಪ್ರಜ್ಞಾತ್ಮನು ಈ ಬೇರೆ ಬೇರೆ ಆತ್ಮಗಳಿಂದ ಸಂತೋಷಿಸುತ್ತಾನೆ. ಇತರರೂ ಆ ಪ್ರಜ್ಞಾತ್ಮನ ಸೇವೆಯಲ್ಲಿರುತ್ತಾರೆ. ಎದುವರೆಗೆ ಇಂದ್ರನು ಈ ಆತ್ಮವನ್ನು ಗ್ರಹಿಸಿರಲಿಲ್ಲವೋ ಅದುವರೆಗೂ ರಾಕ್ಷಸರು ಅವನಿಗೆ ಮೇಲುಗೈಯಾಗೇ ಇದ್ದರು. ಆದರೆ ಇದನ್ನು ಅರಿತುಕೊಂಡಾಗ ಆತ್ಮನು ಮೇಲುಗೈಯ್ಯಾಗಿ ರಾಕ್ಷಸವನ್ನು ಗೆದ್ದನು. ಆಗಿನಿಂದ ಇಂದ್ರನು ಎಲ್ಲಾ ದೇವತೆಗಳಿಗಿಂತಮತ್ತು ಜೀವಿಗಳಿಗಿಂತ ಶ್ರೇಷ್ಠನಾದನು. ಆಗಿನಿಂದ ಅವನಿಗೆ ಸ್ವಾರಾಜ್ಯವೂ, ಅಧಿಪತ್ಯವೂ ಲಭಿಸಿತು. ಇದನ್ನು ಯಾರು ಅರಿಯುವರೋ ಅವರೂ ಕೂಡ ಎಲ್ಲ ದೃಷ್ಟಶಕ್ತಿಗಳನ್ನೂ ಬಡಿದು ಸ್ವಾರಾಜ್ಯ ಮತ್ತು ಆದಿಪತ್ಯವನ್ನೂ, ಇತರರ ಮೇಲೆ ಸಾರ್ವಭೌಮತ್ವವನ್ನೂ ಪಡೆಯುತ್ತಾರೆ, ಇದನ್ನು ಅರಿತವರು.

ಓಂಕಾರಶ್ಚಾಥಶಬ್ದಶ್ಚ ದ್ವಾವೇದೌಬ್ರಹ್ಮಣಾಃ ಪುರಾ ।
ಕಂಠಂಭಿತ್ವಾವಿನಿರ್ಯಾತ ತಸ್ಮಾನ್ಮಾಂಗಳಿಕಾ ಉಭೌ ॥
ಕೌಷೀತಕೀ ಉಪನಿಷತ್ ಸಮಾಪ್ತಿಃ

# ಅಥಮೈತ್ರಾಯಣ್ಯುಪನಿಷತ್

## ಪ್ರಥಮ ಪ್ರಪಾಠಕಃ

ಬ್ರಹ್ಮಯಜ್ಞೋವಾ ಏಷಯತ್ಪೂರ್ವೇಷಾಂ ಚಯನಂ । ತಸ್ಮಾದ್ಯಜಮಾನಶ್ಚಿತ್ವೈತಾ ನಗ್ನಿ ನಾತ್ಮಾನ ಮಭಿಧ್ಯಾಯೇತ್ । ಸಮ್ಪೂರ್ಣಃ ಖಲುವಾಅದ್ಧಾಽವಿಕಲಃ ಸಂಪದ್ಯತೇಯಜ್ಞಃ । ಕಃಸೋಽಭಿಧ್ಯೇಯೋಽಯಂ ಯಃಪ್ರಾಣಾಖ್ಯಂ । ತಸ್ಯೋಪಾಖ್ಯಾನಂ ॥೧॥

ಪೂರ್ವಜರು ಮೊದಲು ಯಜ್ಞವೇದಿಕೆಗಳನ್ನು ರಚಿಸಿ ಬ್ರಹ್ಮಯಜ್ಞವನ್ನು ಮಾಡು ತ್ತಾರೆ. ಆದ್ದರಿಂದ ಯಜ್ಞೋಪಾಸಕನು ಮೊದಲು ಅಗ್ನಿಯನ್ನು ಪ್ರತಿಷ್ಠಾಪನೆ ಮಾಡಿ ಆತ್ಮತಪವನ್ನಾಚರಿಸಬೇಕು, ಆಗ ಮಾಡಿದ ಯಾಗವು ಪೂರ್ಣವಾಗಿಯೂ, ಲೋಪಗಳಿಲ್ಲದೆಯೂ ಮಾಡಿದಂತಾಗುತ್ತದೆ. ಯಾರಮೇಲೆ ತಪಸ್ಸನ್ನಾಚರಿಸ ಬೇಕು ? ಅದರ ಮೇಲೆ ಹೀಗೆ ಹೇಳಲಾಗುತ್ತದೆ.

ಬೃಹದ್ರಥೋವೈನಾಮರಾಜಾರಾಜ್ಯೇ ಜ್ಯೇಷ್ಠ ಪುತ್ರಂ ನಿಧಾಪಯಿತ್ವಾಇದಮ ಶಾಶ್ವತಂ ಮನ್ಯಮಾನಃ ಶರೀರಂ ವೈರಾಗ್ಯಮುಪೇತೋಽರಣ್ಯಂನಿರ್ಜಗಾಮ । ಸತತ್ರಪರಮಂತಪಆಸ್ಥಾಯಾಽಽದಿತ್ಯಮುದೀಕ್ಷ್ಯಮಾಣ ಊರ್ಧ್ವಬಾಹುಸ್ತಿಷ್ಠತಿಅನ್ತೇ ಸಹಸ್ರಾಹಸ್ಯಾನ್ತಿಕ್ರಮಾಜಗಾಮಾಗ್ನಿರಿವಾಧೂಮಕಸ್ತೇಜಸಾ ನಿರ್ದಹನ್ನಿವಾಽಽತ್ಮವಿದ್ಭಗವಾಞ್ಛಾಕ್ಯಾಯನಃ – ಉತ್ತಿಷ್ಠೋತ್ತಿಷ್ಠ ವರಂವೃಣೀಷ್ವೇತಿರಾಜಾನಮಬ್ರವೀತ್ । ಸತಸ್ಮೈನಮಃ ಕೃತ್ವೋವಾಚ–ಭಗವನ್ನಾಹಮಾತ್ಮವಿತ್ । ತ್ವಂತತ್ತ್ವವಿಚ್ಛೃಣ್ಮೋವಯಂ । ಸತ್ವಂನೋಬ್ರೂಹೀತಿ । ಏತದ್ವೃತ್ತಂಪುರಸ್ತಾದುಃಶಕ್ಯಮೇತಂಪ್ರಶ್ನಂ । ಐಕ್ಷ್ವಾಕಾನ್ಯಾನ್ಕಾಮಾನ್ವೃಣೀಷ್ವೇತಿ

ಶಾಕಾಯನ್ಯಃ ಶಿರಸಾಽಸ್ಯಚರಣಾವಭಿವನ್ದ್ಯಶಮಾನೋರಾಜೇಮಾಂ ಗಾಥಂಜಗಾದ ||೨||

ಬೃಹದ್ರಥನೆಂಬ ಹೆಸರಿನ ರಾಜನು ತನ್ನ ರಾಜ್ಯಾಡಳಿತವನ್ನು ಅವನ ಹಿರಿಯ ಮಗನಿಗೆ ವಹಿಸಿ, ಈ ಮಾನವ ಜೀವಿತವು ಅಶಾಶ್ವತವೆಂದರಿತು ತನ್ನ ಶರೀರದ ಮೇಲೆ ವೈರಾಗ್ಯವನ್ನು ತಾಳಿದವನಾಗಿ ಅರಣ್ಯಕ್ಕೆ ಹೊರಟುಹೋದನು. ಅಲ್ಲಿ ಘೋರವಾದ ತಪಸ್ಸನ್ನಾಚರಿಸಲು ಸೂರ್ಯನನ್ನು ದೃಷ್ಟಿಸುತ್ತಾ ತನ್ನ ಎರಡು ಕೈಗಳನ್ನೂ ಮೇಲಕ್ಕೆ ಎತ್ತಿಕೊಂಡು ಪ್ರತಿಷ್ಠಿತನಾದನು. ಹೀಗೆ ಒಂದುಸಾವಿರ ದಿನಗಳು ತಪಸ್ಸನ್ನಾಚರಿಸಲು ಅವನ ಎದುರಿಗೆ ಹೊಗೆಯಾಡದ ಜಾಜ್ವಲ್ಯಮಾನವಾಗಿ ಬೆಳಗುತ್ತಿದ್ದ ಅಗ್ನಿಜ್ಯೋತಿಯೊಂದು ಬಂದಿತು. ಹಾಗೆ ಬಂದುದು ಆತ್ಮಜ್ಞಾನಿಯಾದ ಭಗವಾನ್ ಸಾಕಾಯನ್ಯರು. ಅವರು ದೊರೆಯನ್ನು ಕುರಿತು "ಏಳು, ಎಚ್ಚರತಾಳು, ನಿನಗೆ ಬೇಕಾದವರವನ್ನು ಕೇಳಿಕೋ" ಎಂದರು. ಆಗ ರಾಜನು ಮೈತಳೆದು ಮುನಿವರ್ಯರಿಗೆ ನಮಸ್ಕರಿಸಿ ಹೇಳುತ್ತಾನೆ "ಓ ಮಹಾನುಭಾವರೇ ತಾವು ಆತ್ಮವಿದರಾಗಿರುತ್ತೀರಿ ಎಂದು ನಾನು ಬಲ್ಲೆ. ಅದನ್ನು ನನಗೆ ಉಪದೇಶಿಸಬೇಕು." ಆಗ ಸಾಕಾಯನ್ಯರು ಹೇಳುತ್ತಾರೆ "ಇಂತಹ ಸನ್ನಿವೇಶಗಳು ಹಿಂದೆ ಜರುಗುತ್ತಿದ್ದುವು. ಈಗ ಕೇಳುತ್ತಿರುವ ಪ್ರಶ್ನೆಯು ಬಹಳ ಜಟಿಲವಾಗಿದೆ. ಆದ್ದರಿಂದ ಓ ಐಕ್ಷ್ವಾಕನೇ ಬೇರೊಂದು ವರವನ್ನು ಕೋರಿಕೋ'' ಆಗ ದೊರೆಯು ಶಾಕಾಯನ್ಯರ ಪಾದಗಳಿಗೆ ಶಿರಸಾ ಅಭಿವಂದಿಸಿ ಹೀಗೆ ಹೇಳುತ್ತಾನೆ :

ಭಗವನ್ ಅಸ್ಥಿ, ಚರ್ಮ, ಸ್ನಾಯು, ಮಜ್ಜ, ಮಾಂಸ, ಶುಕ್ಲ, ಶೋಣಿತ, ಶ್ಲೇಷ್ಮ, ಅಶ್ರು, ದೂಷಿಕಾ, ವಿಣ್ಮೂತ್ರ, ವಾತ, ಪಿತ್ಥ. ಕಫ, ಸಂಘಾತೇ, ದುರ್ಗಂಧೇ, ನಿಃಸಾರೇಽಸ್ಮಿಞ್ಚ್ಛರೀರೇಕಿಂಕಾಮೋಪಭೋಗೈಃ | ಕಾಮ, ಕ್ರೋಧ, ಲೋಭ, ಮೋಹ, ಭಯ, ವಿಷಾದ, ಈರ್ಷ್ಯೇಅಷ್ಟವಿಯೋಗಾನಿಷ್ಟ ಸಂಪ್ರಯೋಗಕ್ಷುತ್, ಪಿಪಾಸಾ, ಜರಾ, ಮೃತ್ಯು, ರೋಗ, ಶೋಕಾದ್ಯೈರಭಿಹತೇಽಸ್ಮಿಞ್ಚ್ಛರೀರೇ ಕಿಂ ಕಾಮೋಪಭೋಗೈಃ ||೩||

ಓ ಭಗವಂತನೇ ; ಈ ಅಸ್ಥಿರವಾದ ಮತ್ತು ದುರ್ಗಂಧಪೂರಿತವಾದ ಈ ಶರೀರದ ಮೂಳೆ, ಚರ್ಮ, ಮಾಂಸಖಂಡಗಳು, ಮಜ್ಜಮಾಂಸ, ರಕ್ತ, ಶುಕ್ಲ, ಶ್ಲೇಷ್ಮ, ಅಶ್ರು, ಕಫ, ವಾತ, ಪಿತ್ಥ, ಮಲಮೂತ್ರ, ಶ್ಲೇಷ್ಮ ಇವುಗಳ ನಡುವೆ ಕಾಮೋಪಭೋಗಗಳು ಏಕೆ ? ಈ ದೇಹವಾದರೋ ಯಾವಾಗಲೂ, ಆಸೆ, ಆಕಾಂಕ್ಷೆ, ಕೋಪ, ಹೊಟ್ಟೆಕಿಚ್ಚು, ಕ್ರೋಧ, ಲೋಭ, ಮೋಹ ಮತ್ತು ಮದವೆಂಬ ಎಂಟು ದುರ್ಗುಣಗಳನ್ನೂ ಭಯ, ವಿಷಾದ, ಈರ್ಷೆ, ವಿಯೋಗ, ಅನಿಷ್ಟ ಸಂಪ್ರಯೋಗ, ಹಸಿವು,

ನೀರಡಿಕೆ, ಜರಾ, ಮೃತ್ಯು, ರೋಗ, ಶೋಕಾದಿಗಳಿಂದ ಕೂಡಿದ ಈ ದೇಹದಲ್ಲಿ ಕಾಮೋಪಭೋಗಗಳು ಏಕೆ ?

ಸರ್ವಂ ಚೇದಂ ಕ್ಷಯಿಷ್ಣು ಪಶ್ಯಾಮಃ । ಯಥೇಮೇದಂ ಶಮಶಕಾದಯ ಸ್ತೃಣ ವನಸ್ಪತಯೋದ್ಭೂತಪ್ರಧ್ವಂಸಿನಃ । ಅಥಕಿಮೇತೈರ್ವಾ । ಪರೇಽನ್ಯೇ ಮಹಾಧನುರ್ಧರಾಶ್ಚಕ್ರವರ್ತಿನಃ ಕೇಚಿತ್ ಸುದ್ಯುಮ್ನಭೂರಿದ್ಯುಮ್ನೇಂದ್ರದ್ಯು ಮ್ನ, ಕುವಲಯಾಶ್ವ, ಯೌವನಾಶ್ವ, ವಧ್ರ್ಯಾಶ್ವ, ಅಶ್ವಪತಿ, ಶಶಬಿಂದು, ಹರಿಶ್ಚಂದ್ರ, ಅಂಬರೀಷ, ನನುಕ್ತು, ಶರ್ಯಾತಿ, ಯಯಾತ್ಯ, ಅನರಣ್ಯಾಕ್ಷ ಸೇನಾದಯಃ । ಅಥಮರುತ್ತ, ಭರತ, ಪ್ರಭೃತಯೋರಾಜಾನೋಮಿಷತೋ ಬಂಧುವರ್ಗಸ್ಯಮಹತೀಂ ಶ್ರಿಯಂ ತ್ಯಕ್ತ್ವಾಽಸ್ಮಾಲ್ಲೋಕಾದಮುಂಲೋಕಂ ಪ್ರಯಾತಾಇತಿ । ಅಥಃಮೇತೈರ್ವಾ । ಪರೇಽನ್ಯೇಗಂಧರ್ವಾ, ಸುರ, ಯಕ್ಷ, ರಾಕ್ಷಸ, ಭೂತಗಣಾ, ಪಿಶಾಚ, ಉರಗ, ಗ್ರಹಾದೀನಾಂನಿರೋಧಂಪಶ್ಯಾಮಃ। ಅಥಃಮೇತೈರ್ವಾ, ಅನ್ಯಾನಾಂಶೋಷಣಂಮಹಾರ್ಣವಾನಾಂ ಶಿಖರಿಣಾಂ ಪ್ರಪತನಂ, ಧ್ರುವಸ್ಯಪ್ರಚಲನಂ । ವೃಶ್ಚನಂವಾತರಜ್ಜೂನಾಂ । ನಿಮಜ್ಜನಂ ಪೃಥಿವ್ಯಾಃಸ್ಥಾನಾದಪಸರಣಂ ಸುರಾಣಾಂ । ಇತ್ಯೇತದ್ವಿಧೇಽಸ್ಮಿನ್ಸಂಸಾರೇ ಕಿಂಕಾಮೋಪಭೋಗೈರ್ಯೈರೇವಾಶಿತಸ್ಯಾಸಕೃದಿಹಾಽಽವರ್ತನಂ ದೃಶ್ಯತಾ ಇತ್ಯುದ್ಧರ್ತುಮರ್ಹಸಿ । ಅಂಧೋದಪಾನಸ್ಥೋಭೇತ ಇವಾಹಮಸ್ಮಿನ್ ಸಂಸಾ ರೇಭಗವಂಸ್ತ್ವಂನೋಗತಿಸ್ತ್ವಂ ನೋಗತಿಃ ॥೪॥

ನಾವು ಇವೆಲ್ಲವೂ ಕ್ಷಯಿಸುತ್ತಿರುವುದನ್ನು ನೋಡುತ್ತೇವೆ. ಅವು ಪತಂಗ, ಸೊಳ್ಳೆ ಮೊದಲಾದ ಕೀಟಗಳಂತೆಯೂ, ಹುಲ್ಲು, ವನಸ್ಪತಿಗಳು ಬೆಳೆದು ಅಳಿಯುವಂತೆಯೂ, ಏತಕ್ಕಾಗಿ ಇವೆಲ್ಲವೂ ಇವೆ? ಇನ್ನೊಂದೆಡೆ ಮಹಾ ಮಹಾರ್ ವ್ಯಕ್ತಿಗಳೂ, ಶೂರರೂ, ಚಕ್ರವರ್ತಿಗಳೂ, ಆದ ಸುದ್ಯುಮ್ನ, ಭೂರಿದ್ಯುಮ್ನ ಇಂದ್ರದ್ಯುಮ್ನ, ಕುವಲಯಾಶ್ವ, ಯೌವನಾಶ್ವ, ವಧ್ರ್ಯಾಶ್ವ, ಅಶ್ವಪತಿ, ಶಶಿಬಿಂದು,ಹರಿಶ್ಚಂದ್ರ, ಅಂಬರೀಷ, ನನುಕ್ತು, ಶರ್ಯಾತಿ, ಯಯಾತಿ, ಅನರಣ್ಯ, ಅಕ್ಷಸೇನಾ ಮುಂತಾದ ದೊರೆಗಳೂ, ಮರುತ್ತು ಭರತಾದಿಗಳೂ ಅವರ ಮಹಾ ಸಂಸಾರ ಸಮೇತ ವೈಭವದಿಂದಿದ್ದು ಅವರ ಅತುಳೈ ಶ್ವರ್ಯವನ್ನೂ ಹಿಂದೆಬಿಟ್ಟು ಈ ಲೋಕವನ್ನು ತ್ಯಜಿಸಿ ಪರಲೋಕಗತರಾದರು. ಇದೆಲ್ಲಾ ಹೀಗೆ ಏಕೆ? ಇವರಂತೆಯೇ ಇನ್ನೂ ಪ್ರಖ್ಯಾತರಾದ ಗಾಂಧರ್ವರು, ಅಸುರರು, ಯಕ್ಷರು, ರಾಕ್ಷಸರು, ಭೂತಗಳು, ಗಣಗಳು, ಸರ್ಪಗಳು, ಗ್ರಹಗಳು,

ಮೊದಲಾದುವೆಲ್ಲಾ ನಿರ್ಮೂಲವಾಗುತ್ತಿವೆ. ಇವೆಲ್ಲಾ ಏಕೆ ಹೀಗೆ ? ಇತರ ವಾದ ಮಹಾಮಹಾ ಸಾಗರಗಳು ಬತ್ತಿಹೋಗುತ್ತಿವೆ, ಅನೇಕ ಪರ್ವತಗಳು ಕುಸಿಯುತ್ತಿವೆ. ಧೃವ ನಕ್ಷತ್ರವು ಮಾರ್ಗ ತಪ್ಪುತ್ತಿವೆ. ನಕ್ಷತ್ರಗಳನ್ನು ಅವುಗಳ ಸ್ಥಾನಗಳಲ್ಲಿ ಬಂಧಿಸಿಟ್ಟಿರುವ ರಜ್ಜುಗಳು ತುಂಡಾಗುತ್ತಿವೆ. ಭೂಮಿಯು ಜಲಾಂತರ್ಗತವಾಗುತ್ತಿದೆ, ತಮ್ಮ ತಮ್ಮ ಸ್ಥಳಗಳಿಂದ ದೇವತೆಗಳು ಕದಲುತ್ತಿದ್ದಾರೆ. ಇಂತಹ ಪ್ರಪಪಂಚದಲ್ಲಿ ಕಾಮೋಪಭೋಗಗಳು ಹೇಗೆ ನಿಂತಿವೆ ? ಏಕೆಂದರೆ ಇವೆಲ್ಲವನ್ನೂ ಅನುಭವಿಸಿದ ಮೇಲೆ ಮತ್ತೆ ಈ ಲೋಕಕ್ಕೇ ಹಿಂದಿರುಗಬೇಕಾಗಿದೆ," ಆದ್ದರಿಂದ ಇವುಗಳಿಂದ ನನ್ನನ್ನು ಮುಕ್ತನನ್ನಾಗಿ ಮಾಡು, ಈ ಲೋಕದಲ್ಲಿ ಚಕ್ರದಂತೆ ತಿರುಗುತ್ತಿರುವ ಈ ಕಾಲದಲ್ಲಿ ನಾನು ನೀರಿಲ್ಲದ ಭೂಮಿಯಲ್ಲಿನ ಕಪ್ಪೆಯಂತೆ ಅಂಧತ್ವದಲ್ಲಿದ್ದೇನೆ. ಆದ್ದರಿಂದ ಹೇ ಭಗವಂತನೇ ಈ ಭವತ್ಸಂಸಾರದಿಂದ ನೀನೇ ನನಗೆ ಗತಿಕಾಣಿಸಬೇಕು, ನೀನೇ ನಮಗೆ ದಿಕ್ಕು.

## ಎರಡನೆಯ ಅಧ್ಯಾಯ

ಅಥಭಗವಾರ್ನ್ಶಾಕಾಯನ್ಯಃ ಸುಪ್ರೀತಿಸ್ತ್ವಾಬ್ರವೀದಾಜಾನಾಂ—ಮಹಾರಾಜ ಬೃಹದ್ರಥೇಕ್ಷ್ವಾಕುವಂಶಧ್ವಜಶೀಘ್ರಮಾತ್ಮಜ್ಞಃ ಕೃತಕೃತ್ಯಸ್ತ್ವಂಮರುನ್ನಾಮ್ನೇತಿವಿಶ್ರುತೋಽಸೀತಿ । ಅಥವಾ ಖಲ್ವಾತ್ಮಾತೇ । ಯಃಕತಮೋಭಗವಾ ಇತಿ । ತಂಹೋವಾಚೇತಿ ॥೧॥

ಆಗ ಭಗವಂತನಾದ ಶಾಕ್ಯಾಯನ್ಯನು ಸುಪ್ರೀತನಾಗಿ ದೊರೆಗೆ ಹೇಳುತ್ತಾನೆ : "ಇಕ್ಷ್ವಾಕುವಂಶದ ಕೀರ್ತಿಧ್ವಜವನ್ನು ಹಾರಿಸುತ್ತಿರುವ ಮಹಾರಾಜಾ ಬೃಹದ್ರಥನೇ, ನೀನು ಆತ್ಮಜ್ಞನಾಗಿದ್ದು ಮರುತ್ತತ್ವದಿಂದ ಕೀರ್ತಿಶಾಲಿಯಾಗಿರುತ್ತಿ. ನೀನು ಅಪೇಕ್ಷಿಸುತ್ತಿರುವಂತೆ ಆತ್ಮಜ್ಞಾನವು ನಿನಗೆ ಲಭಿಸುತ್ತದೆ. ಇದು ನಿನ್ನದೇ ಆತ್ಮನಾಗಿರುತ್ತೆ." ಆಗ ದೊರೆಯು ಹೇಳುತ್ತಾನೆ." "ಅದು ಯಾವುದು ಭಗವಾನರೇ ? ತರುವಾಯ ಅವನಿಗೆ ಹೇಳುತ್ತಾರೆ:

ಅಥವಾ ಏಷಉಚ್ಛ್ವಾಸಾವಿಷ್ಟಂಭನೇನೋರ್ಧ್ವಮುತ್ಕ್ರಾಂತೋವ್ಯಯಮಾನೋಽವ್ಯಯಮಾನಸ್ತಮಃ ಪ್ರಣುದತ್ಯೇಷಆತ್ಮಾ । ಇತ್ಯಾಹಭಗವಾರ್ನ್ಮೈತ್ರಿಃ। ಇತ್ಯೇವಂಹ್ಯಾಹ॥ ಅಥಯಏಷಸಂಪ್ರಸಾದೋಽಸ್ಮಾಚ್ಛರೀರಾನ್ ಸಮುತ್ಥಾಯ

ಪರಂಜ್ಯೋತಿರೂಪಸಂಪದ್ಯಸ್ವೇನರೂಪೇಣಾಭಿನಿಷ್ಪದ್ಯತಾ ಇತಿ । ಏಷಆತ್ಮೇತಿ ಹೋವಾಚ । ಏತದಮೃತಮಭಯಮೇತದ್ಬ್ರಹ್ಮೇತಿ ||೨||

"ಯಾರು ಉಚ್ಛ್ವಾಸವನ್ನು ನಿಗ್ರಹಿಸಿಕೊಂಡು ಊರ್ಧ್ವಲೋಕಕ್ಕೆ ಹೋಗಿ ಚಲಿಸುತ್ತಿದ್ದರೂ ಅಚಲರಾಗಿ, ತಮಸ್ಸನ್ನು ಕಳೆದುಕೊಂಡು ಇರುವರೋ ಅವರೇ ಆತ್ಮರು" ಎಂದು ಮೈತ್ರಿ ಭಗವಾನರು ಹೇಳುತ್ತಾರೆ. ಆದ್ದರಿಂದ ಸ್ವಚ್ಛನೂ, "ಪ್ರಶಾಂತನೂ, ಆದ ಯಾವನು ತನ್ನ ದೇಹದಿಂದ ಊರ್ಧ್ವಮುಖನಾಗಿ ಪರಂಜ್ಯೋತಿಯನ್ನು ಸೇರಿ ತನ್ನ ಸ್ವರೂಪದಿಂದ ಪ್ರಕಾಶಿಸುತ್ತಾನೋ ಅವನೇ ಆತ್ಮ" ಎಂದು ಹೇಳಿ "ಅವನು ಅಮೃತನೂ, ಅಭಯನೂ, ಆದ ಬ್ರಹ್ಮನಾಗಿರುತ್ತಾನೆ'' ಎಂದರು.

ಅಥಖಲ್ವಿಯಂಬ್ರಹ್ಮವಿದ್ಯಾಸರ್ವೋಪನಿಷದದ್ವಿದ್ಯಾವಾರಾಜನ್ । ಅಸ್ಮಾಕಂ ಭಗವತಾಮೈತ್ರಿಣಾಽಽಖ್ಯಾತಾ । ಅಹಂತೇಕಥಯಿಷ್ಯಾಮೀತಿ । ಅಥಾಪಹತ ಪಾಪ್ಮಾನಸ್ತಿಗ್ಮತೇಜಸಾಂ ಊರ್ಧ್ವರೇತಸೋವಾಲಖಿಲ್ಯಾ ಇತಿ ಶ್ರೂಯನ್ತೇ । ಅಥಖಿತುಂ ಪ್ರಜಾಪತಿಮಬ್ರುವನ್ । ಭಗವಾಂಶಕಟಮಿವಾಚೇತನಮಿದಂ ಶರೀರಂ । ಕಸ್ಯೈ ತಿಷಖಲ್ವೀದೃಶೋಮಹಿಮಾಽತೀಂದ್ರಿಯಭೂತಸ್ಯಯೇನೈತ ದ್ವಿಧಮೇತಚ್ಚೇತನವತ್ ಪ್ರತಿಷ್ಠಾಪಿತಂ । ಪ್ರಚೋದಯಿತಾವಾಽಸ್ಯಯದ್ಭಗ ವನ್ವೇತ್ಸಿತದಸ್ಮಾಕಂ ಬ್ರೂಹೀತಿ । ತಾನ್‌ಹೋವಾಚೇತಿ ||೩||

''ಓ ದೊರೆಯೇ ಇದೇ ಬ್ರಹ್ಮವಿದ್ಯೆಯು, ಭಗವಂತನಾದ ಮೈತ್ರಿಯು ಹೇಳಿರುವಂತೆ ಎಲ್ಲಾ ಉಪನಿಷತ್ತುಗಳಲ್ಲೂ ಅಡಕವಾಗಿರುವುದು ಈ ಬ್ರಹ್ಮವಿದ್ಯೆಯೇ. ಅದನ್ನು ನಾನು ನಿನಗೆ ತಿಳಿಸುತ್ತೇನೆ. ಹಿಂದೆ ವಾಲಖಿಲ್ಯರೆಂಬುವವರು ಊರ್ಧ್ವರೇತಸ್ಕ ರಾಗಿದ್ದು ಸರ್ವಪಾಪಗಳಿಂದಲೂ ವಿಮುಕ್ತರಾಗಿ ಪ್ರಖ್ಯಾತರಾಗಿದ್ದರೆಂದು ನಾವು ಕೇಳುತ್ತೇವೆ. ಅವರು ಖಿತು ಪ್ರಜಾಪತಿಯನ್ನು ಕುರಿತು "ಓ ಭಗವಂತನೇ ಈ ಶರೀರವು ಬುದ್ಧಿ ಇಲ್ಲದೆ ಚಲಿಸುವ ಒಂದು ಗಾಡಿಯಂತಿದೆ, ಇದು ಯಾವ ಅತೀಂದ್ರಿಯ ಭೂತಗಳಿಗೆ ಇಂತಹ ಅಚೇತವಾದ ಮತ್ತು ಅಪಾರವಾದ ಜ್ಞಾನಕ್ಕೆ ಕಾರಣವಾಯಿತು? ಮತ್ತು ಅದರ ಕರ್ತೃವು ಯಾರು? ಇದನ್ನು ತಾವು ಅರಿತಿರುವಂತೆ ನಮಗೆ ತಿಳಿಯಹೇಳಿ. ಎನ್ನಲು ಅವರು ಅವರಿಗೆ ಹೇಳುತ್ತಾರೆ :

ಯೋಹಖಲುವಾಪ್ಯೋಪರಿಸ್ಥಃ ಶ್ರೂಯತೇಗುಣೇಷ್ವಿವೋರ್ಧ್ವರೇತಸಃ । ಸವಾ ಏಷಶುದ್ಧಃ, ಪೂತಃ, ಶೂನ್ಯಃ, ಶಾಂತೋ, ಽಪ್ರಾಣೋ, ನಿರಾತ್ಮಾ, ಽನನ್ತೋ,

ऽಕ್ಷಯ್ಯಃ, ಸ್ಥಿರಃ, ಶಾಶ್ವತೋಽಜಃ, ಸ್ವತಂತ್ರಃ ಸ್ವೇಮಹಿಮ್ನಿತಿಷ್ಠತಿ । ಅನೇ ನೇದಂಶರೀರಂ ಚೇತನವತ್ ಪ್ರತಿಷ್ಠಾಪಿತಂ । ಪ್ರಚೋದಾಯಿತಾವ್ಯೈಷೋಽಸ್ಯ ಸ್ಯೇತಿತೇಹೋಚುರ್ಭಗವನ್ ಕಥಮನೇನೇದೃಶೇನಾಣಿಷ್ಠೇನ್ಯೈತದ್ವಿಧಮಿದಂ ಚೇತನವತ್ ಪ್ರತಿಷ್ಠಾಪಿತಂ ಪ್ರಚೋದಯಿತಾವ್ಯೈಷೋಽಸ್ಯಕಥಮಿತಿ । ತಾ ಹೋವಾಚ ||೪||

ಯಾರು ಊರ್ಧ್ವರೇತಸ್ಕರಾಗಿದ್ದು, ಸರ್ವಗುಣಗಳಿಂದ ಬಾಹಿರರಾಗಿ, ಒಬ್ಬಂಟಿಗರಾಗಿ, ದೃಢವಾಗಿ ನಿಂತಿರುತ್ತಾರೋ ಅವರು ಪರಿಶುದ್ಧರು, ಪವಿತ್ರರು, ಪೂತರು, ಶೂನ್ಯರು, ಶಾಂತರು, ಅಪ್ರಾಣರು, ನಿರಾತ್ಮರು, ಅನಂತರು, ಅಕ್ಷಯರು, ಸ್ಥಿರರು, ಶಾಶ್ವತರು, ಅಜರು, ಸ್ವತಂತ್ರರು, ಅವರು ತಮ್ಮ ಮಹಿಮೆಯಲ್ಲಿಯೇ ಬಂಧಿತರು, ಅವರಿಂದಲೇ ಈ ದೇಹವು ರಚಿತವಾಗಿದ್ದು ಜ್ಞಾನಧಾರಿಯಾಗಿದೆ. ಮತ್ತು ಅದೇ ಚಾಲಕ ಶಕ್ತಿಯೂ ಆಗಿದೆ." ಎಂದು ಹೇಳಲು ಅವರು ಕೇಳುತ್ತಾರೆ "ಹೇ ಭಗವಂತರೇ ಹೇಗೆ ಈ ತರಹದ ಈ ಆಕಾರರಹಿತವಾದ ಸ್ಥಿತಿಯಲ್ಲಿ ಜ್ಞಾನಸಂಪಾದನೆಯ ಮಾರ್ಗವು ಅಳವಡಿಸಿಕೊಂಡಿದೆ ಮತ್ತು ಇದು ಹೇಗಿದೆ ಮತ್ತು ಇದರ ಕಾರಣರಾರು?" ತರುವಾಯ ಅವರು ಹೇಳುತ್ತಾರೆ!

ಸವಾಏಷಸೂಕ್ಷ್ಮೋಽಗ್ರಾಹ್ಯೋಽದೃಶ್ಯಃ ಪುರುಷಸಂಜ್ಞೋಽಬುದ್ಧಿಪೂರ್ವಮಿಹೈವಾಽಽವರ್ತತೇಽಂಶೇನೇತಿ । ಸುಪ್ತಸ್ಯೇವಾಬುದ್ಧಿಪೂರ್ವಂವಿವೇಧಾಏವಮಿತಿ । ಅಥಯೋಽಖಲುವಾವ್ಯೈತಸ್ಯಸೋಽಂಶೋಽಯಂಚೇತಮಾತ್ರಃ ಪ್ರತಿಪುರುಷಂ ಕ್ಷೇತ್ರಜ್ಞಂಸಂಕಲ್ಪಾಧ್ಯವಸಾಯಾಭಿಮಾನಲಿಂಗಃ ಪ್ರಜಾಪತಿರ್ವಿಶ್ವಾಖ್ಯಃ । ಚೇತನೇನೇದಂಶರೀರಂ ಚೇತನವತ್ ಪ್ರತಿಷ್ಠಾಪಿತಂ ಪ್ರಚೋದಯಿತಾವ್ಯೈಷೋಽಸ್ಯಸ್ಯೇತಿ । ತೇಹೋಚುಃ–ಭಗವನ್ಯದ್ಯನೇನೇದೃಶೇನಾವಿಷ್ಠೇನ್ಯೈತದ್ವಿಧಮಿದಂಚೇತನವತ್ ಪ್ರತಿಷ್ಠಾಪಿತಂ ಪ್ರಚೋದಯಿತ್ವಾವ್ಯೈಷೋಽಸ್ಯಕಥಮಿತಿ । ತಾನ್ಹೋವಾಚೇತಿ ||೫||

"ಆ ಸೂಕ್ಷ್ಮವಾದ, ಅಗ್ರಾಹ್ಯವಾದ, ಅದೃಶ್ಯವಾದ, ಪುರುಷನಾಮದ ಅವನು ಈ ದೇಹದಲ್ಲಿ ಅವನ ಒಂದು ಭಾಗದೊಡನೆ ಸುಪ್ತಬುದ್ಧಿಯಿಂದ ಒಬ್ಬ ಮನುಷ್ಯನು ನಿದ್ರಾವಸ್ಥೆಯಲ್ಲಿರುವಾಗ ಅವನ ಸ್ವಂತಪ್ರಜ್ಞೆಯಿಂದ ಎಚ್ಚರಗೊಳ್ಳುವಂತೆ ವಾಸಿಸುತ್ತಿದ್ದಾನೆ. ಈಗ ಖಚಿತವಾಗಿ ಪ್ರತಿಯೊಬ್ಬರಲ್ಲೂ ಅಡಗಿರುವ ಪ್ರಜ್ಞೆಯಂತೆ ಅವನ ಆ ಭಾಗವೂ ಪ್ರಾಣನೇ ಆಗಿರುತ್ತದೆ. ಇದಕ್ಕೆ ಯೋಚಿತ ನಿಯಮಗಳ ಗುರ್ತೂ, ಧೃಡಮನಸ್ಸೂ, ಆತ್ಮಾಭಿಮಾನವೂ ಇದ್ದು ವಿಶ್ವ ಎಂಬ ಹೆಸರಿನ ಪ್ರಜಾ

ಪತಿಯಾಗಿದ್ದಾನೆ. ಅವನಿಂದ ಚೈತನ್ಯರೂಪನಾದ ಶರೀರವು ಜ್ಞಾನದಿಂದ ಆವರಿಸಿಕೊಂಡ ಗೂಡಾಗಿವೆ, ಅಥವಾ ಬೇರೊಂದು ರೀತಿಯಲ್ಲಿ ಹೇಳುವುದಾದರೆ ಇದೇ ಅದರ ಕಾರಣನು." ಆಗ ಅವರು ಹೇಳುತ್ತಾರೆ "ಹೇ ಭಗವಂತನೇ ಈ ರೀತಿಯಾದ ಆಕಾಂಕ್ಷೆಗಳಿಲ್ಲದ ಒಂದು ಪ್ರತಿಷ್ಠಾಪನೆಯು ಜ್ಞಾನದಿಂದ ಆವೃತವಾಗಿ ರೂಪಗೊಂಡಿದ್ದರೂ ಅದೇ ಹೇಗೆ ಅದರ ಪ್ರಚೋದಕವಾಯಿತು" ? ಎನ್ನಲು ಅವರಿಗೆ ಹೇಳುತ್ತಾನೆ.

ಪ್ರಜಾಪತಿರ್ವಾ ಏಕೋಽಗ್ರೇಽತಿಷ್ಠತ್ । ಸನಾರಮತೈಕಃ । ಸೋತ್ಮಾನಮಭಿಧ್ಯಾತ್ವಾ ಬಹ್ವೀಃ ಪ್ರಜಾ ಅಸೃಜತಾ । ತಾ ಅಸ್ಮೇವಾ ಪ್ರಬುದ್ಧಾ ಅಪ್ರಾಣಾಃ ಸ್ಥಾಣುರಿವತಿಷ್ಠಮಾನಾ ಅಪಶ್ಯತ್ । ಸನಾರಮತ । ಸೋಽಮನ್ಯತ-ಏತಾಸಾಂ ಪ್ರತಿಬೋಧನಾಯಾಭ್ಯಂತರಂ ವಿಶಾನೀತಿ । ಸವಾಯುರಿವಾತ್ಮಾನಂ ಕೃತ್ವಾಽಭ್ಯಂತರಂ ಪ್ರಾವಿಶತ್ । ಸಏಕೋನಾಶಕತ್ । ಸಂಪಂಚಧಾಽಽತ್ಮಾನಂ ವಿಭಜ್ಯೋಚ್ಯತೇಯಃ ಪ್ರಾಣೋಽಪಾನಃ ಸಮಾನ ಉದಾನೋ ವ್ಯಾನ ಇತಿ । ಅಥಾಯಂ ಊರ್ಧ್ವ ಉತ್ಕ್ರಾಮತ್ಯೇಷವಾವ ಸಪ್ರಾಣಃ । ಅಥಯೋಽಯಮವಾಂ ಸಂಕ್ರಾಮತ್ಯೇಷವಾವ ಸೋಽಪಾನಃ । ಅಥಏನಸ್ವೈತಾಽನುಗ್ರಹೀತೇತ್ಯೇಷ ವಾವ ಸವ್ಯಾನಃ । ಅಥಯೋಽಯಂಸ್ಥವಿಷ್ಠೋಧಾತುರನ್ನಸ್ಯಾಪಾನೇ ಪ್ರಾಪ ಯತ್ಯಣಿಷ್ಠೋವಾಽಂಗೇಽಂಗೇ ಸಮಾನತ್ಯೇಷವಾವ ಸಮಾನಸಂಜ್ಞಃ । ಉತ್ತರಂ ವ್ಯಾನಸ್ಯ ರೂಪಂಚೈತೇಷಾ ಮನ್ತರಾ ಪ್ರಸೂತಿರೇವೋ ದಾನಸ್ಯ । ಅಥಯೋಽಯಂ ಪೀತಾ-ಶಿತ ಮುದ್ಗಿರತಿ ನಿಗರತೀತಿ ವಾವೈಷಸ ಉದಾನಃ । ಅಥೋಪಾಂಶುರನ್ತರ್ಯಾ ಮಮಭಿ ಭವತ್ಯನ್ತರ್ಯಾಮ ಉಪಾಂಶುಚ । ಏತಯೋರನ್ತರಾದೇ ವ್ಯೌಷ್ಣ್ಯಂಪ್ರಾಸುವತ್ । ಯದೌಷ್ಣ್ಯಂ ಸಪುರುಷಃ । ಅಥಯಃ ಪುರುಷಃಸೋಽಗ್ನಿರ್ವೈಶ್ವಾನರಃ । ಅನ್ಯತ್ರಾಪ್ಯುಕ್ತಂ। ಅಯಮಗ್ನಿರ್ವೈಶ್ವಾನರೋಯೋಽಯಮನ್ತಃ ಪುರುಷೇ । ಯೇನೇದಮನ್ನಂ ಪಚ್ಯತೇ ಯದಿದಮದ್ಯತೇ ತಸ್ಯೈಷ ಘೋಷೋ ಭವತಿಯಮೇ ತತ್ಕರ್ಣಾವಪಿಧಾಯ ಶೃಣೋತಿ । ಸವಾಏಷ ಪಂಚಧಾಽಽತ್ಮಾನಂ ವಿಭಜ್ಯ ನಿಹಿತೋ ಗುಹಾಯಾಂ । ಮನೋಮಯಃ ಪ್ರಾಣಶರೀರೋ ಭಾರೂಪಃ । ಸತ್ಯಸಂಕಲ್ಪ ಆಕಾಶಾತ್ಮೇತಿ । ಸವಾಏಷೋಽಸ್ಮಾತ್ ಧೃದಂತರಾದ ಕೃತಾರ್ಥೋಽಮನ್ಯತಾರ್ಥಾನಶ್ನಾನೀತಿ । ಅತಃಖಾನೀಮಾನಿಭಿತ್ವೋದಿತಃ ಪಂಚಭೀರಶ್ಮಿಭಿರ್ವಿ

ಷಯಾನತ್ತಿ ತೀತಿ । ಬುದ್ಧೀಂದ್ರಿಯಾಣಿ ಯಾನೀಮಾನ್ಯೇತಾನ್ಯಸ್ಯರಶ್ಮಯಃ । ಕರ್ಮೇಂದ್ರಿಯಾಣ್ಯಸ್ಯಹಯಾಃ । ರಥಃ ಶರೀರಂ ಮನೋನಿಯನ್ತಾ ಪ್ರಕೃತಿ ಮಯೋಽಸ್ಯಪ್ರತೋದಃ । ಅನೇನ ಖಲ್ವೀರಿತಂ ಪರಿಭ್ರಮತೀದಂಶರೀರಂ ಚಕ್ರಮಿವ ಮೃತ್ಪಚೇನ । ಇದಂ ಶರೀರಂ ಚೇತನವತ್ ಪ್ರತಿಷ್ಠಾಪಿತಂ ಪ್ರಚೋದಯಿತಾವೈಷೋಽಪ್ಯಸ್ಯೇತಿ ||೬||

ಪ್ರಾರಂಭದಲ್ಲಿ ಪ್ರಜಾಪತಿಯು ಒಬ್ಬನೇ ಇದ್ದನು. ಒಬ್ಬಂಟಿಗನಾಗಿದ್ದುದರಿಂದ ಅವನಿಗೆ ಯಾವ ಸೌಖ್ಯವೂ ಇರಲಿಲ್ಲ. ತನ್ನ ಮೇಲೆ ತಾನೇ ಉಪಾಸಿಸಿಕೊಂಡು ಅನೇಕ ಜೀವರಾಸಿಗಳನ್ನು ಸೃಷ್ಟಿಸಿದನು. ಆಗ ಅವು ಕಲ್ಲುಗಳಂತೆ ನಿಂತಿದ್ದುವು. ಅವುಗಳಿಗೆ ಯಾವ ತಿಳುವಳಿಕೆಯೂ ಇರಲಿಲ್ಲ. ಪ್ರಾಣವೂ ಇರಲಿಲ್ಲ. ಒಂದು ಕಂಭದಂತೆ ನಿಂತಿದ್ದವು. ಅವುಗಳಲ್ಲಿ ನಾನು ಪ್ರವೇಶಿಸಿ ಅವನ್ನು ಎಚ್ಚರಗೊಳ್ಳು ವಂತೆ ಮಾಡುವೆನು ಎಂದುಕೊಂಡು ತಾನು ಗಾಳಿಯ ರೂಪದಿಂದ ಅವುಗಳ ಒಳಗೆ ಪ್ರವೇಶಿಸಲು ನೋಡಿದನು. ಆದರೆ ಒಬ್ಬಂಟಿಗನಾಗಿದ್ದುದರಿಂದ ಹಾಗೆ ಮಾಡ ಲಾಗಲಿಲ್ಲ. ಆಗ ತನ್ನನ್ನು ಐದು ಭಾಗಗಳಾಗಿ ಮಾಡಿಕೊಂಡು ಪ್ರಾಣ, ಅಪಾನ ಸಮಾನ, ಉದಾನ ಮತ್ತು ವ್ಯಾನನೆಂದಾದನು. ಉಚ್ಛ್ವಾಸವೇ ಪ್ರಾಣವೆಂದಾ ಯಿತು, ನಿಃಶ್ವಾಸವೇ ಅಪಾನವೆಂದಾಯಿತು. ಇವೆರಡೂ ಯಾವುದರ ಮೇಲೆ ಅವಲಂಬಿಸಿತೋ ಅದು ವ್ಯಾನವಾಯಿತು. ಅಪಾನಕ್ಕೆ ಅನ್ನರಸವನ್ನು ಕೊಂಡೊಯ್ದು ಪ್ರತಿಯೊಂದು ಅಂಗಾಂಗಗಳಿಗೂ ಸೂಕ್ಷ್ಮಾಣುಗಳನ್ನು ಹಂಚುತ್ತಿರುವ ಪ್ರಾಣವು ಸಮಾನವೆಂದಾಯಿತು. ವ್ಯಾನಕ್ಕಿಂತ ಉಚ್ಚ ವರ್ಗಕ್ಕೆ ಸೇರಿದ ಮತ್ತು ಅವುಗಳ ಮಧ್ಯೆ ಉದಾನವು ಉತ್ಪತ್ತಿಯಾಯಿತು. ಜೀವಿಗಳು ಸೇವಿಸುವ ಆಹಾರ ಮತ್ತು ಪಾನೀಯಗಳನ್ನು ಮೇಲ್ಗಡೆಗಾಗಲೀ, ಕೆಳಗಡೆಗಾಗಲೀ ಸಾಗಿಸುವ ವಾಯುವು ಉದಾನವಾಯಿತು. ಈಗ ಉಪಾಂಶು ಘಟವು ಅಂತರ್ಯಾಮಿ ಘಟಕ್ಕೆ ಪರಿಪೂರ್ಣ ವಾಗಿಯೂ, ಅಂತರ್ಯಾಮಿ ಘಟವು ಉಪಾಂಶು ಘಟಕ್ಕೆ ಪರಿಪೂರ್ಣವಾಗಿಯೂ, ಇವೆರಡರ ಮಧ್ಯೆ ಉಷ್ಣವು ಉತ್ಪತ್ತಿಯಾಯಿತು. ಆ ಉಷ್ಣವೇ ಪುರುಷನಾಗಿಯೂ ಆ ಪುರುಷನೇ ವೈಶ್ವಾನರನೆಂಬ ಅಗ್ನಿಯೂ ಆಯಿತು. ಬೇರೊಂದು ಕಡೆ ಹೀಗೆ ಹೇಳಲಾಗಿದೆ. ಈ ರೀತಿಯಾಗಿ ಎಲ್ಲ ಕಡೆಗಳಲ್ಲೂ ಜೀವಗಳ ದೇಹದಲ್ಲಿ ಪ್ರವೇಶಿಸುವ ಆಹಾರವನ್ನು ಪಚನಮಾಡುವ ಮತ್ತು ಮಾನವನಲ್ಲಿ ಅಂತರ್ಯಾಮಿಯಾಗಿರುವ ಈ ಅಗ್ನಿಯ ಮೇಲೆ ವೈಶ್ವಾನರನೆಂದು ಕರೆಯಲ್ಪಟ್ಟಿತು. ಕಣ್ಣನ್ನು ಮುಚ್ಚಿಕೊಂಡಲ್ಲಿ ಕೇಳುವ ಒಂದು ವಿಧವಾದ ಶಬ್ದವೇ ವೈಶ್ವಾನರನದು. ಮಾನವ ದೇಹದಲ್ಲಿನ ಪ್ರಾಣವು ಹೋಗುವ ಕಾಲದಲ್ಲಿ ಈ ಶಬ್ದವು ಕೇಳಬರುವುದಿಲ್ಲ. ಆಗ ಅವನು

ತನ್ನನ್ನು ಐದು ವಿಭಾಗಗಳಾಗಿ ಮಾಡಿಕೊಂಡು ಒಂದು ಗುಪ್ತಸ್ಥಳದಲ್ಲಿ ಅಡಗಿರುತ್ತಾನೆ, ಯಾರ ದೇಹದಲ್ಲಿ ಮನಸ್ಸು ಸೇರಿರುತ್ತದೆಯೋ, ಯಾರ ದೇಹವು ಪ್ರಾಣವೋ, ಯಾರ ಆಕಾರವು ಜ್ಯೋತಿಯೋ, ಯಾರ ಧ್ಯೇಯವು ಸತ್ಯವೋ, ಯಾರ ಆತ್ಮವು ಆಕಾಶವೋ ಅವನು ಕೃತಾರ್ಥನಾಗದೆ, ಹೃದಯದೊಳಗೆ ನಿವಸಿತನಾಗಿದ್ದು ತನ್ನಲ್ಲಿ ತಾನು ಯೋಚಿಸುತ ತಾನು ಸುಖಪಡಬೇಕೆಂದುಕೊಳ್ಳುತ್ತಾನೆ. ಆಗ ದೇಹದಲ್ಲಿರುವ ಪಂಚದ್ವಾರಗಳನ್ನು ಭೇದಿಸಿ ತನ್ನಲ್ಲಿರುವ ಪಂಚ ಕಡಿವಾಣಗಳಿಂದ ಇಂದ್ರಿಯ ಸುಖಗಳನ್ನು ಅನುಭವಿಸುತ್ತಾನೆ. ಈ ಕಡಿವಾಣಗಳೇ ಜ್ಞಾನೇಂದ್ರಿಯಗಳು. ಅವನ ಕುದುರೆಗಳು ಕರ್ಮೇಂದ್ರಿಯಗಳು, ಅವನ ರಥವು ದೇಹ, ಸಾರಥಿಯು ಮನಸ್ಸು, ಚಾಟಿಯು ಮಾನವನ ಗುಣ, ಅವನಿಂದ ಈ ರೀತಿಯಾಗಿ ದೇಹವು ನಡೆಸಲ್ಪಟ್ಟು ಈ ದೇಹವು ಕುಂಬಾರನ ಚಕ್ರದಂತೆ ಸುತ್ತಲೂ ತಿರುಗುತ್ತಿರುತ್ತದೆ. ಆದ್ದರಿಂದ ಈ ಶರೀರವು ಚೇತನದಿಂದ ಪ್ರತಿಷ್ಠಾಪಿತವಾಗಿದೆ, ಈತನೇ ಅದರ ಚಾಲಕನೂ ಕೂಡ.

ಸವಾ ಏಷ ಆತ್ಮೇ ಹೋವಾಚ ಕವಯಃ ಸಿತಾಸಿತೈಃ ಕರ್ಮಫಲೈ ರನಭಿಭೂತ ಇವ ಪ್ರತಿ ಶರೀರೇಷು ಚರತಿ। ಅವ್ಯಕ್ತತ್ವಾತ್ ಸೌಕ್ಷ್ಮ್ಯಾದ ದೃಶ್ಯತ್ವಾದಗ್ರಾಹ್ಯತ್ವಾನ್ನಿರ್ಮಮತ್ವಾಚ್ಚಾನವಸ್ಥೋಽಸತಿ ಕರ್ತಾಽಕರ್ತೇವಾವಸ್ಥಃ। ಸವಾ ಏಷ ಶುದ್ಧಃ ಸ್ಥಿರೋಽಚಲಶ್ಚಾಲೇಪ್ಯೋಽವ್ಯಗ್ರೋ ನಿಸ್ಪೃಹಾಂ। ಪ್ರೇಕ್ಷಕವದವಸ್ಥಿತಃ ಸ್ವಸ್ಥಶ್ಚ। ಋತಭುಗ್ಗುಣಮಯೇನ ಪಟೇನಾಽಽತ್ಮಾನ ಮಸ್ತರ್ಧಾಯ ಯಾವ ಸ್ಥಿತಾ ಇತ್ಯಾವ ಸ್ಥಿತಾ ಇತಿ ॥೭॥

ಇನ್ನೂ ಈ ಆತ್ಮನನ್ನು ನೋಡಿದವರೆಲ್ಲಾ ಅವನು ಲೋಕದಲ್ಲಿರುವ ಪ್ರತಿಯೊಂದು ಶರೀರದಲ್ಲೂ ಇದ್ದು ಬಂದವರಿಂದ ಇನ್ನೊಂದಕ್ಕೆ ಅಲೆಯುತ್ತ ಆ ದೇಹದ ಕರ್ಮ ಫಲಗಳಿಗೂ ತನಗೂ ಯಾವ ಸಂಬಂಧವನ್ನೂ ಕಲ್ಪಿಸಿಕೊಳ್ಳದೆ ಇರುತ್ತದೆಂದು ಹೇಳುತ್ತಾರೆ. ಇದರಿಂದಲೇ ಆತ್ಮನು ಅವ್ಯಕ್ತನೂ, ಸೂಕ್ಷ್ಮನೂ, ಅದೃಶ್ಯನೂ ಅಗ್ರಾಹ್ಯನೂ, ಸ್ವತಂತ್ರನೂ ಆಗಿರುತ್ತಾನೆ. ಆತ್ಮನು ಯಾವ ಸಂಬಂಧಕ್ಕೂ ಒಳಗಾಗದೆ ಕರ್ತೃವಿನಂತೆ ಕಂಡು ಬಂದರೂ ನಿಜವಾಗಿಯೂ ಅವನು ಕರ್ತೃವಲ್ಲ, ಅವನು ಪರಿಶುದ್ಧನೂ, ಸ್ಥಿರನೂ, ಅಚಲನೂ, ಕಳಂಕರಹಿತನೂ, ಚಿಂತಾಕವಿಲ್ಲದವನೂ ಅಕಾಮಿಯೂ ಆಗಿದ್ದು ಒಬ್ಬ ನೋಟಕನ ಹಾಗೆ ನಿಂತಿರುತ್ತಾ ಅವನ ಆತ್ಮನಲ್ಲಿಯೇ ಲೀನನಾಗಿರುತ್ತಾನೆ. ನಿಯಮಿತ ಧಾರ್ಮಿಕ ಕಾರ್ಯಗಳನ್ನೂ ನೋಡಿ ಸಂತೋಷಿಸುತ್ತ ಗುಣಗಳೆಂಬ ತೆರೆಯನ್ನು ತನ್ನ ಮೇಲೆ ಮುಚ್ಚಿಕೊಂಡು ಸ್ಥಿರನಾಗಿರುತ್ತಾನೆ. ಅವನು ಸ್ಥಿರನಾಗಿರುತ್ತಾನೆ.

# ಮೂರನೆ ಅಧ್ಯಾಯ

ತೇಹೋಚುರ್ಭಗವಾನ್ ಯದ್ಯೈವಮಸ್ಯಾಽಽತ್ಮನೋ ಮಹಿಮಾನಂ ಸೂಚಯ
ಸೀತ್ಯಾನ್ಯೋಽವಾಪರಃ ಕೋಽಯಮಾತ್ಮಾಖ್ಯೋಽಯೋಽಯಗ್ಂ ಸಿತಾಸಿತೈಃ
ಕರ್ಮಫಲೈರಭಿಭೂಯಮಾನಃ ಸದಸದ್ಯೋನಿ ಮಾಪದ್ಯತಾಇತಿ । ಅವಾ
ಚ್ಯೋರ್ಧ್ವಾವಗತಿದ್ವಂದ್ವೈರಭಿಭೂಯಮಾನಃ ಪರಿಭ್ರಮತಿ ॥೧॥

ಆಗ ವಾಲ ಖಿಲ್ಯರು ಪ್ರಜಾ ಪ್ರತಿಕ್ರತುವಿಗೆ ಹೇಳುತ್ತಾರೆ. ಭಗವಾನ್ ತಾವು ಆತ್ಮನ ಮಹತ್ವನ್ನು ಈ ರೀತಿಯಾಗಿ ವಿವರಿಸಿದಲ್ಲಿ ಅಲ್ಲಿ ಆತ್ಮನೆಂದೇ ಕರೆಸಿಕೊಳ್ಳುವ ಬೇರೊಬ್ಬನಿದ್ದಾನೆ. ಅವನು ಜೀವಗಳು ಎಸಗಬಹುದಾದ ಪುಣ್ಯ ಅಥವಾ ಪಾಪ ಕರ್ಮಗಳಿಂದ ಬಂಧಿತರಾಗಿ ದೇವರಲ್ಲಿ ಐಕ್ಯವಾಗುವ ಅಥವಾ ಬೇರೊಂದು ಯೋನಿಯನ್ನು ಪ್ರವೇಶಿಸುವ ತನ್ನ ಕಾರ್ಯವು ಊರ್ಧ್ವಮುಖವಾಗಿಯೋ ಅಧೋಮುಖವಾಗಿಯೋ ನಿರ್ವಹಿಸುತ್ತ ಸುಖ ಅಥವಾ ದುಃಖಗಳೆಂಬ ದ್ವಂದ್ವಗುಣಗಳಿಂದ ಬಾಧಿತನಾಗಿ ಅಲೆದಾಡುತ್ತಿರುತ್ತಾನೆ.

ಅಸ್ತಿಖಲ್ವನ್ಯೋಽಪರೋಭೂತಾತ್ಮಾಖ್ಯೋಽಯೋಽಯಂಸಿತಾಸಿತೈಃ ಕರ್ಮ
ಫಲೈರಭಿಭೂಯಮಾನಃಸದಸದ್ಯೋನಿಮಾಪದ್ಯತಾಇತಿ। ಅವಾಂಚ್ಯೋರ್ಧ್ವಾ
ವಾಗತಿರಭಿಭೂಯಮಾನಃ ಪರಿಭ್ರಮತೀತಿ । ಅಸ್ಯೋಪವ್ಯಾಖ್ಯಾನಂ–ಪಂಚತ
ನ್ಮಾತ್ರಾಭೂತ ಶಬ್ದೇನೋಚ್ಯನ್ತೇ । ಅಥಪಂಚಮಹಾಭೂತಾನಿ ಭೂತಶಬ್ದೇ
ನೋಚ್ಯನ್ತೇ । ಅಥತೇಷಾಯತ್ಸಮುದಯಂ ತಚ್ಛರೀರ ಮಿತ್ಯುಕ್ತಂ । ಅಥ
ಯೋಖಲುವಾವ ಶರೀರಇತ್ಯುಕ್ತಂ ಸಭೂತಾತ್ಮೇತ್ಯುಕ್ತಂ । ಅಥಾಮೃತೋಽ
ಸ್ಯಾಽಽತ್ಮಾವಿಂದುರಿವ ಪುಷ್ಕರಾಇತಿ । ಸವಾಏಷೋಽಭಿಭೂತಃ ಪ್ರಾಕೃತೈಗು
ಣೌರಿತಿ । ಅಥೋಽಭಿಭೂತತ್ವಾತ್ ಸಮ್ಮೂಢತ್ವಂ ಪ್ರಯಾತಃ ॥ ಸಮ್ಮೂಢ
ತ್ವಾದಾತ್ಮಸ್ಥಂಪ್ರಭುಂ ಭಗವನ್ತಂಕಾರಯಿಕಾರಂನಾಪಶ್ಯತ್ । ಗುಣೌಘೈರು
ಹ್ಯಮಾನಃ ಕಲುಷೀಕೃತಶ್ಚಾಸ್ಥಿರಶ್ಚಂಚಲೋಲುಪ್ಯಮಾನಃ ಸ್ಪೃಹೋವ್ಯಗ್ರ
ಶ್ಚಾಭಿಮಾನಿತ್ವಂ ಪ್ರಯಾತಇತಿ । ಅಹಂಸೋಮಮೇದಮಿತ್ಯೇವಂ ಮನ್ಯಮಾ
ನೋನಿಬಧ್ನಾತ್ಯಾತ್ಮನಾಽಽತ್ಮನಂ ಜಾಲೇನೇವಖಚರಃ ಕೃತಸ್ಯಾನುಫಲೈರಭಿ
ಭೂಯಮಾನಃ ಸದಸದ್ಯೋನಿಮಾಪದ್ಯತಾಇತಿ । ಅವಾಂಚ್ಯೋರ್ಧ್ವಾವಾಗತಿ
ದ್ವಂದ್ವೈರಭಿಭೂಯಮಾನಃ ಪರಿಭ್ರಮತೀತಿ । ಕತಮಏಷಇತಿ । ತಾನ್
ಹೋವಾಚೇತಿ ॥೨॥

ಅಲ್ಲಿ ಪರೋಭೂತಾತ್ಮಾ ಎಂಬುದು ಇನ್ನೊಂದುಂಟು. ಯಾರು ಜೀವಿಗಳ ಪಾಪ ಪುಣ್ಯ ಕರ್ಮಗಳ ಫಲದಿಂದಾಗಿ ಒಳ್ಳೆಯ ಅಥವಾ ಕೆಟ್ಟ ಯೋನಿಯನ್ನು ಪ್ರವೇಶಿಸಿ ಊರ್ಧ್ವ ಅಥವಾ ಅಧೋಮುಖದ ಮಾರ್ಗವನ್ನನುಸರಿಸಿ ಸುಖದುಃಖಗಳೆಂಬ ದ್ವಂದ್ವಗುಣಗಳಿಂದ ಪ್ರೇರಿತವಾಗಿ ತೊಳಲುವ ಆತ್ಮವೇ ಇದು. ಅದರ ವ್ಯಾಖ್ಯಾನವು ಹೀಗಿದೆ–ಪಂಚತನ್ಮಾತ್ರಗಳಾದ ಈ ಸೂಕ್ಷ್ಮಭೂತವು ಅದರಂತೆಯೇ ಇರುವ ಪಂಚ ಮಹಾಭೂತಗಳೂ ಸೇರಿ ಶಬ್ದವೆಂದೇ ಆಗುತ್ತದೆ. ಇವೆಲ್ಲವುಗಳ ಸಂಯೋಜನೆಯೇ ದೇಹ. ದೇಹವೆಂದು ಕರೆಯಲ್ಪಡುವ ಇದನ್ನು ಭೂತಾತ್ಮನೆಂದ ಕರೆಯುತ್ತಾರೆ. ಅದರ ಅಮೃತಾತ್ಮವು ಕಮಲದ ಎಲೆಯ ಮೇಲಿನ ನೀರಿನ ಹನಿಯಂತಿರುತ್ತದೆ. ಈ ಭೂತಾತ್ಮವು ಪ್ರಾಕೃತಿಕ ಗುಣಗಳಿಂದ ಬಾಧಿಸಲ್ಪಡುತ್ತದೆ. ಹೀಗೆ ಬಾಧಿಸಲ್ಪಟ್ಟು ಅದು ಸಮ್ಮೂಢತ್ವವನ್ನು ಹೊಂದುತ್ತದೆ. ಈ ಸಮ್ಮೂಢತ್ವದಿಂದಾಗಿ ಕಾರಣಹೇತುವಾದ ಮತ್ತು ಆತ್ಮಸ್ಥನಾದ ಅಪ್ರಭುವಾದ ಭಗವಂತನನ್ನು ನೋಡಲಾಗುವುದಿಲ್ಲ. ಗುಣಗಳೆಂಬ ಈ ಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗಿ ಅಶುಚಿಯಾಗಿಯೂ, ಅಸ್ಥಿರನಾಗಿಯೂ, ಚಂಚಲನಾಗಿಯೂ, ಜಿಜ್ಞಾಸುವಾಗಿಯೂ, ಪೂರ್ಣ ಅಭಿಮಾನಿಯೂ, ಮನೋವ್ಯಗ್ರನೂ ಆಗಿ "ನಾನೇ ಅವನಾಗಿದ್ದೇನೆ" ಎಂದು ಭ್ರಮಿಸಿ ಆತ್ಮಾಭಿಮಾನಕ್ಕೆ ಒಳಗಾಗುತ್ತಾನೆ. "ಇದು ನನ್ನದು" ಎಂದು ಬಲೆಯಲ್ಲಿ ಸಿಕ್ಕಿಬಿದ್ದ ಪಕ್ಷಿಯಂತೆ ಬಂಧಿಸಲ್ಪಡುತ್ತಾನೆ. ಆಗ ತನ್ನ ಕರ್ಮಫಲವನ್ನು ಅನುಭವಿಸುತ್ತ ಕೆಟ್ಟ ಅಥವಾ ಒಳ್ಳೆಯ ಯೋನಿಯನ್ನು ಪ್ರವೇಶಿಸಿ ಅವನ ಗಮನವೂ ಊರ್ಧ್ವಮುಖವಾಗಿಯೋ ಅಧೋಮುಖವಾಗಿಯೋ ಆಗಿದ್ದು ಪುಣ್ಯ ಪಾಪಗಳೆಂಬ ದ್ವಂದ್ವಗುಣಗಳಲ್ಲಿ ಬಳಲಿ ಅಲೆದಾಡುತ್ತಾನೆ. ಇದು ಯಾವುದು ? ಎಂದು ಕೇಳಲು ಅವರಿಗೆ ಅವನು ಹೇಳುತ್ತಾನೆ.

ಅಥಾನ್ಯತ್ರಾಪ್ಯುಕ್ತಂ । ಯಃ ಕರ್ತಾಸೋಽಯಂ ವೈ ಭೂತಾತ್ಮಾ ಕರಣೈಃ ಕಾರಯಿತಾಽನ್ತಃ ಪುರುಷಃ । ಅಥ ಯಥಾಗ್ನಿನಾಽಯಸ್ಪಿಂಡೋ ವಾಽಭಿಭೂತಃ ಕರ್ತೃಭಿರ್ಹನ್ಯಮಾನೋ ನಾನಾತ್ವಮುಪೈತಿ । ಏವಂ ವಾವ ಖಲ್ವಾಸೋ ಭೂತಾತ್ಮಾಽನ್ತಃ ಪುರುಷೇಣಾಭಿಭೂತೋ ಗುಣೈರ್ಹನ್ಯಮಾನೋ ನಾನತ್ವಮುಪೈತಿ । ಏವಂ ವಾ ಖಲ್ವಸೌ ಭೂತಾತ್ಮಾಽನ್ತಃ ಪುರುಷೇಣಾಭಿಭೂತೋ ಗುಣೈರ್ಹನ್ಯಮಾನೋ ನಾತ್ವಮುಪೈತಿ । ಚತುರ್ಜಾಲಂ ಚತುರ್ದಶವಿಧಂ ಚತುರಶೀತಿಧಾ ಪರಿಣತಂ ಭೂತಗುಣಂ । ಏತದ್ವೈ ನಾನಾತ್ವಸ್ಯ ರೂಪಂ । ತಾನಿಹವಾ ಏತಾನಿ ಪುರುಷೇಣೇರಿತಾನಿ ಚಕ್ರಮಿವ ಮೃತ್ಪಚೇನೇತಿ । ಅತ ಯಥಾಽಯಃಪಿಂಡೇ ಹನ್ಯಮಾ

ಸ್ನೇನಾಗ್ನಿರಭಿಭೂಯತ್ಯೇವಂ ನಾಭಿಭೂಯತ್ಯಸೌಪುರುಷಃ ಅಭಿಭೂಯತ್ಯಯಂ ಭೂತಾತ್ಮೋಽಪ ಸಂಶ್ಲಿಷ್ಟತ್ವಾದಿತಿ ||೩||

ಅದು ಬೇರೊಂದು ಕಡೆ ಹೀಗೆ ಹೇಳಲಾಗಿದೆ. ಯಾರು ಕರ್ತನೋ ಅವನು ಭೂತಾತ್ಮ ಯಾರು ಇಂದ್ರಿಯಗಳ ಮೂಲಕ ಕಾರ್ಯಗಳನ್ನು ಮಾಡಿಸುತ್ತಾನೋ ಅವನು ಅಂತಃ ಪುರುಷ. ಹೇಗೆ ಒಂದು ಕಬ್ಬಿಣದ ಗುಂಡು ಬೆಂಕಿಯ ಸಂಪರ್ಕವನ್ನು ಹೊಂದಿ, ಕೆಲಸಗಾರನಿಂದ ಚೆನ್ನಾಗಿ ಬಡಿಯಲ್ಪಟ್ಟು ಅನೇಕ ರೂಪಗಳನ್ನು ತಳೆಯುತ್ತದೆಯೋ ಹಾಗೆ ಭೂತಾತ್ಮನು ಅಂತಃ ಪುರುಷನಿಂದ ಜಯಿಸಲ್ಪಟ್ಟು, ಗುಣಗಳಿಂದ ಬಡಿಯಲ್ಪಟ್ಟು, ಅನೇಕ ರೂಪಗಳನ್ನು ಪಡೆಯುತ್ತಾನೆ. ಆ ರೂಪ ಗಳು ಚತುರ್ಜಾಲಗಳನ್ನು ಹೊಂದಿರುತ್ತದೆ ಮತ್ತು ಹದಿನಾಲ್ಕು ವಿಧಗಳಿಂದ ಕೂಡಿದೆ. ಇವು ಎಂಭತ್ತನಾಲ್ಕು ವಿವಿಧ ಮಾರ್ಗಗಳಲ್ಲಿ ಪರಿಣತವಾಗಿರುವ ಭೂತ ಗಣಗಳಾಗಿವೆ ಮತ್ತು ನಾನಾ ರೂಪಗಳಲ್ಲಿರುತ್ತವೆ. ಈ ರೂಪಗಳೆಲ್ಲವೂ ಪುರುಷ ನಿಂದ ಜಯಿಸಲ್ಪಟ್ಟು ಕುಂಬಾರನಿಂದ ಚಕ್ರವು ತಿರುಗಿಸಲ್ಪಡುವಂತೆ ಮತ್ತು ಬೆಂಕಿಯು ಕಾವು ಇದ್ದಾಗಲೇ ಕಬ್ಬಿಣದ ಗುಂಡನ್ನು ಬಡಿಯುವಂತೆ ಕ್ರಮಕ್ಕೆ ಒಳಪಡಿಸಿದರೂ ಪುರುಷನು ಜಯಿಸಲ್ಪಡುವುದಿಲ್ಲ. ಆದರೆ ಆತ್ಮಭೂತವು ಅದರ ಗುಣಗಳಿಂದ ಸಂಪರ್ಕ ಹೊಂದಿರುವುದರಿಂದ ಜಯಿಸಲ್ಪಡುತ್ತದೆ.

ಅಥಾನ್ಯತ್ರಾಪ್ಯುಕ್ತಂ—ಶರೀರಮಿದಂ ಮೈಥುನದೇವೋದ್ಭೂತಂ । ಸಂವೃದ್ಧ್ಯುಪೇತಂ ನಿರಯೇಽಥಮೂತ್ರದ್ವಾರೇಣನಿಷ್ಕ್ರಾಂತಮಸ್ಥಿಭಿಶ್ಚಿತ್ತಂ ಮಾಂಸೇನಾನುಲಿಪ್ತಂ ಚರ್ಮಣಾವನದ್ಧಂ ವಿಣ್ಮೂತ್ರ, ಪಿತ್ಥ, ಕಫ, ಮಜ್ಜಾಮೇದೋವಸಾಭಿರನ್ಯೈಶ್ಚಾಮಯೈರ್ಬಹುಭಿಃ ಪರಿಪೂರ್ಣಂ ಕೋಶಇವವಸುನೇತಿ ||೪||

ಅದು ಬೇರೊಂದು ಕಡೆ ಹೀಗೆ ಹೇಳಲಾಗಿದೆ-ಈ ದೇಹವು ಮೈಥುನದಿಂದ ಉತ್ಪನ್ನವಾಗಿದೆ. ಅದು ಅಂಧಕಾರದಲ್ಲಿ ಬೆಳೆಯಬೇಕಾದ ಪ್ರವೃತ್ತಿಯನ್ನು ಹೊಂದಿದೆ ಮತ್ತು ಮೂತ್ರದ್ವಾರದಿಂದ ಹೊರ ಬರಬೇಕಾಗಿದೆ. ಅದು ದೇಹದ ಎಲ್ಲಾ ಭಾಗಗಳಲ್ಲೂ ವ್ಯಾಪಿಸಿರುವ ಮೂಳೆಗಳಿಂದ ಮತ್ತು ಮಾಂಸದಿಂದ ಆವರಿಸಿಲ್ಪಟ್ಟು ಚರ್ಮದಿಂದ ಮುಚ್ಚಲ್ಪಟ್ಟು ವಿಣ್ಮೂತ್ರ, ಪಿತ್ಥ, ಕಫ, ಮಜ್ಜ ಮೇಧಸ್ಸು, ಕೊಬ್ಬು, ತೈಲ ಮತ್ತು ಐಶ್ವರ್ಯದಿಂದ ತುಂಬಿದ ಶ್ರೀಮಂತರ ಮನೆಯಂತೆ ಎಲ್ಲ ವಿಧವಾದ ಕಾಯಿಲೆಗಳಿಂದ ತುಂಬಿರುವುದೇ ಈ ದೇಹವಾಗಿರುತ್ತೆ

ಅಥಾನ್ಯತ್ರಾಪ್ಯುಕ್ತಂ–ಸಮ್ಮೋಹೋಭಯಂ ವಿಷಾದೋನಿದ್ರಾತಂದ್ರೀ ಪ್ರಮಾದೋಜರಾಶೋಕಃ ಕ್ಷುತ್ ಪಿಪಾಸಾಕಾರ್ಪಣ್ಯಂ ಕ್ರೋಧೋನಾಸ್ತಿಕ್ಯಾಮಜ್ಞಾನಂ ಮಾತ್ಸರ್ಯಂನೈಷ್ಕಾರುಣ್ಯಂ ಮೂಢತ್ವಂ ನಿರ್ವ್ರೀಢತ್ವಂ ನಿಕೃತತ್ವಮುದ್ಧತತ್ವಮಸಮತ್ವಮಿತಿತಾಮಸಾನಿ । ಅತಸ್ತೃಷ್ಣಾಸ್ನೇಹೋರಾಗೋಲೋಭೋಹಿಂಸಾರತಿರ್ದ್ರಿಷ್ಟಿರ್ವ್ಯಾ ವೃತ್ತತ್ವಮೀರ್ಷ್ಯಾಽಕಾಮ ಮಸ್ಥಿರತ್ವಂ ಚಲತ್ವಂ ವ್ಯಗ್ರತ್ವಂ ಜಿಗೀಷಾಽರ್ಥೋಪಾರ್ಜನಂ, ಮಿತ್ರಾನುಗ್ರಹಣಂ ಪರಿಗ್ರಹಾವಲಂಬೋಽನಿಷ್ಟೇಷ್ವಿಂದ್ರಿಯಾರ್ಥೇಷು ದ್ವಿಷ್ಟಿರಿಷ್ಟೇಷ್ವಭಿಷ್ವಂಗಃ ಶುಕ್ತಸ್ವರೋಽನ್ನತತ್ವಮಸ್ತ್ವಿತಿರಾಜಸಾನಿ । ಏತೈಃ ಪರಿಪೂರ್ಣಏತೈರಭಿಭೂತಾ ಇತ್ಯಯಂಭೂತಾತ್ಮಾ । ತಸ್ಮಾನ್ನಾನಾರೂಪಾಣ್ಯಾಪ್ನೋತಿ ||೫||

ಅದು ಬೇರೊಂದು ಕಡೆ ಹೀಗೆ ಹೇಳಲಾಗಿದೆ–ದೇಹವು ಸಮ್ಮೋಹ, ಭಯ, ವಿಷಾದ, ನಿದ್ರೆ, ಸೋಮಾರಿತನ, ಅನವಶ್ಯಕತೆ, ಮುಪ್ಪು, ಶೋಕ, ಹಸಿವು, ನೀರಡಿಕೆ, ಕಷ್ಟ, ಕಾರ್ಪಣ್ಯ, ಕ್ರೋಧ, ನಾಸ್ತಿಕ್ಯ, ಅಜ್ಞಾನ, ಮಾತ್ಸರ್ಯ, ನಿಷ್ಕರುಣೆ, ಮೂಢತ್ವ, ನಾಚಿಕೆಇಲ್ಲದಿರುವಿಕೆ, ಅಲ್ಪತನ, ಒರಟುತನ, ಅಸಮತ್ವತೆ, ಇಂತಹ ಅಂಧಕಾರ ಗುಣಗಳನ್ನು, ಅಂತರ್‌ತೃಷೆ, ಸ್ನೇಹ, ರಾಗ, ಲೋಭ, ಹಿಂಸೆ, ರತಿ, ಪರಾಪೇಕ್ಷೆ, ಪರಹಿಂಸೆ, ದುರಾಸೆ, ದ್ವೇಷ, ಮೋಸ, ಅಸೂಯೆ, ಅತೃಪ್ತಿ, ಅಧ್ಯಡತೆ, ಚಂಚಲತ್ವ, ಅಪಾಮಾರ್ಗ, ಆಕ್ರಮಣ, ಮಿತ್ರಾನು ಗ್ರಹಣ, ಪರಿಗ್ರಹಾವಲಂಬನೆ, ಅಹಿತವಾದ ದೃಷ್ಟಿ, ಸುಖಾವಲಂಬನೆ, ಕಠಿಣನುಡಿ, ತಿಂಡಿಪೋತತನ, ಇಂತಹ ರಾಜಸಗುಣಗಳನ್ನು ಹೊಂದಿದ್ದು ಅವುಗಳಿಂದ ಮುಚ್ಚಲ್ಪಟಿದೆ. ಮತ್ತು ಪ್ರಭಾವಿತನಾಗಿರುತ್ತದೆ, ಆದ್ದರಿಂದ ಭೂತಾತ್ಮವು ನಾನಾ ರೂಪಗಳನ್ನು ಧರಿಸುತ್ತದೆ. ನಾನಾ ರೂಪಗಳನ್ನು ಧರಿಸುತ್ತದೆ.

## ನಾಲ್ಕನೆಯ ಅಧ್ಯಾಯವು

ತೇನಖಲುವಾಲ್ಯೋರ್ಧ್ವ ರೇತಸೋಽತಿವಿಸ್ಮಿತಾ ಅಭಿಸಮೇತ್ಯೋಚುರ್ಭ್ಯಗವನ್ನಮಸ್ತೇಽಸ್ತ್ವನುಶಾಧಿ । ತ್ವಮಸ್ಮಾಕಂಗತಿರನ್ಯಾನ ವಿದ್ಯತಾಇತಿ । ಅಸ್ಯಕೋವಿಧಿ ರ್ಭೂತಾತ್ಮನೋ ಯೇನೇದಂಹಿತ್ವಾಽಽತ್ಮನ್ನೇವ ಸಾಯುಜ್ಯಮುಪೈತಿ । ಸಾಹೋವಾಚೇತಿ ||೧||

ಆಗ ವಾಲಖಿಲ್ಯರು ಊರ್ಧ್ವರೇತಸ್ಕರಾಗಿದ್ದರು., ಅತಿವಿಸ್ಮಿತರಾಗಿದ್ದರು. ಅವರು ಪ್ರಜಾಪತಿ ಕರ್ತೃವಿನ ಬಳಿಗೆ ಹೋಗಿ ಭಗವಾನ್ ನಿಮಗೆ ಅನೇಕ ನಮಸ್ಕಾರಗಳು. ನಮಗೆ ಇನ್ನೂ ಹೆಚ್ಚಿನ ಜ್ಞಾನೋಪದೇಶವನ್ನು ಮಾಡಿರಿ. ನಮ್ಮನ್ನು ಕೃತಾರ್ಥರನ್ನಾಗಿ ಮಾಡಲು ನೀವಲ್ಲದೆ ಮತ್ಯಾರೂ ಇಲ್ಲ. ಭೂತಾತ್ಮವು ಈ ಭೌತಶರೀರದಿಂದ ಹೊರಬಂದ ತರುವಾಯ ನಿಜವಾದ ಆತ್ಮನೊಂದಿಗೆ ಐಕ್ಯತೆ ಹೊಂದುವ ಮಾರ್ಗವಾವುದೆಂಬದನ್ನು ತಿಳಿಸಿರಿ" ಎನ್ನಲು ಪ್ರಜಾಪತಿ ಕರ್ತೃವು ಹೇಳುತ್ತಾರೆ.

ಅಥಾನ್ಯತ್ರಾಪ್ಯುಕ್ತಂ—ಮಹಾನದೀಷೂರ್ಮಿಯೆ ಇವಾನಿವರ್ತಕಮಸ್ಯಯತ್ ಪುರಾಕೃತಂ, ಸಮುದ್ರವೇಲೇವದುರ್ನಿವಾರ್ಯಮಸ್ಯ ಮೃತ್ಯೋರಾಗಮನಂ, ಸದಸತ್ಫಲಮಯೈಃ ಪಾಶೈಃ ಪಂಗುರಿವಬದ್ಧಂ, ಬಂಧನಸ್ಥಸ್ಯೇವಾಸ್ವಾತಂತ್ರ್ಯಂ, ಯಮವಿಷಯಸ್ಥಸ್ಯೇವ ಬಹುಭಯಾವಸ್ಥಂ, ಮದಿರೋನ್ಮತ್ತ ಇವಮೋಹಮದಿರೋನ್ಮತ್ತಂ, ಪಾಪ್ಮನಾಗೃಹೀತಇವಭ್ರಾಮ್ಯಮಾಣಂ, ಮಹೋರಗದಷ್ಟ ಇವವಿಷದಷ್ಟಂ, ಮಹಾಂಧಕಾರಮಿವರಾಗಾಂಧಂ, ಇಂದ್ರಜಾಲಮಿವಮಾಯಾಮಯಂ, ಸ್ವಪ್ನ ಇವಮಿಥ್ಯಾದರ್ಶನಂ, ಕದಲೀಗರ್ಭಮಿವಾಸಾರಂ, ನಟಇವ ಕ್ಷಣಾವೇಶಂ, ಚಿತ್ರಭಿತ್ತಿರಿವಮಿಥ್ಯಾಮನೋರಮಮಿತಿ । ಅಥೋಕ್ತಂ. ಶಬ್ದಸ್ಪರ್ಶಾದಯೋಯೇಽರ್ಥಾಮರ್ತ್ಯೇಽನರ್ಥಾ ಇವಾಸ್ಥಿತಾಃ । ಯೇಷಾಂಸಕ್ತಸ್ತು ಭೂತಾತ್ಮಾನಸ್ಮರೇತ್ಪರಮಂಪದಂ ॥

ಅದು ಬೇರೊಂದುಕಡೆ ಹೀಗೆ ಹೇಳಲಾಗಿದೆ. ಹೇಗೆ ದೊಡ್ಡ ದೊಡ್ಡ ನದಿಗಳಲ್ಲಿ ಏಳುವ ಅಲೆಗಳು ಎದ್ದ ತರುವಾಯ ಉಪಸಂಹರಿಸಿಕೊಳ್ಳಲು ಸಾಧ್ಯವಿಲ್ಲವೋ, ಹೇಗೆ ಚಂದ್ರನನ್ನು ಕಂಡ ಸಮುದ್ರದ ಉಬ್ಬರವು ಸಮೀಪಿಸಿದವರನ್ನು ಆಹುತಿ ತೆಗೆದುಕೊಳ್ಳದೆ ಹಿಂದಿರುಗಲು ಸಾಧ್ಯವಿಲ್ಲವೋ ತನ್ನ ಪಾಪ ಪುಣ್ಯದ ಕರ್ಮಫಲವಾಗಿ ಬಂಧಿತನಾಗಿರುವ ಮನುಷ್ಯನು ಅವನ್ನು ಅನುಭವಿಸದೆ ಹಿಂದಿರುಗುವುದು ಸಾಧ್ಯವಿಲ್ಲವೋ, ಕಾರಾಗೃಹದಲ್ಲಿ ಬಂಧಿತನಾದ ಮನುಷ್ಯನ ಸ್ಥಿತಿಯಂತೆ, ಸ್ವಾತಂತ್ರ್ಯವಿಲ್ಲದೆ, ಮೃತ್ಯುವಿನಿಂದ ಆಕ್ರಮಿತನಾದ ಮನುಷ್ಯನಂತೆ, ಪಾನಮತ್ತನಾದ ಮನುಷ್ಯನು ಅನೇಕ ಭಯಗಳಿಂದ ಆವರಿಸಲ್ಪಟ್ಟಂತೆ, ಪಾನಮತ್ತತೆಯಿಂದ ಅಪಮಾರ್ಗವನ್ನು ಹಿಡಿದವನಂತೆ, ಭೂತಚೇಷ್ಟೆಯಿಂದಾಗಿ ಮುನ್ನುಗ್ಗುತ್ತಿರುವವನಂತೆ, ಭಾರಿ ಸರ್ಪದಿಂದ ಕಚ್ಚಿಸಿಕೊಂಡವನಂತೆ, ವಿಷಯದ ಅತೀತ್ವದಿಂದ ಕಾಡಿಸಿದವನಂತೆ ಮಹಾಂಧಕಾರದಲ್ಲಿರುವವನಂತೆ. ಮೋಹಸಮಾವೃತನಾದವನಂತೆ, ಇಂದ್ರಜಾಲದಿಂದಾಗಿ ಮಾಯೆಯಿಂದ ಆವೃತನಾದವನಂತೆ, ಸ್ವಪ್ನಾವಸ್ಥೆಯಲ್ಲಾಗುವ ದರ್ಶನ

ದಂತೆ, ಕದಳೀಗರ್ಭದಂತೆ, ನಟನೆಯಲ್ಲಿನ ಕ್ಷಣಾವೇಶದಂತೆ, ಚಿತ್ರದಲ್ಲಿ ಕಂಡಂತಹ ಉಡುಪಿನ ಬದಲಾವಣೆಯಂತೆ, ಮನಸ್ಸಿನಮೇಲೆ ಮಿಥ್ಯಾಸಂತೋಷದ ಪರಿಣಾಮು ದಂತೆ ಶಬ್ದ ಮತ್ತು ಸ್ಪರ್ಶದ ಮಾತ್ರದಿಂದ ಯಾವ ಸಂಪತ್ತೂ ಮನುಷ್ಯನಿಗೆ ತೃಪ್ತಿ ನೀಡದೋ ಹಾಗೆಯೆ ಈ ಭೂತಾತ್ಮನು ಅವುಗಳ ಮೇಲಿನ ಮೋಹದಿಂದ ತನ್ನ ಪರಮ ಪದವನ್ನು ಸ್ಮರಿಸಿಕೊಳ್ಳುವುದಿಲ್ಲ. ಎನ್ನುತ್ತಾರೆ.

ಅಯಂವಾಖಲ್ವಸ್ಯಪ್ರತಿವಿಧಿಭೂತಾತ್ಮಾನೋಯದ್ವೇದವಿದ್ಯಾಧಿಗಮಃ ಸ್ವಧರ್ಮಸ್ಯಾನುಚರಣಂ ಸ್ವಾಶ್ರಮೇಷ್ವೇವಾನುಕ್ರಮಣಂ ಸ್ವಧರ್ಮಸ್ಯವಾ । ಏತಹುತಂ । ಸ್ತಂಬಶಾಖೋವಾಪರಾಣಿ । ಅನೇನೋರ್ಧ್ವಭಾಗ್ಭವತಿ । ಅನ್ಯಥಾಽವಾಂಗ್ಪತತಿ। ಏಷಸ್ವಧರ್ಮೋಽಭಿಹಿತೋಯೋವೇವೇಷು । ನಸ್ವಧರ್ಮಾತಿಕ್ರಮೇಣಾಽಽಶ್ರಮೀಭವತಿ । ಆಶ್ರಮೀಷ್ವೇವಾನವಸ್ಥಸ್ತಪಸ್ವೀವೇತ್ಯುಚ್ಯತಇತ್ಯೇತದಯುಕ್ತಂ। ನಾತಪಸ್ಕಸ್ಯಾಽಽತ್ಮಜ್ಞಾನೇಽಧಿಗಮಃ ಕರ್ಮಸಿದ್ಧಿರ್ವೇತಿ । ಏವಂಹ್ಯಾಹ–

ತಪಸಾಪ್ರಾಪ್ಯತೇಸತ್ತ್ವಂ ಸತ್ತ್ವಾತ್ಸಂಪ್ರಾಪ್ಯತೇಮನಃ । ಮನಃಪ್ರಾಪ್ಯತೇಹ್ಯಾತ್ಮಾಯಮಾಪ್ತ್ವಾನನಿವರ್ತತೇ ॥೩॥

ಭೂತಾತ್ಮನು ಪಾಪಗಳಿಗೆ ಈಡಾಗದೆ ಇರಲು ವೇದವಿದ್ಯದ ಕಡೆಗೆ ಗಮನ ಕೊಡಬೇಕು, ಸ್ವಧರ್ಮಾಚರಣೆಯನ್ನು ಮಾಡಬೇಕು ; ತಮ್ಮ ತಮ್ಮ ಆಶ್ರಮ ಧರ್ಮವನ್ನು ಅರಿತುಕೊಂಡು ಅದರಂತೆ ನಡೆಯಬೇಕು, ಇದು ಕರ್ತವ್ಯದ ನಿಬಂಧನೆಗಳು, ಇತರ ವೃಕ್ಷದ ಕೊಂಬೆಗಳಂತಿವೆ ಅದರ ಮೂಲಕ ಒಬ್ಬನು ಮೇಲೂ ಹತ್ತಬಲ್ಲ, ಕೆಳಗೂ ಇಳಿಯಬಲ್ಲ, ಇದೇ ಸ್ವಧರ್ಮವನ್ನು ವೇದಗಳಲ್ಲಿ ಅಳವಡಿಸಲಾಗಿದೆ, ಈ ಸ್ವಧರ್ಮಾತಿಕ್ರಮಣದಿಂದ ತನ್ನ ಆಶ್ರಮ ಧರ್ಮವನ್ನು ಪರಿಪಾಲಿಸಿದಂತಾಗುವುದಿಲ್ಲ, ಯಾರಾದರೂ ಈ ಮನುಷ್ಯನು ತನ್ನ ಜೀವದ ಆಶ್ರಮಧರ್ಮಕ್ಕೆ ಸೇರಿದವನಲ್ಲವೆಂದರೆ ಅವನು ತಪಸ್ವಿಯೇ ಆಗಿರಬೇಕು. ಆದ್ದರಿಂದ ತಪಸ್ಸನ್ನು ಅಭ್ಯಾಸಿಸದೆ ಇರುವುದು ಸೂಕ್ತವಲ್ಲ. ಆತ್ಮಜ್ಞಾನವನ್ನು ಪಡೆದುಕೊಳ್ಳುವಲ್ಲಿ ಅಥವ ಕರ್ಮಸಿದ್ಧಿಯಾಗಬೇಕಾದಲ್ಲಿ ತಪಸ್ಸಾಧನೆ ಮಾಡದಿರುವುದು ಸರಿಯಲ್ಲ. ಆದ್ದರಿಂದ ಹೀಗೆ ಹೇಳಲ್ಪಟ್ಟಿದೆ ತಪಸ್ಸಿನಿಂದ ಸತ್ವವುಉಂಟಾಗುತ್ತದೆ. ಈ ಸತ್ವದಿಂದ ಜ್ಞಾನವುಂಟಾಗುತ್ತದೆ. ಜ್ಞಾನದಿಂದ ಆತ್ಮನ ಅರಿವಾಗುತ್ತದೆ. ಈ ಆತ್ಮಜ್ಞಾನವನ್ನು ಪಡೆದವನು ಅಮೃತನಾಗುತ್ತಾನೆ.

ಅಸ್ತಿಬ್ರಹ್ಮೈತಿಬ್ರಹ್ಮವಿದ್ಯಾವಿದಬ್ರುವೀತ್। ಬ್ರಹ್ಮದ್ವಾರಮಿದಮಿತ್ಯೇವೈತದಾಹ ಯಸ್ತಪಸಾಽಪಹತಪಾಪ್ಮಾ। ಓಂ ಬ್ರಹ್ಮಣೋಮಹಿಮೇತ್ಯೇವೈತದಾಹಯಃ ಸುಯುಕ್ತೋಽಜಸ್ರಂ ಚಿಂತಯತಿ। ತಸ್ಮಾದ್ವಿದ್ಯಯಾ ತಪಸಾ ಚಿಂತಯಾ ಚೋಪಲಭ್ಯತೇ ಬ್ರಹ್ಮ। ಸುಬ್ರಹ್ಮಣಃ ಪರಪತಾಭವತ್ಯಧಿ ದೈವತ್ವಂ ದೇವೇ ಭ್ಯಶ್ಚ। ಇತ್ಯಕ್ಷಯ್ಯಮಪರಿಮಿತಮನಾಮಯಂ ಸುಖಮಶ್ನುತೇ। ಯ ಏವಂ ವಿದ್ವಾನನೇನ ತ್ರಿಕೇಣ ಬ್ರಹ್ಮೋಪಾಸ್ತೇ। ಅಥಯೈಃ ಪರಿಪೂರ್ಣೋಽಭಿ ಭೂತೋಽಯಂ ರಥಿತಶ್ಚೈತೇರ್ವೈವ ಮುಕ್ತಸ್ತ್ವಾತ್ಮನ್ಯೇವಸಾಯುಜ್ಯಮು ಪೈತಿ ||೪||

ಬ್ರಹ್ಮಜ್ಞಾನವನ್ನು ಪಡೆದವನು ಬ್ರಾಹ್ಮಣನೆಂದಾಗುತ್ತಾನೆ. ತಪಸ್ವಾಧ್ಯಾಯದಿಂದ ಪಾಪಗಳನ್ನು ಕಳೆದುಕೊಂಡವರು ಇದು ಬ್ರಹ್ಮದ್ವಾರವೆಂದು ಹೇಳುತ್ತಾರೆ. ಓಂಕಾರವೇ ಬ್ರಹ್ಮನ ಮಹಿಮೆ ಎಂಬುದಾಗಿ ಅವರಲ್ಲೇ ತಲ್ಲೀನನಾಗಿರುವ ಮತ್ತು ಅದನ್ನೇ ಅನುಗಾಲವೂ ಜಪಿಸುತ್ತಿರುವ ಮಹಾನುಭಾವರು ಹೇಳುತ್ತಾರೆ. ಆದ್ದರಿಂದ ಜ್ಞಾನದಿಂದಲೂ, ತಪಸ್ಸಿನಿಂದಲೂ, ಚಿಂತನೆಯಿಂದಲೂ, ಬ್ರಹ್ಮನನ್ನು ನಮೀಪಿಸ ಬಹುದು, ಮತ್ತು ಹಿರಣ್ಯ ಗರ್ಭನೂ ಆಗಬಹುದು. ಬ್ರಹ್ಮನಿಗಿಂತ ಹೆಚ್ಚಿನಿಸಿದ ದೇವನೂ ಆಗಬಹುದು. ಆಗ ಅವನು ಅಕ್ಷಯವಾದ, ಅಪರಿಮಿತವಾದ, ಅನಾ ಮಯವಾದ ಸುಖವನ್ನು ಪಡೆಯುತ್ತಾನೆ. ಯಾವನು ಈ ತ್ರೈವಿದ್ಯೆಯಾದ ಜ್ಞಾನ, ತಪಸ್ಸು ಮತ್ತು ಚಿಂತನೆಯನ್ನು ಮಾಡುತ್ತಾನೋ, ಅವನು ಯಾವುದರಿಂದ ಆವರಿಸಿ ಕೊಳ್ಳಲ್ಪಟ್ಟು ಮತ್ತು ಅದರಲ್ಲೇ ತನ್ಮಯನಾಗಿರುತ್ತಾನೋ, ಅವನು ಬಿಡುಗಡೆ ಮಾಡಲ್ಪಟ್ಟು, ಈ ದೇಹವೆಂಬ ರಥದಲ್ಲಿ ನವಾರನಾಗಿರುವ ಅವನು ಆತ್ಮನೊಂದಿಗೆ ಪೂರ್ತಿಯಾಗಿ ಏಕತ್ವವನ್ನು ಹೊಂದುತ್ತಾನೆ,

ತೇಹೋಚುರ್ಭಗವನ್ನಭಿವಾದ್ಯಸೀತ್ಯಭಿವಾದ್ಯಸೀತಿ। ನಿಹಿತ ಮಸ್ಮಾಭಿರೇತ ದ್ಯಥಾವದುಕ್ತಂ ಮನಸೀತಿ। ಅಥೋತ್ತರಂ ಪ್ರಶ್ನಮನು ಬ್ರೂಹೀತಿ। ಅಗ್ನಿ ರ್ವಾಯುರಾದಿತ್ಯಃ ಕಾಲೋ ಯಮಃ ಪ್ರಾಣೋಽನ್ನಂ ಬ್ರಹ್ಮಾರುದ್ರೋ ವಿಷ್ಣುರಿತ್ಯೇಕೇಽನ್ಯಮಭಿಧ್ಯಾಯನ್ತಿ। ಏಕೇಽನ್ಯಂ। ಶ್ರೇಯಃಕತಮೋಯಃ ಸೋಽಸ್ಮಾಕಂ ಬ್ರೂಹೀತಿ। ತಾನ್ಹೋವಾಚೇತಿ ||೫||

ಆಗ ವಾಲಖಿಲ್ಯರು ಹೇಳುತ್ತಾರೆ: "ನೀವು ವಂದನಾರ್ಹರಾದ ಗುರುಗಳು. ಆದ್ದರಿಂದ ವಂದನಾರ್ಹ ಗುರುಗಳಾದ ತಾವು ಅಪ್ಪಣೆ ಕೊಡಿಸಿದುದೆಲ್ಲವೂ ನಮಗೆ

ಮನೋಗತವಾಗಿರುತ್ತೆ. ಈಗ ಇನ್ನೊಂದು ಪ್ರಶ್ನೆಯನ್ನು ಕೇಳುತ್ತೇವೆ. ಅದನ್ನು ಉತ್ತರಿಸಿರಿ. ಅಗ್ನಿ, ವಾಯು, ಸೂರ್ಯ, ಕಾಲ, ಯಮ, ಪ್ರಾಣ, ಅನ್ನ, ಬ್ರಹ್ಮ ರುದ್ರ, ವಿಷ್ಣು, ಇವರನ್ನು ಒಬ್ಬರನ್ನೊಬ್ಬರು ಅಭಿಧ್ಯಾನ ಮಾಡುತ್ತಾರೆ. ಇವರ ಪೈಕಿ ಶ್ರೇಷ್ಠರಾದವರು ಯಾರೆಂಬುದನ್ನು ನಮಗೆ ತಿಳಿಯ ಹೇಳಿರಿ" ಎನ್ನಲು ಪ್ರಜಾಪತಿ ಕರ್ತೃವು ಹೇಳುತ್ತಾನೆ.

ಬ್ರಹ್ಮಣೋವಾವೈತಾಅಗ್ರ್ಯಾಸ್ತನವಃ ಪರಸ್ಯಾಮೃತಸ್ಯಾಶರೀರಸ್ಯ । ತಸ್ಯೈವ
ಲೋಕೇಪ್ರತಿಮೋದತೇಹಯೋಯಸ್ಯಾನುಷಕ್ತ ಇತ್ಯೇವಂಹ್ಯಾಹ । ಬ್ರಹ್ಮಖಿಲ್ವಿ
ದಂವಾವಸರ್ವಂ । ಯಾವಾಸ್ಯಾಅಗ್ರ್ಯಾಸ್ತನವಸ್ತಾಅಭಿಧ್ಯಾಯೇದರ್ಚಯೋ
ಸ್ನಿಹ್ನುಯಾಚ್ಚ । ಅತಸ್ತಾಭಿಃ ಸಹೈವೋಪರ್ಯುಪರಿಲೋಕೇಷುಚರತಿ ।
ಅಥಕೃತ್ಸ್ನಕ್ಷಯಏಕತ್ವಮೇತಿ । ಪುರುಷಸ್ಯಪುರುಷಸ್ಯ ॥೬॥

ಇವೆಲ್ಲವೂ ಪರಮ ಶ್ರೇಷ್ಠನಾದ ಅಮೃತನ ಮುಖ್ಯ ಆಕಾರಗಳು ಅಶರೀರಿಯಾದ ಈ ಬ್ರಹ್ಮನನ್ನು ಅವನ ಲೋಕದಲ್ಲಿ ಯಾರು ಯಾರೊಂದಿಗಾದರೂ ಭಕ್ತಿ ಭಾವವನ್ನು ಹೊಂದಿರುವರೋ ಅವರು ಆನಂದಿಸುತ್ತಾರೆ. ಹೀಗೆ ಈ ಸಮಸ್ತ ಲೋಕಗಳೂ ಬ್ರಹ್ಮವೇ ಆಗಿದೆ. ಅದ್ದರಿಂದ ಇವೆಲ್ಲವೂ ಅವನ ಮುಖ್ಯವಾದ ರೂಪಗಳಾಗಿರು ವುದರಿಂದ ಯಾರು ಅವುಗಳ ಮೇಲೆ ಅನುಧ್ಯಾನ ಮಾಡುವರೋ, ಅರ್ಚಿಸುವರೋ, ಮತ್ತು ವಿರೋಧಿಸುವರೋ, ಅವರು ಲೋಕಗಳಲ್ಲಿ ಮೇಲೆ ಮೇಲೆ ಏರುತ್ತ ಹೋಗುತ್ತಾರೆ. ಮತ್ತು ಎಲ್ಲವೂ ಲಯವಾದಾಗ (ಪ್ರಳಯವಾದಾಗ) ಅವನು ಪರಮ ಪುರುಷನಲ್ಲಿ ಐಕ್ಯವಾಗುತ್ತಾನೆ ಪರಮ ಪುರುಷನೇ.

## ಐದನೇ ಅಧ್ಯಾಯ

ಅಥಯಥೇಯಂ ಕೌತ್ಸಾಯನೀಸ್ತುತಿಃ । ತ್ವಂಬ್ರಹ್ಮಾತ್ವಂಚವೈವಿಷ್ಣುಸ್ತ್ವಂ
ರುದ್ರಸ್ತ್ವಂಪ್ರಜಾಪತಿಃ । ತ್ವಮಗ್ನಿರ್ವರುಣೋವಾಯುಸ್ತ್ವಮಿಂದ್ರಸ್ತ್ವಂ
ನಿಶಾಕರಃ । ತ್ವಮನುಸ್ತ್ವಂ ಯಮಸ್ತ್ವಂ ಪೃಥಿವೀತ್ವಂ ವಿಶ್ವಂ ತ್ವಮಥಾ
ಚ್ಯುತಃ । ಸ್ವಾರ್ಥೇಸ್ವಾಭಾವಿಕೇಽರ್ಥೇಚಬಹುಧಾಸಂಸ್ಥಿತಸ್ತ್ವಯಿ । ವಿಶ್ವೇ
ಶ್ವರನಮಸ್ತುಭ್ಯಂ ವಿಶ್ವಾತ್ಮಾವಿಶ್ವಕರ್ಮಕೃತ್ । ವಿಶ್ವಭುಗ್ವಿಶ್ವಮಾಯುಸ್ತ್ವಂ

ವಿಶ್ವಕ್ರೀಡಾರತಿಪ್ರಭುಃ | ನಮಃಶಾನ್ತಾತ್ಮನೇತುಭ್ಯಂ ನಮೋಗುಹ್ಯತಮಾಯಚ | ಅಚಿನ್ತ್ಯಾಯಾಪ್ರಮೇಯಾಯಾ ಅನಾದಿನಿಧನಾಯಚೇತಿ ||೧||

ಕೌತ್ಸಾಯನೀ ಸ್ತುತಿಯು ಈ ರೀತಿ ಇರುತ್ತೆ :

ನೀನು ಬ್ರಹ್ಮಸಿದ್ದೀಯೆ ಆದ್ದರಿಂದ ನೀನು ವಿಷ್ಣುವೂ ಹೌದು, ರುದ್ರನೂ ಹೌದು, ಪ್ರಜಾಪತಿಯೂ ಹೌದು. ನೀನು ಅಗ್ನಿ, ವರುಣ, ವಾಯು, ಇಂದ್ರ, ಚಂದ್ರ ಎಲ್ಲವೂ ಆಗಿದ್ದೀಯೆ. ನೀನು ಅನ್ನನಾಗಿದ್ದೀಯೆ, ಯಮನಾಗಿದ್ದೀಯೆ. ನೀನು ಪೃಥ್ವಿಯಾಗಿದ್ದೀಯೆ, ನೀನು ವಿಶ್ವವೇ ಆಗಿದ್ದೀಯೆ. ನೀನು ಅಚ್ಯುತನಾಗಿದ್ದೀಯೆ, ಸ್ವಾರ್ಥ, ಸ್ವಾಭಾವಿಕ, ಅರ್ಥ ಇವೆಲ್ಲವೂ ಬಹಳವಾಗಿ ನೀನೇ ಆಗಿದ್ದೀಯೆ. ವಿಶ್ವೇಶ್ವರನೂ, ವಿಶ್ವಾತ್ಮನೂ, ವಿಶ್ವಕರ್ಮನೂ, ವಿಶ್ವಭುಕ್, ವಿಶ್ವಮಾಯು ಇವೆಲ್ಲವೂ ನೀನೇ ಆಗಿರುತ್ತಿ. ಈ ವಿಶ್ವವೆಲ್ಲವೂ ನಿನ್ನ ಕ್ರೀಡಾರತಿ ಇಂದ ಆದುದು. ಆದ್ದರಿಂದ ಶಾನ್ತಾತ್ಮನಾದ ಹೇ ಪ್ರಭುವೇ ನಿನಗೆ ನಮಸ್ಕಾರಗಳು. ನೀನು ಗುಹ್ಯತಮನೂ, ಅಚಿಂತ್ಯನೂ, ಅಪ್ರಮೇಯನೂ, ಆದಿ, ಅಂತ್ಯಗಳಿಲ್ಲದವನೂ ಆಗಿದ್ದೀಯೆ.

ತಮೋವಾಇದಮಗ್ರಆಸೀದೇಕಂ | ತತ್ಪರೇಸ್ಯಾತ್ | ತತ್ಪರೇಣೇರಿತಂ ವಿಷಮತ್ವಂ ಪ್ರಯಾತಿ | ಏತದ್ರೂಪಂ ವೈರಜಃ | ತದ್ರಜಃ ಖಲ್ವೀರಿತಂ ವಿಷಮತ್ವಂ ಪ್ರಯಾತಿ | ಏತದ್ವೈ ಸತ್ತ್ವಸ್ಯರೂಪಂ ತತ್ಸತ್ವಮೇವೇರಿತಂ ರಸಃ | ಸಂಪ್ರಾಸ್ರವತ್ | ಸೋಽಂಶೋಽಯಂ ಯಶ್ಚೇತಾಮಾತ್ರಃ ಪ್ರತಿಪುರುಷಃ ಕ್ಷೇತ್ರಜ್ಞಃ ಸಂಕಲ್ಪಾಧ್ಯವಸಾಯಾಭಿಮಾನ ಲಿಂಗಃ ಪ್ರಜಾಪತಿರ್ವಿಶ್ವಾಇತ್ಯಸ್ಯಪ್ರಾಗುಕ್ತಾಏತಾಸ್ತನವಃ | ಅಥಯೋಃಖಲುವಾವಾಸ್ಯತಾಮಸೋಽಂಶೋಽಸೌಸಬ್ರಹ್ಮಚಾರಿಣೋಯೋಽಯಂರುದ್ರಃ | ಅಥಯೋಃಖಲುವಾವಾಸ್ಯರಾಜಸೋಽಯಂಶೋಽಸೌಸಬ್ರಹ್ಮಚಾರಿಣೋಯೋಽಯಂಬ್ರಹ್ಮಾ | ಅಥಯೋಹಖಲುವಾವಾಸ್ಯಸಾತ್ವಿಕೋಽಂಶೋಽಸೌಸಬ್ರಹ್ಮಚಾರಿಣೋಯೋಽಯಂವಿಷ್ಣುಃ| ಸವಾಏಷಏಕಸ್ತ್ರಿಧಾಭೂತೋಽಷ್ಟಧೈಕಾದಶಧಾದ್ವಾದಶಧಾ, ಅಪರಿಮಿತಧಾ ವೋದ್ಭೂತಃ | ಉದ್ಭೂತತ್ವಾತ್ ಭೂತಂ ಭೂತೇಷುಚರತಿಪ್ರವಿಷ್ಟಃ ಸಭೂತಾನಾಮಧಿಪತಿರ್ಬಭೂವ | ಇತ್ಯಸಾಆತ್ಮಾಽಂತರ್ಬಹಿಶ್ಚಾನ್ತರ್ಬಹಿಶ್ಚ ||೨||

ಪ್ರಾರಂಭದಲ್ಲಿ ಈ ಲೋಕವೆಲ್ಲವೂ ಅಂಧಕಾರಮಯವಾಗಿತ್ತು. ಅದು ಬಹಳ ಎತ್ತರದಲ್ಲಿತ್ತು. ಆ ಎತ್ತರದಿಂದ ಅದನ್ನು ಮುಂದೆ ನೂಕಿದಾಗ ಅದು ಭಿನ್ನ ಭಿನ್ನವಾಗಿ ಚಲಿಸಿತು. ಆ ರೂಪವೇ ವಿಷಮತ್ವವಾಯಿತು. ಆ ವಿಷಮತ್ವವನ್ನು

ಮುಂದೆ ನೋಕಲು ಅದು ಭಿನ್ನ ಭಿನ್ನವಾಗಿ ಚಲಿಸಿತು. ಆಗ ಅದು ರಜೋಗುಣವಾಯಿತು. ಆ ರಜೋಗುಣವು ಮುಂದೆ ನೋಕಲ್ಪಟ್ಟಾಗ ಒಂದುದ್ರವವಾಗಿ ಹೊರ ಬಂದಿತು. ಆ ಭಾಗವು ಪ್ರತಿಯೊಬ್ಬ ಮಾನವನಲ್ಲಿರಬೇಕಾದ ಜ್ಞಾನಾಜ್ಞಾನ ಭಾಗವಾಯಿತು. ಕ್ಷೇತ್ರಜ್ಞನಾದ, ಸಂಕಲ್ಪಪೂರಿತನಾದ ಮತ್ತು ಆತ್ಮಾಭಿಮಾನವುಳ್ಳ ಈ ದೇಹವನ್ನು ಬಲ್ಲವನು ವಿಶ್ವವೆಂದು ಕರೆಯಲ್ಪಡುವ ಸೃಷ್ಟಿಗೆ ಒಡೆಯನಾದ ಪ್ರಜಾಪತಿಯು. ಅವನ ಆಕಾರಗಳನ್ನು ಹಿಂದೆಯೇ ತಿಳಿಸಲ್ಪಟ್ಟಿದೆ. ಈಗ ಅವನ ಒಂದು ಭಾಗವು ತಮಸ್ಸಿಗೆ ಸಂಬಂಧಿಸಿದ್ದಾಗಿರುತ್ತೆ. ಓ ಬ್ರಹ್ಮಚಾರಿಗಳೇ. ಅದೇ ರುದ್ರನೆಂಬುವವನು. ಈಗ ಅವನ ಇನ್ನೊಂದು ಭಾಗವು ರಜಸ್ಸಿಗೆ ಸಂಬಂಧಿಸಿದ ಅಂಶವಾಗಿದೆ. ಓ ಬ್ರಹ್ಮಚಾರಿಗಳೇ ಅದೇ ಬ್ರಹ್ಮ ಅವನ ಇನ್ನೊಂದು ಭಾಗವಾದ ಸಾತ್ವಿಕಕ್ಕೆ ಸಂಬಂಧಿಸಿದ ಅಂಶವಾಗಿರುತ್ತೆ. ಓ ಬ್ರಹ್ಮಚಾರಿಗಳೇ ಅದೇ ವಿಷ್ಣುವು. ಹೀಗೆ ಯಾವುದು ಮೂರು ಭೂತಗಳಾಯಿತೋ ಅದು ಮತ್ತೆ ಎಂಟು ಭೂತಗಳಾಗಿಯೂ, ಹನ್ನೊಂದು ಭೂತಗಳಾಗಿಯೂ ಹನ್ನೆರಡು ಭೂತಗಳಾಗಿಯೂ. ಮತ್ತೆ ಅವುಗಳು ಅಪರಿಮಿತವಾದ ಭೂತಗಳಾಗಿಯೂ ವಿಭಜಿಸಲ್ಪಟ್ಟವು. ಹೀಗೆಅವನು ಉದ್ಭೂತನಾದುದರಿಂದ ಅವನು ಸೃಷ್ಟಿಯಾದ ಜೀವಿಯಾಗಿ ಒಂದು ಭೂತದಿಂದ ಇನ್ನೊಂದು ಭೂತಕ್ಕೆ ಚಲಿಸುತ್ತ ಎಲ್ಲ ಭೂತಗಳಲ್ಲೂ ಪ್ರವೇಶಿಸುತ್ತಾನೆ. ಅವನು ಎಲ್ಲಾ ಭೂತಗಳಿಗೂ ಅಧಿಪತಿಯಾಗುತ್ತಾನೆ. ಅದೇ ಒಳಗೂ ಹೊರಗೂ ಇರುವ ಆತ್ಮ. ಒಳಗೂ ಹೊರಗೂ ಇರುವವನು.

## ಆರನೆಯ ಅಧ್ಯಾಯ

ದ್ವಿಧಾವಾಏಷ ಆತ್ಮಾನಂಬಿಭರ್ತ್ಯಯಂಯಃ ಪ್ರಾಣೋಯಶ್ಚಾಸಾ ಆದಿತ್ಯಃ ಅಥದ್ವೌವಾವೇತಾ ಅಸ್ಯಪಂಥಾನಾ ಅಂತರ್ಬಹಿಶ್ಚ । ಅಹೋರಾತ್ರೇಣೈತೌವ್ಯಾವರ್ತೇತೇ । ಅಸೌವಾಆದಿತ್ಯೋ ಬಹಿರಾತ್ಮಾ । ಅಂತರಾತ್ಮಾಪ್ರಾಣಃ । ಅತೋ ಬಹಿರಾತ್ಮಕ್ಯಾಗತ್ಯಾಽನ್ತರಾತ್ಮನೋಽನುಮೀಯತೇಗತಿಃ । ಇತ್ಯೇವಂಹ್ಯಾಹ— ಅಥಯಃಕಶ್ಚಿದ್ವಿದ್ವಾನಪಹತ ಪಾಪ್ಮಾಽಕ್ಷಾಧ್ಯಕ್ಷೋಽವದಾತಮನಾಸ್ತನ್ನಿಷ್ಠ ಆವೃತ್ತಚಕ್ಷುಃಸೋಽನ್ತರಾತ್ಮಕ್ಯಾಗತ್ಯಾ ಬಹಿರಾತ್ಮನೋಽನುಮೀಯತೇಗತಿಃ । ಇತ್ಯೇವಂಹ್ಯಾಹ—ಅಥಯಏಷೋಽನ್ತರಾದಿತ್ಯೇ ಹಿರಣ್ಮಯಃ ಪುರುಷೋಯಃ

ಪಶ್ಯತೀವಮಾಂ ಹಿರಣ್ಮಯಸ್ಮಾತ್ ಸಏಷೋಽಸ್ತರೇಹ್ಯತ್ಪುಷ್ಕರೇಏವಾಶ್ರಿತೋಽನ್ನ ಮತ್ತಿ ||೧||

ಆತ್ಮನು ಎರಡು ರೂಪಗಳನ್ನು ಪಡೆಯುತ್ತಾನೆ. ಒಂದು ಪ್ರಾಣದ ರೂಪಿನಲ್ಲೂ ಇನ್ನೊಂದು ಆದಿತ್ಯನ ರೂಪದಲ್ಲೂ. ಇವೆರಡೂ ಅವನ ಒಳಗಿನ ಮತ್ತು ಹೊರಗಿನ ದಾರಿಗಳಾಗಿರುತ್ತೆ. ಇವೆರಡೂ ದಿವಾರಾತ್ರಿಗಳಲ್ಲಿ ಪರಿಣಮಿಸುತ್ತಿರುತ್ತವೆ. ಆದಿತ್ಯನು ಬಹಿರಾತ್ಮನು, ಪ್ರಾಣನು ಅಂತರಾತ್ಮನು. ಅಂತರಾತ್ಮನ ಮಾರ್ಗವು ಬಹಿರಾತ್ಮನ ಮಾರ್ಗದಿಂದ ಅಳೆಯಲ್ಪಟ್ಟಿದೆ. ಅದು ಹೀಗೆ ಹೇಳಲ್ಪಟ್ಟಿದೆ–ಯಾವ ವಿದ್ವಾಂಸರು ಪಾಪಕರ್ಮಗಳಿಂದ ನಿವೃತ್ತರಾಗಿ ಆತ್ಮನನ್ನು ಸ್ವಾಧೀನಪಡಿಸಿಕೊಂಡು ಶುದ್ಧ ಮನಸ್ಕರಾಗಿ ದೃಢವಾಗಿ ಸ್ಥಾಪಿತರಾಗಿದ್ದು, ಹೊರ ವ್ಯಾಪಾರಗಳಿಂದ ತಟಸ್ಥರಾಗಿರುವವರೋ ಅವರೇ ಅಂತರಾತ್ಮಿಗಳು, ಹೀಗೆಯೇ ಬಹಿರಾತ್ಮನ ಗತಿಯು ಅಂತರಾತ್ಮನ ಮಾರ್ಗಗಳಿಂದ ಅಳೆಯಲ್ಪಟ್ಟಿದೆ. ಅದೂ ಹೀಗೆ ಹೇಳಲ್ಪಟ್ಟಿದೆ. ಸೂರ್ಯನಲ್ಲಿ ಅಂತರ್ಗತನಾದ ಹಿರಣ್ಮಯ ಪುರುಷನು ತನ್ನ ಹಿರಣ್ಮಯಸ್ಥಾನದಿಂದ ಭೂಮಿಯ ಕಡೆಗೆ ನೋಡಿ, ಹೃದಯ ಕಮಲದಲ್ಲಿ ಪ್ರವೇಶಿಸಿ ಅನ್ನವನ್ನು ಭಕ್ಷಿಸುತ್ತಾನೆ.

ಅಥಯಏಷಾಽಸ್ತರೇ ಹೃತ್ಪುಷ್ಕರ ಏವಾಽಽಶ್ರಿತೋಽನ್ನ ಮತ್ತಿಸಏಷೋಽಗ್ನಿರ್ದಿವಿಶ್ರಿತಃ ಸೌರಃ ಕಾಲಾಖ್ಯೋಽದೃಶ್ಯಃಸರ್ವಭೂತಾನ್ಯನ್ನ ಮತ್ತೀತಿ | ಕಃ ಪುರುಷಃಕಿಂಮಯೋರ್ವೇತಿ | ಇದಂವಾವ ತತ್ಪುಷ್ಕರಂಯೋಯಮಾಕಾಶಃ | ಅಸ್ಯೇಮಾಶ್ಚತಸ್ರೋದಿಶಶ್ಚತಸ್ರಉಪದಿಶೋದಲಸಂಸ್ಥಾ ಆಸಂ| ಅರ್ವಾಂಗ್ವಿಚರತ ಏತೌಪ್ರಾಣಾದಿತೌ | ಏತೌಉಪಾಸಿತೋ ಮಿತ್ಯೇತದಕ್ಷರೇವ್ಯಾಹೃತಿಭಿಃ ಸಾವಿತ್ರ್ಯಾಚೇತಿ ||೨||

ಅನಂತರ ಇವನು ಹೃದಯವೆಂಬ ಆಕಾಶವನ್ನು ಆಶ್ರಯಿಸಿಕೊಂಡು ಅನ್ನವನ್ನು ತಿನ್ನುತ್ತಾನೆ. ಇವನೇ ಅಗ್ನಿಯೆಂದು ವಿಶ್ರುತವಡಿಸಲಾಗಿದೆ. ಇವನೇ ಆಕಾಶದಲ್ಲಿ ಸೂರ್ಯನಾಗಿಯೂ ಪ್ರಕಾಶಿಸುತ್ತಾನೆ. ಅದೃಶ್ಯನಾದ ಯಮನ ಹೆಸರಿನಿಂದ ಸಮಸ್ತ ಭೂತಗಳೆಂಬ ಅನ್ನವನ್ನು ತಿನ್ನುತ್ತಾನೆ. ಹಾಗಾದರೆ ಈ ಪುರುಷನಾರು? ಯಾವ ರೂಪದಲ್ಲಿರುತ್ತಾನೆ. ಈ ಆಕಾಶದೆಂಬುದೇ ಆ ಪುಷ್ಕರ. ಇದಕ್ಕೆ ನಾಲ್ಕು ದಿಕ್ಕುಗಳೂ ನಾಲ್ಕು ಉಪದಿಕ್ಕುಗಳೂ ಉಂಟು. ಇವುಗಳ ಮುಂದೆ ಪ್ರಾಣಾದಿತ್ಯನು ಸಂಚರಿಸುತ್ತಾನೆ. ಇವನು ಓಂಕಾರವೆಂದು ಉಪಾಸಿಸಬೇಕು. ಈ ಪ್ರಣವವನ್ನು ಸವಿತೃ ಮತ್ತು ವ್ಯಾಹುತಿಗಳೆಂದು ತಿಳಿದು ಉಪಾಸಿಸಬೇಕು.

ಷ್ಯೇವಾವ ಬ್ರಹ್ಮಣೋರೂಪೇಭೂತಂಚಾಭೂತಂಚ | ಅಥಯನ್ಮೂರ್ತಂ ತದ ಸತ್ಯಂಯದ ಮೂರ್ತಂ ತತ್ಸತ್ಯಂ | ತದ್ಬ್ರಹ್ಮಜ್ಯೋತಿಃ | ಯ ಜ್ಯೋತಿಃಸ ಆದಿತ್ಯಃ | ಸವಾಏಷ ಓ ಮಿತ್ಯೇ ತದಾತ್ಮಾಽಭವತ್ | ಸತ್ರೇಧಾಽಽತ್ಮಾನಂ | ವ್ಯಕುರುತಾ ಓಮಿತಿತಿಸ್ರೋಮಾತ್ರಾಃ | ಏತಾಭಿಃಸರ್ವಮಿದಮೋತಂ | ಪ್ರೋತಂಚೈವಾಸ್ಮಿನ್ನಿತ್ಯೇವಂಹ್ಯಾಹ | ಏತದ್ವಾ ಆದಿತ್ಯ ಓಮಿತ್ಯೇವಂ ಧ್ಯಾಯತಾಽಽತ್ಮಾನಂಯುಂಜಿತೇತಿ ||೩||

ಬ್ರಹ್ಮನ ರೂಪಗಳು ಎರಡಿವೆ. ಯಾವುವೆಂದರೆ ಭೂತ ಮತ್ತು ಅಭೂತ. ಭೂತವು ಅಸತ್ಯವಾದುದು ಮತ್ತು ಅಭೂತವು ಸತ್ಯವಾದುದು. ಅದೇ ಬ್ರಹ್ಮ: ಅದೇ ಜ್ಯೋತಿ ; ಆ ಜ್ಯೋತಿಯೇ ಸೂರ್ಯ. ಇದಕ್ಕೆ ಓಂಕಾರವೇ ಪ್ರಾಣ. ಈ ಓಂಕಾರವು ಕೂಡ ಮೂರು ಭಾಗಗಳಾಗಿವೆ. ಅವುಗಳೆಂದರೆ ಅ, ಉ, ಮ ಎಂಬುವುಗಳಾಗಿವೆ. ಈ ಪ್ರಪಂಚವೆಲ್ಲವೂ ಅವನ ಸುತ್ತಲೂ ಹೆಣೆಯಲ್ಪಟ್ಟಿದೆ. ಆದ್ದರಿಂದ ಮಾನವರು ಸೂರ್ಯನನ್ನು ಓಂಕಾರನೆಂದೇ ಉಪಾಸನೆ ಮಾಡಿದಲ್ಲಿ ಅವರೂ ಅದರೊಡನೆ ಐಕ್ಯ ಹೊಂದುತ್ತಾರೆ ಎಂದು ಹೇಳಲಾಗಿದೆ.

ಅಥಾನ್ಯತ್ರಾಪ್ಯುಕ್ತಂ | ಅಥಖಲುಯ ಉದ್ಗೀಥಃ ಸಪ್ರಣವೋಯ ಪ್ರಣವಃ ಸ ಉದ್ಗೀಥ ಇತಿ | ಅಸೌವಾಆದಿತ್ಯ ಉದ್ಗೀಥಃ | ಏಷಪ್ರಣವಾ ಇತ್ಯೇವಂ ಹ್ಯಾಹ | ಉದ್ಗೀಥಂ ಪ್ರಣವಾಖ್ಯಂ ಪ್ರಣೇತಾರಂ ಭಾರೂಪಂ ವಿಗತನಿದ್ರಂ ವಿಜರಂ ವಿಮೃತ್ಯುಂತ್ರಿಪದಂತ್ರ್ಯಕ್ಷರಂ ಪುನಃ ಪಂಚಧಾಜ್ಞೇಯಂ ನಿಹಿತಂ ಗುಹಾಯಾಮಿತ್ಯೇವಂಹ್ಯಾಹ . ಊರ್ಧ್ವಮೂಲಂ ತ್ರಿಪಾದಃ ಬ್ರಹ್ಮ | ಶಾಖಾ ಆಕಾಶವಾಯ್ವಗ್ನಿ, ಉದಕಭೂಭ್ಯಾದಯಾ ಏಕೋಽಶ್ವತ್ಥನಾಮಾ | ಏತ ಪ್ಬ್ರಹ್ಮ | ಏತಸ್ಯೈತತ್ತೇಜೋಯದಸಾ ಆದಿತ್ಯಃ | ಓಮಿತ್ಯೇತದಕ್ಷರಸ್ಯ ಚೈತತ್ | ತಸ್ಮಾದೋಮಿತ್ಯನೇನೈತದುಪಾಸೀತಾಜಸ್ರಮಿತಿ | ಏಕೋಽಸ್ಯ ಸಂಬೋಧಯಿತೇತ್ಯೇವಂ ಹ್ಯಾಹ ||

ಏತದ್ಧ್ಯೇವಾಕ್ಷರಂ ಪುಣ್ಯಮೇತದ್ಧ್ಯೇವಾಕ್ಷರಂ ಪರಂ |
ಏತದ್ಧ್ಯೇ ವಾಕ್ಷರಂಜ್ಞಾತ್ವಾಯೋಯದಿಚ್ಛತಿ ತಸ್ಯತತ್ ||೪||

ಅದು ಬೇರೊಂದು ಕಡೆ ಹೀಗೆ ಹೇಳಲಾಗಿದೆ.—ಈಗ ಉದ್ಗೀಥವೆಂಬುದೇ ಪ್ರಣವ ಮತ್ತು ಪ್ರಣವವೇ ಉದ್ಗೀಥವಾಗಿದೆ. ಆದ್ದರಿಂದ ಉದ್ಗೀಥವು ಆದಿತ್ಯನಾಗಿದ್ದು ಅದೇ ಪ್ರಣವವೂ ಆಗಿರುತ್ತದೆ. ಹೀಗೂ ಹೇಳಬಹುದು. ಯಜ್ಞಯಾಗಾದಿಗಳಲ್ಲಿ

ಹೇಳುವಂತೆ ಪ್ರಣವವೆಂದು ಕರೆಯಲ್ಪಡುವ ಉದ್ಗೀಥವು ಪ್ರಮುಖವಾಗಿದ್ದು ಕಿರಣಗಳ ರೂಪದಲ್ಲಿದೆ. ಇದಕ್ಕೆ ನಿದ್ರೆ ಇಲ್ಲ, ವಯೋಮಾನವಿಲ್ಲ, ಮರಣವೆಂಬುದಿಲ್ಲ, ಮೂರು ಪಾದಗಳು, ಮೂರು ಅಕ್ಷರಗಳು, ಇವನ್ನು ಹೊಂದಿದ್ದು ಐದು ಮಡಿಕೆಗಳಾಗಿ ಹೃದಯದ ಗೋಪ್ಯ ಸ್ಥಳದಲ್ಲಿ ಅಡಗಿಕೊಂಡಿದೆ. ಮತ್ತು ಹೀಗೂ ಹೇಳಲಾಗಿದೆ.—ಮೂಲವನ್ನು ಮೇಲ್ಭಾಗದಲ್ಲಿ ಹೊಂದಿರುವ, ಮೂರು ಪಾದಗಳುಳ್ಳ ಬ್ರಹ್ಮನಾಗಿರುವ, ಶಾಖೆಗಳಾಗಿ ಆಕಾಶ, ಅಗ್ನಿ, ಉದಕ, ಭೂಮಿ ಇವುಗಳನ್ನು ಹೊಂದಿರುವ ಏಕೋಶ್ವತ್ಥ ಎಂಬುದಾಗಿ ಕರೆಯಲ್ಪಡುವ, ಬ್ರಹ್ಮನೆಂದೆನಿಸಿರುವ ಇವನಿಂದ ಹೊರಡುವ ಕಿರಣಗಳೇ ಸೂರ್ಯನೆಂದೂ, ಬೇರೇ ಕಿರಣಗಳು ಓಂಕಾರವೆಂದೂ ಹೇಳಲ್ಪಟ್ಟಿದೆ. ಆದ್ದರಿಂದ ಓಂಕಾರವನ್ನು ಅವಿರತ ಉಪಾಸನೆ ಮಾಡಬೇಕು. ಹೀಗೆ ಮಾಡುವುದರಿಂದ ಅಪೇಕ್ಷಿಸುವುದೆಲ್ಲವನ್ನೂ ಪಡೆಯಬಹುದು ಎಂದು ವೇದವು ಹೇಳುತ್ತದೆ. ಈ ಬೀಜಾಕ್ಷರವೇ ಪುಣ್ಯ, ಈ ಬೀಜಾಕ್ಷರವೇ ಪರ, ಈ ಬೀಜಾಕ್ಷರವನ್ನು ತಿಳಿದುಕೊಂಡು ಯಾರು ಯಾವುದನ್ನು ಬಯಸುತ್ತಾರೋ ಅದು ಅವರಿಗೆ ಲಭಿಸುತ್ತದೆ.

ಅಥಾನ್ಯತ್ರಾಪ್ಯುಕ್ತಂ । ಸ್ವನವತ್ಯೇಷಾಽಸ್ಯ ತನೂರೋಮಿತಿ । ಸ್ತ್ರೀ, ಪುಂ, ನಪುಂಸಕೇತಿ ಲಿಂಗವತ್ಯೇಷಾ । ಅಥಾಗ್ನಿರ್ವಾಯುರಾದಿತ್ಯ ಇತಿಭಾಸ್ವತ್ಯೇಷಾ । ಅಥ ಬ್ರಹ್ಮಾರುದ್ರೋ ವಿಷ್ಣುರಿತ್ಯಧಿಪತಿ ವತ್ಯೇಷಾ । ಅಥಗಾರ್ಹಪತ್ಯೋ ದಕ್ಷಿಣಾಗ್ನಿರಾಹವನೀಯಾ ಇತಿ ಮುಖವತ್ಯೇಷಾ । ಅಥ ಋಗ್ಯಜುಃ ಸಾಮೇತಿ ವಿಜ್ಞಾನವತ್ಯೇಷಾ । ಅಥಭೂರ್ಭುವಃಸ್ವರಿತಿ ಲೋಕವತ್ಯೇಷಾ । ಅಥಭೂತಂ ಭವ್ಯ ಭವಿಷ್ಯದಿತಿ ಕಾಲವತ್ಯೇಷಾ । ಅಥ ಪ್ರಾಣೋಗ್ನಿಃ ಸೂರ್ಯ ಇತಿತ್ಯೇ ಪ್ರತಾಪವತ್ಯೇಷಾ । ಅಥಾನ್ನಮಾಪಃ ಚಂದ್ರಮಾ ಇತ್ಯಾಪ್ಯಾಯನವತ್ಯೇಷಾ । ಅಥಬುದ್ಧಿರ್ಮನೋಽಹಂಕಾರ ಇತಿಚೇತನವತ್ಯೇಷಾ । ಅಥ ಪ್ರಾಣೋಽಪಾನೋವ್ಯಾನೋ ಇತಿ ಪ್ರಾಣವತ್ಯೇಷಾ । ಇತ್ಯತ ಓಮಿತ್ಯುಕ್ತೇನೈತಾಃ ಪ್ರಸ್ತುತಾ ಅರ್ಚಿತಾ ಅರ್ಪಿತಾಭವನ್ತಿ । ಇತ್ಯೇವಂಹ್ಯಾಹ । ಏತದ್ವೈ ಸತ್ಯಕಾಮ ಪರಂಚಾಪರಂಚ ಬ್ರಹ್ಮಯದೋಮಿತ್ಯೇತದಕ್ಷರಮಿತಿ ॥೫॥

ಅದು ಬೇರೊಂದು ಕಡೆ ಹೀಗೆ ಹೇಳಲಾಗಿದೆ.—ಈ ಓಂಕಾರವು ಗಂಡು, ಹೆಣ್ಣು, ನಪುಂಸಕ ಎಂಬ ಲಿಂಗಗಳ ಆತ್ಮಗಳ ಸಂಕೇತ; ಬೆಂಕಿ, ಗಾಳಿ, ಸೂರ್ಯ ಇವು ಜ್ಯೋತಿ ಸ್ವರೂಪಗಳ ಆತ್ಮ ಸಂಕೇತ; ಬ್ರಹ್ಮ, ರುದ್ರ, ವಿಷ್ಣು ಇವು ಅಧಿಪತಿಗಳ ಆತ್ಮ ಸಂಕೇತ; ಗಾರ್ಹಪತ್ಯ, ದಕ್ಷಿಣಾಗ್ನಿ, ಆಹವನೀಯ, ಇವು ಯಜ್ಞಗಳ

ಸಂಕೇತ; ಋಕ್, ಯಜುಸ್, ಸಾಮ ಎಂಬಿವು ವೇದಗಳ ಸಂಕೇತ; ಭೂಮಿ, ಅಂತರಿಕ್ಷ, ಆಕಾಶಗಳೆಂಬಿವು ಲೋಕಗಳ ಸಂಕೇತ; ಭೂತ, ಭವ್ಯ, ಭವಿಷ್ಯತ್ ಎಂಬಿವು ಕಾಲದ ಸಂಕೇತ; ಪ್ರಾಣ, ಅಗ್ನಿ, ಸೂರ್ಯ ಎಂಬಿವು ಪ್ರತಾಪ ಸಂಕೇತ; ಅನ್ನ ನೀರು ಚಂದ್ರ ಎಂಬಿವು ಆಪ್ಯಾಯನದ ಸಂಕೇತ; ಬುದ್ಧಿ, ಮನಸ್ಸು, ಅಹಂಕಾರ ಎಂಬಿವು ಚೇತನ ಸಂಕೇತ; ಪ್ರಾಣ, ಅಪಾನ, ವ್ಯಾನ ಎಂಬಿವು ಪ್ರಾಣ ಸಂಕೇತ; ಆದ್ದರಿಂದ ಓಂಕಾರ ಉಚ್ಚಾರ ಮಾತ್ರದಿಂದ ಈ ಎಲ್ಲಾ ಪ್ರಾಣ ಸಂಕೇತಗಳನ್ನೂ ಹೊಗಳಿ, ಅರ್ಚಿಸಿ, ಸಮರ್ಪಣೆ ಮಾಡಿಕೊಂಡಂತೆ ಆಗುತ್ತದೆ. ಆದ್ದರಿಂದ ಈ ಓಂಕಾರವನ್ನು ಪರಾ ಮತ್ತು ಅಪರಾ ಬ್ರಹ್ಮನೆಂದು ಸತ್ಯಕಾಮರು ತಿಳಿಯುತ್ತಾರೆ.

ಅಥ ವ್ಯಾಹೃತಂವಾ ಇದಮಾಸೀತ್ । ಸ ಸತ್ಯಂಪ್ರಜಾಪತಿ ಸ್ತಪಸ್ತಪ್ತ್ವಾನು ವ್ಯಾಹರದ್ಭೂರ್ಭುವಃಸ್ವರಿತಿ । ಏಷೈವಾಸ್ಯ ಪ್ರಜಾಪತೇಃಸ್ಥವಿಷ್ಠಾ ತನೂರ್ಯ ಲೋಕವತೀತಿ । ಸ್ವರಿತ್ಯಸ್ಯಾಃಶಿರಃ । ನಾಭೀರ್ಭುವಃ । ಭೂಃಪಾದಃ ಆದಿತ್ಯಶ್ಚಕ್ಷುಃ । ಚಕ್ಷುರಾಯತ್ತಾ ಹಿ ಪುರುಷಸ್ಯ ಮಹತೀರ್ಮಾತ್ರಾಃ ಚಕ್ಷುಷಾಹ್ಯಯಂ ಮಾತ್ರಾಶ್ಚರತಿ। ಸತ್ಯಂವೈಚಕ್ಷುಃ। ಅಕ್ಷಿಣ್ಯವಸ್ಥಿತೋ ಹಿ ಪುರುಷಃ । ಸರ್ವಾರ್ಥೇಷುಚರತಿ । ಏತಸ್ಮಾದ್ಭೂಭುವಃಸ್ವರಿತ್ಯುಪಾಸೀತ ಅನೇನಹಿ ಪ್ರಜಾಪತಿರ್ವಿಶ್ವಾತ್ಮಾ ವಿಶ್ವಚಕ್ಷುರಿವೋಪಾಸಿತೋಭವತಿ ಇತ್ಯೇವಂಹ್ಯಾಹ । ಏಷಾವೈಪ್ರಜಾಪತೇರ್ವಿಶ್ವಭೃತ್ತನೂಃ । ಏತಸ್ಯಾಮಿದಂ ಸರ್ವಮಂತರ್ಹಿತಂ । ಅಸ್ಮಿಂಶ್ಚ ಸರ್ವಸ್ಮಿನ್ನೇಷಾಽನ್ತರ್ಹಿತೇತಿ । ತಸ್ಮಾದೇಷೋಪಾಸೀತ ॥೬॥

ಪ್ರಾರಂಭದಲ್ಲಿ ಈ ಲೋಕವು ಪೂರ್ತಿಯಾಗಿರಲಿಲ್ಲ. ಆಗ ಸತ್ಯಪ್ರಜಾಪತಿಯು ತಪಸ್ಸನ್ನಾಚರಿಸಿದನು. ಆಗ ಅವನು ಭೂಃ ಭುವಃ ಸುವಃ ಎಂಬ ಸ್ವರಗಳನ್ನು ಉಚ್ಚರಿಸಿದನು. ಇದು ಪ್ರಜಾಪತಿಯ ವಿಕಾರ ರೂಪವಾಯಿತು. ಅದರ ತಲೆಯು ಆಕಾಶವಲ್ಲಾಯಿತು. ಅದರ ಹೊಕ್ಕಳು ಅಂತರಿಕ್ಷದಲ್ಲಾಯಿತು; ಪಾದಗಳು ಭೂಮಿಯಲ್ಲಾಯಿತು; ಕಣ್ಣುಗಳು ಸೂರ್ಯನಲ್ಲಾಯಿತು; ಪುರುಷನ ಅಂಗ ಗಳಲ್ಲಿ ಕಣ್ಣುಗಳು ಮಹತ್ ಸ್ಥಾನವನ್ನು ಪಡೆಯುತ್ತವೆ. ಏಕೆಂದರೆ ಕಣ್ಣುಗಳಿಂದ ಎಲ್ಲವನ್ನೂ ಅಳೆಯಬಹುದು. ಪುರುಷನು ಎಲ್ಲಾ ಪ್ರಕೃತಿಗಳನ್ನೂ ವೀಕ್ಷಿಸುತ್ತ ಚಲಿಸುತ್ತಿದ್ದರೂ ಕಣ್ಣುಗಳು ಮಾತ್ರ ಅಚಲವಾಗಿರುತ್ತೆ. ಆದ್ದರಿಂದ ಎಲ್ಲರೂ, ಭೂ, ಭುವಃ ಸುವಃ, ಎಂಬುದನ್ನು ಉಪಾಸಿಸಬೇಕು. ಇದರಿಂದ ಪ್ರಜಾಪತಿ ಯನ್ನು ವಿಶ್ವಾತ್ಮ, ವಿಶ್ವಚಕ್ಷು ಎಂದು ಉಪಾಸಿಸಿದಂತಾಗುತ್ತದೆ. ಆದ್ದರಿಂದ

ಹೀಗೆ ಹೇಳಲಾಗಿದೆ. ಇದು ಎಲ್ಲವುದಕ್ಕೂ ಆಧಾರವಾದ ಪ್ರಜಾಪತಿಯ ರೂಪ. ಇದರಿಂದ ಇವೆಲ್ಲವೂ ಅಂತರ್ಹಿತವಾಗಿದೆ. ಮತ್ತು ಇದು ಈ ಲೋಕಗಳಲ್ಲೆಲ್ಲಾ ಅಂತರ್ಹಿತವಾಗಿದೆ. ಆದ್ದರಿಂದ ಇದನ್ನೇ ಎಲ್ಲರೂ ಉಪಾಸನೆ ಮಾಡಬೇಕು.

ತತ್ಸವಿತೃವರೇಣ್ಯಂ ಇತಿ । ಅಸೌವಾ ಆದಿತ್ಯಃ ಸವಿತಾ । ಸವಾ ಏವಂ ಪ್ರವರಣೀಯ ಆತ್ಮಕಾಮೇನೇತ್ಯಾಹುರ್ಬ್ರಹ್ಮವಾದಿನಃ । ಅಥ ಭರ್ಗೋದೇವಸ್ಯ ಧೀಮಹೀತಿ । ಸವಿತಾವೈದೇವಃ। ತತೋಯೋಽಸ್ಯ ಭರ್ಗಾಖ್ಯಸ್ತಂ ಚಿನ್ತಯಾಮಿತ್ಯಾಹು ಬ್ರಹ್ಮವಾದಿನಃ ಅಥಧೀಯೋಯೋನಃ ಪ್ರಚೋದಯಾದಿತಿ । ಬುದ್ಧಯೋ ವೈಧಿಯಃತಾಯೋಽಸ್ಮಾಕಂ ಪ್ರಚೋದಯಾದಿತ್ಯಾಹುರ್ಬ್ರಹ್ಮವಾದಿನಃ । ಅಥ ಭರ್ಗಾ ಇತಿಯೋಹವಾ ಅಮುಷ್ಮಿನ್ನಾದಿತ್ಯೇನಿಹಿತಸ್ತಾರಕೋಽಕ್ಷಿಣಿ ಭರ್ಗಾಖ್ಯಃ । ಭಾಭಿರ್ಗತಿ ರಹಸ್ಯಹೀತಿ ಭರ್ಗಃ । ಭರ್ಜಯತೀವೈಷ ಭರ್ಗಇತಿರುದ್ರೋಬ್ರಹ್ಮವಾದಿನಃ । ಅಥಭಇತಿಭಾಸಯತೀಮಾಲ್ಲೋಕಾನ್ರ ಇತಿರಂಜಯತೀ ಮಾನಿಭೂತಾನಿ । ಗಇತಿಗಚ್ಛನ್ತ್ಯಸ್ಮಿನ್ನಾಗಚ್ಛನ್ತ್ಯಸ್ಮಾದಿಮಾಃಪ್ರಜಾಃ । ತಸ್ಮಾದ್ಭರಗತ್ವಾದ್ಭರ್ಗಃ । ಶಶ್ವತ್ । ಸೂರ್ಯಮಾನಾತ್ ಸೂರ್ಯಃ । ಸವನಾತ್ಸವಿತಾ । ಆದಾನಾದಾದಿತ್ಯ । ಪವನಾತ್ಪವನಃ । ಅಥಾಽಽಪೋಽಪ್ಯಾಯನಾದಿತ್ಯೇವಂಹ್ಯಾಹ। ಖಲ್ವಾತ್ಮನೋಽಽತ್ಮಾನೇತಾಽಮೃತಾಖ್ಯಶ್ಚೇತಾಮನ್ತಾಗನ್ತಾತ್ಸ್ರಷ್ಟಾಽಽನಂದಯಿತಾ ಕರ್ತಾವಕ್ತಾರಸಇತಾ, ಘ್ರಾತಾ, ದ್ರಷ್ಟಾ, ಶ್ರೋತಾ, ಸ್ಪೃಶತಿಚ ವಿಭುರ್ವಿಗ್ರಹೇ ಸಂನಿವಿಷ್ಟ ಇತ್ಯೇವಂಹ್ಯಾಹ । ಅಥಯತ್ರದ್ವೈತೀ ಭೂತಂ ವಿಜ್ಞಾನಂ ತತ್ರಹಿ ಶೃಣೋತಿ, ಪಶ್ಯತಿ, ಜಿಘ್ರತಿ, ರಸಯತಿ, ಚೈವ ಸ್ಪರ್ಶಯತಿ । ಸರ್ವಮಾತ್ಮಾ ಜಾನೀತೇತಿ । ಯತ್ರಾದ್ವೈತೀಭೂತಂ ವಿಜ್ಞಾನಂ ಕಾರ್ಯಕಾರಣ ಕರ್ಮನಿರ್ಮುಕ್ತಂನಿರ್ವಚನಮನೌಪಮ್ಯ ನಿರುಪಾಖ್ಯಂ । ಕಿಂತತ್ ಅವಾಚ್ಯಂ ||೭||

ಆ ಸವಿತೃವಿನ ಉಲ್ಲಾಸಕರವಾದ ಪ್ರಕಾಶ, ಅಲ್ಲಿರುವ ಆದಿತ್ಯನೇ ಸವಿತೃ. ಅವನನ್ನು ಹೀಗೆಯೇ ಅರಿತುಕೊಳ್ಳಬೇಕು ಎಂಬುದಾಗಿ ಆತ್ಮಕಾಮಿಯಾದ ಬ್ರಹ್ಮವಾದಿಗಳು ತಿಳಿಸುತ್ತಾರೆ. ನಾವೂ ಕೂಡ ಆ ತೇಜೋಮೂರ್ತಿಯಾದ ಸವಿತೃದೇವನ ಉಪಾಸನೆ ಮಾಡೋಣ. ಆದ್ದರಿಂದ ನಾನು ಆ ತೇಜೋಮೂರ್ತಿಯೆನಿಸಿದವನನ್ನು ಉಪಾಸನೆ ಮಾಡುತ್ತೇನೆ. ಹೀಗೆಂದು ಬ್ರಹ್ಮವಾದಿಗಳು ಹೇಳುತ್ತಾರೆ. ಅವನು ನಮ್ಮ ಚಿಂತನೆಗಳಿಗೆ ಪ್ರಚೋದನೆಯನ್ನು ಕೊಡಲಿ. ಚಿಂತನೆ ಅಥವಾ ತಪಸ್ಸು ಇವುಗಳನು

ಸಮಗಾಗಿ ಪ್ರಚೋದಿಸಲಿ. ಈ ರೀತಿಯಾಗಿ ಬ್ರಹ್ಮವಾದಿಗಳು ಹೇಳುತ್ತಾರೆ. ಯಾರು ತೇಜೋಮೂರ್ತಿಗಳಾಗಿ ಆ ಸೂರ್ಯನಲ್ಲಿಯೂ ಜೀವಿಗಳ ಕಣ್ಣು ಗುಡ್ಡೆಗಳಲ್ಲಿಯೂ, ಅಡಗಿರುತ್ತಾರೆಯೋ ಅದೇ ತೇಜಸ್ಸು. ಅವನ ಚಲನೆಯು ಕಿರಣಗಳ ಮೂಲಕ ನಡೆಯುವುದರಿಂದ ಹಾಗೆ ಕರೆಯಲಾಗಿದೆ. ಅದು ಬತ್ತಿಹೋಗುವ ಗುಣವುಳ್ಳದ್ದರಿಂದ ರುದ್ರನೆಂದೂ ಕರೆಯಲಾಗಿದೆ. ಹೀಗೆಂದು ಬ್ರಹ್ಮವಾದಿಗಳು ತಿಳಿಸುತ್ತಾರೆ. ಯಾರು ಈ ಲೋಕವನ್ನು ಬೆಳಗಿಸುವರೋ ಅವರಿಗೆ 'ಭಾ' ಎಂದೂ ; ಜೀವಿಗಳಿಗೆ ಸಂತೋಷ ನೀಡುವುದರಿಂದ 'ರ' ಎಂದೂ ; ಜೀವಿಗಳು ಅವನಲ್ಲಿ ಪ್ರವೇಶಿಸಿ ಹೊರ ಬರುವುದರಿಂದ 'ಗ' ಎಂತಲೂ ; ಕರೆಯಲಾಗಿದೆ. ಈ ಮೂರು ವರ್ಣಗಳಿಂದ ಸೇರಿ 'ಭರ್ಗ' ಎಂದಾಗಿದೆ. ಎಲ್ಲಾ ಕಡೆಗಳಿಂದ ಪ್ರಸವವನ್ನುಂಟು ಮಾಡುವುದರಿಂದ ಇವನನ್ನು ಸೂರ್ಯ ಎನ್ನುತ್ತಾರೆ. ಎಲ್ಲವನ್ನೂ ಒಟ್ಟುಗೂಡಿಸುವುದರಿಂದ ಅಥವಾ ಬೆಳಗಿಸುವುದರಿಂದ ಸವಿತೃ ಎನ್ನಲಾಗಿದೆ. ಆ ದಾನದಿಂದ ಆದಿತ್ಯನೆಂದೆನಿಸಿಕೊಳ್ಳುತ್ತಾನೆ; ಪಾವನತ್ವದಿಂದ ಪವನನಾಗಿದ್ದಾನೆ; "ಆಪ" ಎಂಬುದರಿಂದ ಆಪ್ಯಾಯನನಾಗಿದ್ದಾನೆ. ಏಕೆಂದರೆ ಅದು ಹೀಗೆ ಹೇಳಲಾಗಿದೆ. ಆತ್ಮನಿಂದ ಬೇರೊಂದು ಆತ್ಮಕ್ಕೆ ಭರವಸೆ ನೀಡಿದ್ದರಿಂದ ಅವನು ನೇತನಾಗಿ ಅಮೃತನೂ, ಶ್ವೇತನೂ, ಮನ್ತನೂ, ಗನ್ತನೂ, ಸೃಷ್ಟನೂ. ಆನಂದನೂ, ಕರ್ತನೂ, ವಕ್ತಾರನೂ, ರಸಯಿತನೂ, ಘ್ರಾತನೂ, ದ್ರಷ್ಟೃವೂ, ಶ್ರೋತೃವೂ, ಸ್ಪೃಶನೂ, ವಿಭುವೂ, ಆಗಿದ್ದು ಈ ದೇಹವನ್ನು ಅಲಂಕರಿಸಿದ್ದಾನೆ. ಆದ್ದರಿಂದ ಅದು ಹೀಗೆ ಹೇಳಲಾಗಿದೆ. ಎಲ್ಲಿ ದ್ವೈತೀಭೂತವಾದ ಜ್ಞಾನವು ಇರುತ್ತದೆಯೋ ಅಲ್ಲಿ ಕೇಳುತ್ತಾನೆ, ನೋಡುತ್ತಾನೆ, ರುಚಿಸುತ್ತಾನೆ, ಆಘ್ರಾಣಿಸುತ್ತಾನೆ, ಮತ್ತು ಸ್ಪರ್ಶಿಸುತ್ತಾನೆ. ಸರ್ವಭೂತಾತ್ಮವಾದ ಅವನಿಗೆ ಎಲ್ಲಿ ದ್ವೈತೀ ಭೂತ ಕಾರಣದಿಂದ ಮೌನವಾಗಿರುವ; ಹೋಲಿಕೆ ಮಾಡಲಾಗದ, ನಿರ್ಮುಕ್ತವಾದ ಕಾರ್ಯಗಳು ನಡೆಯುವುದೆಂದು ಬಲ್ಲ ಶಕ್ತಿ ಯಾವುದು ? ಅದನ್ನು ಹೇಳಲು ಯಾರಿಗೆ ತಾನೇ ಸಾಧ್ಯ ?

ಏಷಹಿಖಲ್ವಾತ್ಮೇಶಾನಃ ಶಂಭುರ್ಭವೋರುದ್ರಃ ಪ್ರಜಾಪತಿ ರ್ವಿಶ್ವಸೃಗ್ಧಿರಣ್ಯಗರ್ಭಃ । ಸತ್ಯಂಪ್ರಾಣೋಹಂಸಃ । ಶಾಸ್ತಾ ವಿಷ್ಣುರ್ನಾರಾಯಣೋಽರ್ಕಃ ಸವಿತಾ ಧಾತಾವಿಧಾತಾಸಮ್ರಾಡಿಂದ್ರ ಇಂದುರಿತಿ । ಯಏಷತಪತ್ಯಗ್ನಿರಿವಾಗ್ನಿನಾಪಿಹಿತಃ । ಸಹಸ್ರಾಕ್ಷೇಣ ಹಿರಣ್ಮಯೇನಾಂಡೇನ । ಏಷವಾವ ಜಿಜ್ಞಾಸಿತವ್ಯೋಽನ್ವೇಷ್ಟವ್ಯಃ ಸರ್ವಭೂತೇಭ್ಯೋಽಭಯಂದತ್ವಾರಣ್ಯಂಗತ್ವಾಽಥಬಹಿಃ ಕೃತ್ವೇಂದ್ರಿಯಾರ್ಥಾನ್ ಸ್ವಾಚ್ಛರೀರಾದುಪಲಭೇತೈನಮಿತಿ । ವಿಶ್ವೋ

ರೂಪಂ ಹರಿಣಂ ಜಾತವೇದಸಂ ಪರಾಯಣಂ ಜ್ಯೋತಿರೇಕಂತಪಸ್ತಂ | ಸಹಸ್ರರಶ್ಮಿಃ ಶತಧಾವರ್ತಮಾನಃ ಪ್ರಾಣಃ ಪ್ರಜಾನಾಮುದಯತ್ಯೇಷ ಸೂರ್ಯಃ ||೮||

ಈ ಆತ್ಮನು ಅಧಿಪತಿಯಾಗಿದ್ದು, ಶಂಭು, ಭವ, ರುದ್ರ, ಪ್ರಜಾಪತಿ, ವಿಶ್ವಸೃಕ್, ಹಿರಣ್ಯಗರ್ಭ, ಸತ್ಯ, ಪ್ರಾಣ, ಹಂಸ, ಶಾಸ್ತಾ, ವಿಷ್ಣು, ನಾರಾಯಣ, ಅರ್ಕ, ಸವಿತೃ, ಧಾತ, ವಿಧಾತ, ಸಾಮ್ರಾಟ್, ಇಂದ್ರ. ಚಂದ್ರ ಎಂಬುದಾಗಿ ಕರೆಯಲ್ಪಟ್ಟಿದ್ದಾನೆ. ಸಾವಿರ ಕಣ್ಣುಗಳುಳ್ಳ ಹಿರಣ್ಮಯವಾದ ಪೊಟ್ಟೆಯೊಳಗೆ ಅಡಗಿಕೊಂಡಿರುವ ಶಾಖವನ್ನು ಬೆಂಕಿಯ ರೂಪದಲ್ಲಿ ಒಬ್ಬರಿಂದೊಬ್ಬರಿಗೆ ಕೊಡಬಲ್ಲವನಾಗಿದ್ದಾನೆ. ಅವನನ್ನು ಎಲ್ಲರೂ ಅರಿತುಕೊಳ್ಳಲೇಬೇಕು. ಅವನನ್ನು ಉಪಾಸನೆ ಮಾಡಲೂಬೇಕು. ಅವನು ಸರ್ವಭೂತಗಳ ಭಯವನ್ನು ನಿವಾರಣೆ ಮಾಡುತ್ತಾನೆ. ಉಪಾಸಕನು ಅಡವಿಗೆ ತೆರಳಿ ಹೊರ ಗೆಕಾಣುವ ನೋಟಗಳನ್ನು ತನ್ನ ಇಂದ್ರಿಯಗಳ ಮೂಲಕ ಮರೆಮಾಡಿಕೊಂಡು ತನ್ನ ದೇಹವನ್ನೇ ಆಕ್ರಮಿಸಿಕೊಂಡಿರುವ ಆತ್ಮನನ್ನು ಅರ್ಥಮಾಡಿಕೊಳ್ಳಲಿ. ಯಾರು ವಿಶ್ವರೂಪನೋ, ಸುವರ್ಣಪ್ರಭೆಯುಳ್ಳವನೋ, ಜಾತವೇದನೋ, ಪರಾಯಣನೋ, ಏಕೋಜ್ಯೋತಿಯೋ, ಶಾಖವನ್ನು ಕೊಡುವವನೋ, ಸಹಸ್ರ ರಶ್ಮಿಯುಳ್ಳವನೋ, ನೂರು ಸ್ಥಳಗಳಲ್ಲಿ ವಾಸಿಸುವನೋ, ಜೀವಿಗಳ ಪ್ರಾಣನೋ, ಉದಯಿಸುತ್ತಿರುವ ಸೂರ್ಯನೋ, ಅಂತಹವನನ್ನು ಉಪಾಸನೆ ಮಾಡಬೇಕು.

ತಸ್ಮಾದ್ವಾ ಏಷ ಉಭಯಾತ್ಮೈವಂ ವಿದಾತ್ಮನ್ಯೇವಾಭಿಧ್ಯಾಯತ್ಯಾತ್ಮನ್ನೇವ ಯಜನೀತಿ–ಧ್ಯಾನಂ ಪ್ರಯೋಗಸ್ಥಂ ಮನೋವಿದ್ಭಿಃ–ಷ್ಟುತಂ | ಮನಃಪೂತಿ ಮುಚ್ಛಿಷ್ಟೋಪಹತಮಿತ್ಯನೇನ ತತ್ಪಾವಯೇತ್ | ಮಂತ್ರಂ ಪಠತಿ | ಉಚ್ಛಿಷ್ಟೋಚ್ಛಿಷ್ಟೋಪಹತಂಯಚ್ಚಪಾಪೇನದತ್ತಂ ಮೃತಭೂತಕಾದ್ವಾ| ವಸೋಃ ಪವಿತ್ರಮಗ್ನಿಃಸವಿತುಶ್ಚರಶ್ಮಯಃಪುನಸ್ತ್ವನ್ನಂಮಮದುಷ್ಕೃತಂ ಚಯದನ್ಯತ್ | ಅಗ್ನಿಃಪುರಸ್ತಾತ್ ಪರಿದಧಾತಿ | ಪ್ರಾಣಾಯಸ್ವಾಹಾಽಪಾನಾಯಸ್ವಾಹಾ, ವ್ಯಾನಾಯಸ್ವಾಹಾ, ಸಮಾನಾಯಸ್ವಾಹಾ, ಉದಾನಾಯಸ್ವಾಹೇತಿ ಪಂಚಭಿರಭಿಜುಹೋತಿ | ಅಥಾವಶಿಷ್ಟಂಯತವಾಗಶ್ನಾತಿ | ಅತೋಽದ್ಭಿರ್ಭೂಯಏವೋಪರಿಷ್ಟಾತ್ ಪರಿದಧಾತಿ | ಆಚಮ್ಯಾತ್ಮೇಭೂತ್ವಾಽಽತ್ಮೇಜ್ಯಾನಃ ಪ್ರಾಣೋಽಗ್ನಿರ್ವಿಶ್ವೋಽಸೀತಿ ಚ ದ್ವಾಭ್ಯಾಮಾತ್ಮಾನಮಭಿಧ್ಯಾಯೇತ್

ಪ್ರಾಣೋಽಗ್ನಿಃಪರಮಾತ್ಮಾವೈ ಪಂಚವಾಯುಃ ಸಮಾಶ್ರಿತಃ । ಸಪ್ರೀತಃ ಪ್ರೀಣಾತುವಿಶ್ವಂ ವಿಶ್ವಭುಕ್ । ವಿಶ್ವೋಽಸಿವೈಶ್ವಾನರೋಽಸಿವಿಶ್ವಂತ್ವಯಾಧಾರ್ಯ ತೇಜಾಯಮಾನಂ । ವಿಶನ್ತುತ್ವಾಮಾಹುತಯಶ್ಚ ಸರ್ವಾಪ್ರಜಾಸ್ತತ್ರ ಯತ್ರವಿಶ್ವಾಮೃತೋಽಸೀತಿ । ಏವಂ ನವವಿಧಿನಾಖಲ್ವನೇ ನಾತ್ಮಾಽನ್ನತ್ವಂ ಪುನರುಪೈತಿ ॥೯॥

ಆದ್ದರಿಂದ ಯಾರು ಈ ಉಭಯಾತ್ಮರಾದ ಪ್ರಾಣ ಮತ್ತು ಜ್ಯೋತಿಯನ್ನು ತಮ್ಮ ಆತ್ಮನೆಂದು ಅರಿತುಕೊಂಡು ತನ್ನ ಆತ್ಮನ ಮೇಲೆಯೇ ತಪಸ್ಸನ್ನಾಚರಿಸಿ, ತನ್ನ ಆತ್ಮನಿಗೆ ಆಹುತಿಯನ್ನು ಅರ್ಪಿಸಬೇಕು. ಇಂತಹ ಪ್ರಯೋಗಗಳಲ್ಲಿ ಯಾರು ತಮ್ಮ ಮನಸ್ಸನ್ನು ಕೇಂದ್ರೀಕರಿಸಿ ತಪವನ್ನಾಚರಿಸುವರೋ ಅವರು ಜ್ಞಾನಿಗಳಿಂದ ಸ್ತುತಿಸಲ್ಪಡುತ್ತಾರೆ. ಮಂತ್ರ ಪಠನೆ ಇಂದ ಮೊದಲು ತಮ್ಮ ಮನಸ್ಸಿನ ಉಚ್ಛಿಷ್ಟ ವನ್ನು ಶುಚಿ ಮಾಡಿಕೊಳ್ಳಬೇಕು. (ಆಗ ಉಚ್ಛಿಷ್ಟೋ ಎಂಬಲ್ಲಿಂದ ಪ್ರಾರ್ಥಿಯಾಗಿ ಮಂತ್ರವನ್ನು ಹೇಳಿಕೊಂಡುಹವನ ಮಾಡಬೇಕು) ಅದರ ಅರ್ಥ ಹೀಗಿದೆ: ಉಚ್ಛಿಷ್ಟ ಗಳು ಮತ್ತು ಉಚ್ಛಿಷ್ಟಗಳಿಂದ ಅಶುಚಿಯಾಗಿರುವುದು, ಪಾಪ ಪೂರಿತನಿಂದ ಕೊಡಲ್ಪಟ್ಟವುಗಳು, ಭ್ರೂಣಹತ್ಯದಿಂದಾಗಿ ಅಪವಿತ್ರವಾಗಿರುವುದು, ಇವುಗಳೆಲ್ಲ ವನ್ನೂ ಪವಿತ್ರರಾದ ವಸು, ಅಗ್ನಿ, ಸವಿತೃಕಿರಣಗಳು, ನನ್ನ ರಕ್ತವನ್ನು ಮತ್ತು ನನ್ನ ದೇಹದಲ್ಲಿರಬಹುದಾದ ಕೆಡುಕುಗಳನ್ನೂ ಈ ಆಹಾರವನ್ನು ತೆಗೆದುಕೊಳ್ಳುವ ಮುಂಚೆಪರಿಶುದ್ಧಮಾಡಲಿ ಎಂದು ಪ್ರಾಣಾಯಾಮವನ್ನೂ ಆಚಮನವನ್ನೂ ಮಾಡಿ ಪ್ರಾಣಾಯಸ್ವಾಹಾ, ಅಪಾನಾಯಸ್ವಾಹಾ, ವ್ಯಾನಾಯಸ್ವಾಹಾ, ಉದಾನಾಯಸ್ವಾಹಾ, ಸಮಾನಾಯಸ್ವಾಹಾ ಎಂದು ಐದು ಬಾರಿ ಅಗ್ನಿಯಲ್ಲಿ ಆಹುತಿಯನ್ನು ಮಾಡಬೇಕು. ತರುವಾಯ ಉಳಿದುದನ್ನು ತಾನು ಮೌನವಾಗಿ ಭಕ್ಷಿಸಬೇಕು. ತರುವಾಯ ಪುನರಾಚಮನವನ್ನು ಮಾಡಿ ತಿಂದುದನ್ನು ಆತ್ಮನಿಗೆ ಅರ್ಪಣೆ ಮಾಡಿ, ಅವನನ್ನು ಪ್ರಾಣ ಮತ್ತು ಅಗ್ನಿಯ ಎರಡು ಸ್ತುತಿಗಳಿಂದ ಆರಾಧಿಸಬೇಕು. ಪ್ರಾಣ ಮತ್ತು ಅಗ್ನಿಯು ಎಲ್ಲವೂ ನೀವಾಗಿದ್ದೀರಿ. ಜೀವಾತ್ಮನು ತನ್ನ ಪಂಚ ಪ್ರಾಣಗಳೊಡನೆ ಅಂತರ್ಗತನಾಗಿದ್ದಾನೆ. ಅವನು ಸಂತೃಪ್ತಿ ಹೊಂದಿದ ತರುವಾಯ ಎಲ್ಲರನ್ನೂ ಸಂತೋಷಪಡಿಸಲಿ. ಸಂಪ್ರೀತನಾದ ನೀನೇ ವೈಶ್ವಾನರನಾದ ಅಗ್ನಿ ಯಾಗಿದ್ದೀಯೆ. ನಿನ್ನ ತೇಜಸ್ಸಿನಿಂದಲೇ ಎಲ್ಲ ಜೀವಿಗಳೂ ಜನನ ವೃದ್ಧಿ ಹೊಂದುತ್ತವೆ. ಎಲ್ಲ ಹವ್ಯ ಕವ್ಯಗಳೂ ನಿನ್ನನ್ನು ಸೇರಲಿ. ನೀನು ಇರುವಲ್ಲಿ ಮಾತ್ರ ಎಲ್ಲ ಜೀವಿಗಳೂ ಇರಬಲ್ಲವು. ನೀನು ಇರುವಲ್ಲಿ ಅಮೃತತ್ವವೂ ಉಂಟು. ಯಾರು ಈ ರೀತಿಯಾಗಿ ಆಚರಣೆಯನ್ನು ಮಾಡಿ ಆಹಾರವನ್ನು ಸೇವಿಸುತ್ತಾರೋ ಅವರು ಅನ್ನದ ಮೇಲೆ ಅವಲಂಬಿಸಿಕೊಂಡು ಪುನಃ ಬಾರದವರಾಗುತ್ತಾರೆ.

ಅಥಾಪರಂವೇದಿತವ್ಯಂ | ಉತ್ತರೋ ವಿಕಾರೋಽಸ್ಯಾಽಽತ್ಮಯಜ್ಞಸ್ಯಯಥಾಽ ನ್ನಮನ್ನಾದಶ್ಚೇತಿ|ಅಸ್ಯೋಪವ್ಯಾಖ್ಯಾನಂ| ಪುರುಷಶ್ಚೇತಾಪ್ರಧಾನಾನ್ತಃ | ಸ್ಥಃ ಸವಿಷಭೋಕ್ತಾಪ್ರಾಕೃತಮನ್ನಂಭುಂಕ್ತಾ ಇತಿ| ತಸ್ಯಾಯಂಭೂತಾತ್ಮಾಹ್ಯನ್ನಂ| ಅಸ್ಯಕರ್ತಾಪ್ರಧಾನಃ | ತಸ್ಮಾತ್ ತ್ರಿಗುಣಂಭೋಜ್ಯಂ| ಭೋಕ್ತಾಪುರುಷೋಽ ನ್ತಃಸ್ಥಃ | ಅತ್ರದೃಷ್ಟಂ ನಾಮಪ್ರತ್ಯಯಂ | ಯಸ್ಮಾದ್ಬೀಜಸಂಭವಾಹಿಪಶವಸ್ತ ಸ್ಮಾದ್ಬೀಜಂ ಭೋಜ್ಯಂ | ಅನೇನೈವ ಪ್ರಧಾನಸ್ಯಭೋಜ್ಯತ್ವಂ ವ್ಯಾಖ್ಯಾತಂ | ತಸ್ಮಾತ್ ಭೋಕ್ತಾಪುರುಷಃ | ಭೋಜ್ಯಪ್ರಕೃತಿಃ | ತಸ್ಥೋಭುಂಕ್ತಾ ಇತಿ | ಪ್ರಾಕೃತಮನ್ನಂ ತ್ರಿಗುಣಭೇದ ಪರಿಣಾಮತ್ವಾನ್ಮಹದಾದ್ಯಂ ವಿಶೇಷಾನ್ತಂ ಲಿಂಗಂ | ಅನೇನೈವ ಚತುರ್ದಶವಿಧಸ್ಯಸರ್ಗಸ್ಯ ವ್ಯಾಖ್ಯಾಕೃತಾ ಭವತಿ | ಸುಖದುಃಖ ಮೋಹಸಂಜ್ಞಂಹ್ಯನ್ನ ಭೂತ ಮಿದಂಜಗತ್ | ನಹಿ ಬೀಜಸ್ಯ ಸ್ವಾದು ಪರಿಗ್ರಹೋಽಸ್ತೀತಿಯಾವನ್ನ ಪ್ರಸೂತಿಃ | ತಸ್ಯಾಪ್ಯೇವಂ ತ್ರಿಸ್ವೃಷ್ಟವಸ್ಥಾಸ್ವನ್ನತ್ವಂಭವತಿ | ಕೌಮಾರಂ ಯೌವನಂಜರಾ | ಪರಿಣಾಮ ತ್ವಾತ್ ತದನ್ನತ್ವಂ | ಏವಂ ಪ್ರಧಾನಸ್ಯವ್ಯಕ್ತತಾಂಗತಸ್ಯೋಪ ಲಬ್ಧಿರ್ಭವತಿ | ತತ್ರಬುದ್ಧ್ಯಾದೀನಿಸ್ವಾದುನಿಭವನ್ತಿ | ಅಧ್ಯವಸಾಯ ಸಂಕಲ್ಪಾಭಿಮಾನಾ ಇತಿ | ಅರ್ಥೇಂದ್ರಿಯಾರ್ಥಾನ್ ಪಂಚಸ್ವಾದೂನಿ ಭವನ್ತಿ | ಏವಂ ಸರ್ವಾ ಣೇಂದ್ರಿಯಕರ್ಮಾಣಿಪ್ರಾಣಕರ್ಮಾಣಿ | ಏವಂ ವ್ಯಕ್ತಮನ್ನಂಮವ್ಯಕ್ತಮನ್ನಂ| ಅಸ್ಯನಿರ್ಗುಣೋಭೋಕ್ತಾ | ಭೋಕ್ತೃತ್ವಾಚ್ಚೈತವ್ಯಂ ಪ್ರಸಿದ್ಧಂತಸ್ಯ | ಯಥಾಗ್ನಿರ್ದೇವಾನಾಮನ್ನಾದಃ ಸೋಮೋಽನ್ನಂ | ಅಗ್ನಿನ್ಯೈವಾನ್ನಮಿತ್ಯೇ ವಂವಿತ್ | ಸೋಮ ಸಂಜ್ಞೋಯಂ ಭೂತಾತ್ಮಾಽಗ್ನಿ ಸಂಜ್ಞೋಽಪ್ಯವ್ಯಕ್ತ ಮುಖಇತಿ | ವಚನಾತ್ ಪುರುಷೋಹ್ಯವ್ಯಕ್ತಮುಖೇನತ್ರಿಗುಣಂ ಭುಂಕ್ತಾ ಇತಿ | ಯೋಹ್ಯೈವಂವೇದ | ಸಂನ್ಯಾಸೀಯೋಗೀಚಾಽಽತ್ಮಯಾಜೀಚೇತಿ | ಅಥಯದ್ವನ್ನಂ ಕಚ್ಚಿಚ್ಛೂನ್ಯಾಗಾರೇ ಕಾಮಿನ್ಯಃ ಪ್ರವಿಷ್ಟಾಃ | ಸ್ಪೃಶ ತೀಂದ್ರಿಯಾರ್ಥಂ ಸ್ತದ್ವದ್ಯೋನ ಸ್ಪೃಶತಿ ಪ್ರವಿಷ್ಟಾನ್ ಸಂನ್ಯಾಸೀ ಯೋಗೀ ಚಾಽಽತ್ಮಯಾಜೀಚೇತಿ ||೧೦||

ಈಗ ಪರಾ ವಿಚಾರವಾಗಿ ತಿಳಿಯೋಣ. ಈ ಆತ್ಮಯಜ್ಞದ ವಿಚಾರದಲ್ಲಿ ಅಂದರೆ ಅನ್ನ ಮತ್ತು ಅದನ್ನು ಭುಜಿಸುವವರ ಬಗೆಗೆ ಹೆಚ್ಚು ವಿಷಯಗಳನ್ನು ಅರಿಯ ಬೇಕಾಗಿದೆ. ಅವುಗಳು ಈ ಕೆಳಗೆ ಕಂಡಂತೆ ಇರುತ್ತದೆ. ಚೇತನ ಪುರುಷನು

ದೈವ ನಿಯಾಮಕಗಳಿಂದ ಬಂಧಿತನಾಗಿದ್ದಾನೆ. ಅವನು ಭೋಕ್ತೃವಾಗಿರುವುದರಿಂದ ದೈವದತ್ತವಾದ ಅನ್ನವನ್ನು ಭಕ್ಷಿಸುವಾಗ ಆನಂದಿಸುತ್ತಾನೆ. ಈ ಭೂತಾತ್ಮನೇ ಅವನಿಗೆ ಅನ್ನ, ಅದನ್ನು ತಯಾರ್ಮಾಡುವವನು ಪ್ರಧಾನನು. ಆದ್ದರಿಂದ ಭೋಜ್ಯ ದಲ್ಲಿ ಮೂರು ಗುಣಗಳಿವೆ. ಭೋಕ್ತೃವು ಇವುಗಳ ಅಂತಸ್ಥನಾಗಿದ್ದಾನೆ. ಇದಕ್ಕೆ ಸಾಕ್ಷಿ ಇಂದ್ರಿಯಗಳ ಅನುಭವ. ಯಾವರೀತಿ ಪಶುಗಳು ಬೀಜದಿಂದ ಉತ್ಪನ್ನ ವಾಗುವುದೋ ಆ ಬೀಜವೇ ಅನ್ನವಾಗಿದೆ. ಆದ್ದರಿಂದ ಪ್ರಧಾನನನ್ನು ಭೋಜ್ಯತ್ವ ವೆಂದೂ, ಪುರುಷನನ್ನು ಭೋಕ್ತೃವೆಂದೂ ಹೇಳಬಹುದು. ಪ್ರಕೃತಿಯು ಭೋಜ್ಯವು. ಇದರಲ್ಲಿ ಸೇರಿಕೊಂಡು ಪುರುಷನು ಆನಂದಿಸುತ್ತಾನೆ. ಎಲ್ಲವೂ ಜ್ಞಾನದಿಂದ ಪ್ರಾರಂಭವಾಗಿ ಭೂತದೊಡನೆ ಅಂತ್ಯವಾಗುತ್ತದೆ. ಇದು ಪ್ರಕೃತಿಯ ಗುಣ ಬದಲಾವಣೆ ಇಂದಾಗಿ ಅದರ ಮೂರು ಗುಣಗಳ ಭೇದದ ಪರಿಣಾಮದಿಂದ ಅಲ್ಲಿ ಆತ್ಮನ ಇರುವಿಕೆಯನ್ನು ಗುರ್ತಿಸಬಹುದು. ಇದರಿಂದ ಹದಿನಾಲ್ಕು ವಿಧದ ಮಾರ್ಗಗಳನ್ನು ವಿವರಿಸಿದಂತಾಗುತ್ತದೆ. ಈ ಜಗತ್ತು ಸುಖ, ದುಃಖ ಮತ್ತು ಮೋಹ ಎಂಬ ಅನ್ನಭೂತದ ಸಂಜ್ಞೆಯಾಗಿದೆ. ಇಲ್ಲಿ ಎಲ್ಲಿಯವರೆಗೆ ಉತ್ಪಾದನಾ ಕ್ರಮಗಳು ಇಲ್ಲವೋ ಅದುವರೆಗೂ ಬೀಜದ ರುಚಿಯ ಮಾತೇ ಇಲ್ಲ ಮತ್ತು ಅದರ ಮೂರು ಗುಣಗಳಾದ ಕೌಮಾರ್ಯ, ಯೌವನ ಮತ್ತು ವೃದ್ಧಾಪ್ಯಗಳು ಅನ್ನದ ಗುಣಗಳೆಂದೂ ಅನ್ನಿಸಿಕೊಂಡಿದೆ. ಈ ಗುಣಗಳು ಒಂದರಿಂದ ಇನ್ನೊಂದಕ್ಕೆ ಬದಲಾವಣೆ ಹೊಂದುವ ಕಾರಣದಿಂದ ಇದು ಅನ್ನದ ಗುಣಗಳೆನಿಸಿಕೊಂಡಿದೆ. ಈ ರೀತಿಯಾಗಿ ಪ್ರಕೃತಿಯು ಸ್ಪಷ್ಟವಾಗಿ ಕಾಣಿಸಿಕೊಳ್ಳುವುದರಿಂದ ಪ್ರಕೃತಿಯ ಗುಣ ಗಳನ್ನು ರುಚಿ ನೋಡುವ ಅಧಿಕಾರವನ್ನು ಗಳಿಸಿಕೊಂಡಂತಾಗುತ್ತದೆ. ಈ ಕಾರ್ಯಕ್ಕೆ ಸಂಕಲ್ಪ, ಅಭಿಮಾನಗಳು ಸಹಕರಿಸುತ್ತವೆ. ತರುವಾಯ ಅವುಗಳ ರುಚಿಯನ್ನು ನೋಡಲು ಐದು ಜ್ಞಾನೇಂದ್ರಿಯಗಳೂ ಇರುತ್ತವೆ. ಈ ಮೂಲಕ ಎಲ್ಲಾ ಜ್ಞಾನೇಂದ್ರಿಯಗಳೂ ಮತ್ತು ಕರ್ಮೇಂದ್ರಿಯಗಳೂ ಚುರುಕುಗೊಳ್ಳುತ್ತವೆ. ಇದರ ಗುರಿ ಅನ್ನವೇ ಆಗಿರುತ್ತವೆ. ಭೋಕ್ತೃವು ಯಾವಾಗಲೂ ಎಚ್ಚರಿಕೆ ಯಾಗಿಯೇ ಇರುತ್ತಾನೆ. ಏಕೆಂದರೆ ಅವನೇ ಅಗ್ನಿ. ದೇವತೆಗಳಲ್ಲಿ ಸೋಮನು ಅನ್ನವು, ಬಾಯಿಯು ಪ್ರತ್ಯಕ್ಷವಾಗಿ ಕಾಣುತ್ತಿರುವುದರಿಂದ ಅದನ್ನೇ ಅಗ್ನಿ ಯೆಂದೂ ಕರೆಯಲಾಗಿದೆ. ಏಕೆಂದರೆ ಪುರುಷನಿಗೆ ಅಪ್ರತ್ಯಕ್ಷನಾಗಿರುವ ಅಗ್ನಿಯು ತನ್ನ ಬಾಯಿಯಲ್ಲೇ ಇದ್ದುಕೊಂಡು ಮೂರು ಗುಣಗಳನ್ನೂ ತೋರಿಸಿಕೊಡುತ್ತ ಇರುವುದರಿಂದ ಇದನ್ನೇ ಅಗ್ನಿ ಎಂದು ಹೇಳಬಹುದು. ಇದನ್ನು ತಿಳಿದವರು ಸಂನ್ಯಾಸಿ, ಯೋಗಿ ಮತ್ತು ಆತ್ಮಜ್ಞಾನಿಗಳು, ಇವರು ಅವನನ್ನು ಮುಟ್ಟಲಾರರು. ಒಬ್ಬ ಹೆಂಗಸು ಯಾರೂ ಇಲ್ಲದ ಶೂನ್ಯಾಗಾರವನ್ನು ಪ್ರವೇಶಿಸಿದ ಹಾಗೆ ಯಾರೂ

ಮುಟ್ಟಲಾರದ ಜ್ಞಾನೇಂದ್ರಿಯಗಳು ಅವನಲ್ಲಿ ಪ್ರವೇಶಿಸಿ ಅವನನ್ನು ಆತ್ಮಯಜ್ಞ ವನ್ನು ಮಾಡುವ ಸನ್ಯಾಸಿ, ಯೋಗಿ ಮತ್ತು ಆತ್ಮಜ್ಞಾನಿ ಎನ್ನಿಸುತ್ತದೆ.

ಪರಂವಾ ಏತದಾತ್ಮನೋರೂಪಂಯದನ್ನಂ । ಅನ್ನಮಯೋಹ್ಯಯಂಪ್ರಾಣಃ । ಅಥನಯದ್ಯಶ್ನಾತ್ಯಮನ್ತಾಽಶ್ರೋತಾ ಅಸ್ಪೃಷ್ಟಾಽದ್ರಷ್ಟಾಽವಕ್ತಾಽಘ್ರಾತಾಽರಸಯಿತಾಭವತಿ । ಪ್ರಾಣಂಶ್ಚೋತ್ಸೃಜತಿ ಇತ್ಯೇವಂಹ್ಯಾಹ । ಅಥಯದಿಖಲ್ವಶ್ನಾತಿಪ್ರಾಣ ಸಮೃದ್ಧೋಭೂತ್ವಾಮನ್ತಾಭವತಿ, ಶ್ರೋತಾಭವತಿ, ಸ್ಪೃಷ್ಟಾಭವತಿ, ವಕ್ತಾಭವತಿ, ರಸಯಿತಾಭವತಿ, ಘ್ರಾತಾಭವತಿ, ದ್ರಷ್ಟಾಭವತೀತಿ । ಏವಂಹ್ಯಾಹಅನ್ನಾದ್ವೈ ಪ್ರಜಾಪ್ರಜಾಯನ್ತೇಯಾಃ ಕಾಶ್ಚಿತ್ । ಪೃಥಿವೀಶ್ರಿತಾಃ । ಅತೋಽನ್ನೇನೈವಜೀವನ್ತ್ಯಥೈತದಪಿಯನ್ತ್ಯಂತಃ ||೧೧||

ಅನ್ನವು ಆತ್ಮನ ಪರಾ ರೂಪ. ಏಕೆಂದರೆ ಈ ಪ್ರಾಣವು ಅನ್ನದಿಂದಲೇ ಜೀವಂತವಾಗಿರುತ್ತದೆ. ಯಾರು ಅನ್ನವನ್ನು ಭಕ್ಷಿಸುವುದಿಲ್ಲವೋ ಆಗ ಅವರು ಯೋಚಿಸಲಾರರು, ಕೇಳಲಾರರು, ಸ್ಪರ್ಶಿಸಲಾರರು, ಕಾಣಲಾರರು, ಮಾತನಾಡಲಾರರು, ಆಘ್ರಾಣಿಸಲಾರರು, ರುಚಿ ನೋಡಲಾರರು ಮತ್ತು ಅವರು ಪ್ರಾಣವನ್ನೂ ತ್ಯಜಿಸುತ್ತಾರೆ. ಆದ್ದರಿಂದ ಹೀಗೆ ಹೇಳಲಾಗಿದೆ. ಅವರು ಅನ್ನವನ್ನು ಭಕ್ಷಿಸಿದಲ್ಲಿ ಪ್ರಾಣ ಸಮೃದ್ಧನಾಗುತ್ತಾನೆ, ಯೋಚನಾಪರನಾಗುತ್ತಾನೆ, ಕೇಳಬಲ್ಲವನಾಗುತ್ತಾನೆ, ಸ್ಪರ್ಶಿಸಬಲ್ಲವನಾಗುತ್ತಾನೆ. ವಾಚಾಳಿಯಾಗುತ್ತಾನೆ, ರುಚಿ ನೋಡುವವನಾಗುತ್ತಾನೆ, ಆಘ್ರಾಣಿಸುವವನಾಗುತ್ತಾನೆ, ನೋಟಕನಾಗುತ್ತಾನೆ, ಆದ್ದರಿಂದ ಅನ್ನದಿಂದಲೇ ಈ ಭೂಮಿಯ ಮೇಲೆ ವಾಸಿಸುತ್ತಿರುವ ಎಲ್ಲಾ ಜೀವರಾಶಿಗಳೂ ಉದ್ಭವವಾಗುತ್ತದೆ. ಅಲ್ಲದೆ ಅನ್ನದಿಂದಲೇ ಅವು ಜೀವಿಸಿರುತ್ತವೆ ಮತ್ತು ಅಂತ್ಯದಲ್ಲಿ ಅವು ಅನ್ನವನ್ನೇ ಸೇರುತ್ತದೆ.

ಅಥಾನ್ಯತ್ರಾಪ್ಯುಕ್ತಂ—ಸರ್ವಾಣಿಹವಾ ಇಮಾನಿಭೂತಾನ್ಯಹರಹಃ ಪ್ರಪತನ್ತ್ಯನ್ನ ಮಭಿಜಿಘೃಕ್ಷಮಾಣಾನಿ । ಸೂರ್ಯೋರಶ್ಮಿಭಿರಾದದಾತ್ಯನ್ನಂ । ತೇನಾಸೌತಪತಿ। ಅನ್ನೇನಾಭಿಷಿಕ್ತಾಃ ಪಚನ್ತೀಮೇಪ್ರಾಣಾಃ। ಅಗ್ನಿರ್ವಾ ಅನ್ನೇನಾಭಿಜ್ವಲತಿ । ಅನ್ನಕಾಮೇನೇದಂ ಪ್ರಕಲ್ಪಿತಂ ಬ್ರಹ್ಮಣಾ । ಅತೋ ಅನ್ನಮಾತ್ಮೇತ್ಯುಪಾಸೀತ । ಇತ್ಯೇವಂಹ್ಯಾಹ—ಅನ್ನಾದ್ಭೂತಾನಿಜಾಯಂತೇ । ಜಾತಾನ್ಯನ್ನೇನವರ್ಧನ್ತೇ । ಅದ್ಯತೇಽತ್ತಿಚ—ಭೂತಾನಿ ತಸ್ಮಾದನ್ನಂ ತದುಚ್ಯತೇ ||೧೨||

ಬೇರೊಂದು ಕಡೆ ಹೀಗೆ ಹೇಳಲಾಗಿದೆ.—ಸರ್ವ ಭೂತಗಳೂ ಅನ್ನಕ್ಕಾಗಿ ಪ್ರತಿ ನಿತ್ಯವೂ ಪರದಾಡುತ್ತವೆ. ಸೂರ್ಯನು ಕೂಡ ತನ್ನ ಕಿರಣಗಳ ಮೂಲಕ ಅನ್ನ ವನ್ನು ಪಡೆಯುತ್ತಾನೆ. ಮತ್ತು ಆ ಮೂಲಕ ಶಾಖವನ್ನು ಕೊಡುತ್ತಾನೆ. ಆಹಾರ ವನ್ನು ಪಡೆದ ತರುವಾಯ ಜೀವಿಗಳು ಅವನ್ನು ಅರಗಿಸಿಕೊಳ್ಳುತ್ತವೆ. ಅನ್ನದಿಂದ ಅಗ್ನಿಯು ಕೂಡ ಜ್ವಲಿಸುತ್ತದೆ. ಆದ್ದರಿಂದ ಅನ್ನಕಾಮಿಗಳು ಅನ್ನವನ್ನು ಬ್ರಹ್ಮ ನೆಂದು ತಿಳಿಯಬೇಕು. ಆದ್ದರಿಂದ ಅನ್ನವನ್ನು ಉಪಾಸನೆ ಮಾಡಬೇಕು. ಈ ರೀತಿಯಾಗಿ ಹೇಳಲಾಗಿದೆ. ಅನ್ನದಿಂದ ಭೂತಗಳು ಜನಿಸುತ್ತವೆ. ಜನ್ಮಿಸಿದುದೆಲ್ಲವೂ ಅನ್ನದಿಂದ ಬೆಳೆಯುತ್ತದೆ. ಅನ್ನವು ತಿನ್ನಲ್ಪಡುವುದರಿಂದ ಅದು ಭೂತಗಳನ್ನೂ ತಿನ್ನುತ್ತದೆ. ಆದ್ದರಿಂದಲೇ ಅದನ್ನು ಅನ್ನವೆನ್ನುತ್ತಾರೆ.

ಅಥಾನ್ಯತ್ರಾಪ್ಯುಕ್ತಂ-ವಿಶ್ವಭೃದ್ವೈನಾಮ್ಯೈಷಾತನೂರ್ಭಗವತೋವಿಷ್ಣೋರ್ಯ ದಿದಮನ್ನಂ । ಪ್ರಾಣೋವಾಅನ್ನಸ್ಯರಸಃ । ಮನಃ ಪ್ರಾಣಸ್ಯ । ವಿಜ್ಞಾನಂ ಮನಸಃ । ಆನಂದಂ ವಿಜ್ಞಾನಸ್ಯೇತಿ । ಅನ್ನವಾನ್ ಪ್ರಾಣವಾನ್ ಮನಸ್ವಾನ್ ವಿಜ್ಞಾನವಾನ್ ಆನಂದವಾಂಶ್ಚಭವತಿ ಯೋಽಹ್ಯೇವಂವೇದ । ಯಾವನ್ತೀಹವೈ ಭೂತಾನ್ಯನ್ನ ಮದನ್ತಿತಾವತ್ ಸ್ವಂತಃಸ್ಥೋಽನ್ನಮತ್ತಿಯೋಽಹ್ಯೇವಂ ವೇದ— ಅನ್ನಮೇವ ವಿಜರನ್ನ ಮನ್ನಂಸಂವನನಸಂಸ್ಕೃತಂ। ಅನ್ನಪಶೂನಾಂ ಪ್ರಾಣೋಽ ನ್ನಂಜ್ಯೇಷ್ಠ ಮನ್ನಂಭಿಷಕ್ಸ್ಮೃತಂ ॥೧೩॥

ಈಗ ಬೇರೊಂದು ಕಡೆ ಹೀಗೆ ಹೇಳಲಾಗಿದೆ : ವಿಶ್ವವನ್ನೆಲ್ಲಾ ರಕ್ಷಿಸುವ ಪರಮಾತ್ಮ ನಾದ ವಿಷ್ಣುವಿನರೂಪವೇ ಅನ್ನ. ಪ್ರಾಣವು ಅನ್ನ ರಸ. ಪ್ರಾಣದ ಮನಸ್ಸು, ಮನಸ್ಸಿನ ವಿಜ್ಞಾನ, ವಿಜ್ಞಾನದ ಆನಂದ ಇವೆಲ್ಲವೂ ಅನ್ನದಿಂದಲೇ ಉದ್ಭವ ವಾಗುತ್ತವೆ. ಇದನ್ನು ಯಾರು ಅರಿಯುತ್ತಾರೋ ಅವರು ಅನ್ನವನ್ನು ಹೊಂದು ವವರಾಗುತ್ತಾರೆ. ಮತ್ತು ಪ್ರಾಣ, ಮನಸ್ಸು, ವಿಜ್ಞಾನ, ಆನಂದ ಇವುಗಳನ್ನು ಪಡೆಯುತ್ತಾರೆ. ಈ ಪ್ರಪಂಚದ ಭೂತಗಳು ಅನ್ನದ ಮೇಲೆ ಅವಲಂಬಿಸಿ ಅದನ್ನು ತಿಂದು ಜೀವಿಸುತ್ತವೆ. ಇದನ್ನರಿತವರು ಅನ್ನವನ್ನು ತಿಂದು ಅಕ್ಷಯರಾಗುತ್ತಾರೆ. ಅನ್ನವೂ ಪೂಜಾರ್ಹವಾದುದು. ಅನ್ನವು ಪಶುಗಳಂತಿದೆ. ಅನ್ನವೇ ಜ್ಯೇಷ್ಠವು. ಅನ್ನವು ಧನ್ವಂತರಿ ಕೂಡ ಎಂದು ಹೇಳಲಾಗಿರುತ್ತೆ.

ಅಥಾನ್ಯತ್ರಾಪ್ಯುಕ್ತಂ । ಅನ್ನಂವಾ ಅಸ್ಯಸರ್ವಸ್ಯಯೋನಿಃ ಕಾಲಶ್ಚಾನ್ನಸ್ಯ ।— ಸೂರ್ಯೋಯೋನಿಃಕಾಲಸ್ಯ । ತಸ್ಯೈತದ್ರೂಪಂಯನ್ನಿಮೇಷಾದಿಕಾಲಾತ್ಸಂ

ಭೂತಂ ದ್ವಾದಶಾತ್ಮಕಂವತ್ಸರಂ | ಏತಸ್ಯಾSSಗ್ನೇಯ ಮರ್ಧ ಮರ್ಧಂವಾರು ಣಂ | ಮಘಾದ್ಯಂ ಶ್ರವಿಷ್ಠಾರ್ಧಮಾಗ್ನೇಯಂ ಕ್ರಮೇಣ ಉತ್ಕ್ರಮೇಣ ಸಾರ್ಪಾದ್ಯಂ ಶ್ರವಿಷ್ಠಾರ್ದಾಂತ್ತಂ ಸೌಮ್ಯಂ ತತ್ರೈಕೈಕಮಾತ್ಮನೋ ನವಾಂ ಶಕಂ ಸಚಾರಕವಿಧಂ | ಸೌಕ್ಷ್ಮ್ಯತ್ವಾದೇತತ್‌ಪ್ರಮಾಣಂ | ಅನೇನೈವ ಪ್ರಮೀಯತೇಹಿಕಾಲಃ | ನವಿನಾ ಪ್ರಮಾಣೇನ ಪ್ರಮೇಯಸ್ಯೋಪಲಬ್ಧಿಃ | ಪ್ರಮೇಯೋ ಅಪಿ ಪ್ರಮಾಣ ನತಾಂ ಪೃಥಕ್ತ್ವಾದು ಪೈತ್ಯಾತ್ಮ ಸಂಬೋಧ ನಾರ್ಥಂ | ಇತ್ಯೇವಂಹ್ಯಾಹ | ಯಾವತ್ಯೋವೈಕಾಲಸ್ಯಕಲಾಸ್ತಾವತೀಷು ಚರತ್ಯಸೌ | ಯಃಕಾಲಂ ಬ್ರಹ್ಮೇತ್ಯುಪಾಸೀತ ಕಾಲಸ್ತಸ್ಯಾತಿ ದೂರಮುಪ ಸರತಿ | ಇತ್ಯೇವಂಹ್ಯಾಹ | ಕಾಲಾತ್‌ಶ್ರವನ್ತಿಭೂತಾನಿಕಾಲಾದ್ವೃದ್ಧಿಂ ಪ್ರಯನ್ತಿಚ | ಕಾಲೇಚಾಸ್ತಂ ನಿಯಚ್ಛನ್ತಿಕಾಲೋಮೂರ್ತಿ ರಮೂರ್ತಿ ಮಾನ್ ||೧೪||

ಮತ್ತು ಹೀಗೆ ಬೇರೊಂದು ಕಡೆ ಹೇಳಲಾಗಿದೆ :—ಅನ್ನವು ಈ ಸರ್ವಸ್ವಕ್ಕೆಲ್ಲಾ ಯೋನಿಯು. ಅನ್ನದಿಂದ ಕಾಲವು. ಸೂರ್ಯನು ಕಾಲನ ಯೋನಿಯು. ಕಾಲನ ರೂಪವು ನಿಮಿಷಗಳಿಂದಲೂ. ಮತ್ತು ಇತರ ಕಾಲ ಸಂಭೂತಗಳಿಂದ ಕೂಡಿದ ಸಂವತ್ಸರವಾಗಿದೆ. ಇದಕ್ಕೆ ಹನ್ನೆರಡು ತಿಂಗಳುಗಳೆಂದೂ, ಅದರಲ್ಲಿ ಮೊದಲ ಅರ್ಧ ಭಾಗವು ಸೂರ್ಯನು ಉತ್ತರ ದಿಕ್ಕಿನಲ್ಲಿ ಸಂಚರಿಸುವಾಗ ಅಗ್ನಿ ದೇವನಿಗೆ ಸಂಬಂಧಿಸುವುದೆಂದೂ ; ಮಿಕ್ಕರ್ಧವು ಸೂರ್ಯನು ದಕ್ಷಿಣ ದಿಕ್ಕಿನಲ್ಲಿ ಸಂಚರಿಸುವಾಗ ವರುಣನಿಗೆ ಸಂಬಂಧಿಸುವುದೆಂದೂ ಹೇಳಲಾಗಿದೆ. ಈ ಮಾರ್ಗವು ಮಘ ರಾಶಿ ಯಿಂದ ಶ್ರವಿಷ್ಠ ರಾಶಿಯ ಅರ್ಧದವರೆಗೆ ಅಗ್ನಿಗೆ ಸೇರಿದುದು. ಉತ್ತರಾಯಣದಲ್ಲಿ ಸರ್ಪರಾಶಿಯಿಂದ ಶ್ರವಿಷ್ಠದ ಅರ್ಧದವರೆಗೆ ಚಂದ್ರನಿಗೆ ಸೇರಿದುದು. ಅವುಗಳಲ್ಲಿ ಏಕೈಕ ಆತ್ಮನು ಸಂವತ್ಸರದ ಹಾಗೆ ಪ್ರತಿತಿಂಗಳೂ ಒಂದು ಹೆಸರಿನಿಂದ ಕರೆಯ ಲ್ಪಟ್ಟು ಒಂಭತ್ತು ಅಂಶಗಳಾಗಿವೆ. ಇದು ಸೂರ್ಯನು ರಾಶಿಗಳ ಮೂಲಕ ಸಂಚರಿಸುವ ಮಾರ್ಗವಾಗಿದೆ. ಈ ಸೂರ್ಯನ ಗತಿಯ ಮೇಲೆಯೇ ಕಾಲವನ್ನು ನಿರ್ಧರಿಸುವಂತೆ ಏರ್ಪಾಡಾಗಿರುತ್ತೆ. ಸಾಕ್ಷ್ಯಾಧಾರವಿಲ್ಲದೆ ಊಹಾಪೋಹಗಳನ್ನು ಹೇಳುವ ಹಾಗಿಲ್ಲ. ಪ್ರಾಮಾಣೀಕೃತವಾಗಿ ಹೇಳಬೇಕಾದ್ದು ; ಅವುಗಳು ಹೊಂದಿರ ಬಹುದಾದ ಭಾಗಗಳು ಮತ್ತು ತನ್ನ ಇರುವಿಕೆಯನ್ನು ತಿಳಿಸುವ ರೀತಿ, ಇವುಗಳಿಂದ ಪ್ರಾಮಾಣೀಕರಿಸಬಹುದು. ಕಾಲದಲ್ಲಿ ಅನೇಕ ಭಾಗಗಳಿವೆ ಎಂದು ಹೇಳಲಾಗಿದೆ. ಇವುಗಳೆಲ್ಲವನ್ನೂ ಸೂರ್ಯನ ಗತಿಯನ್ನು ಅವಲಂಬಿಸಿಯೇ ಹೆಸರಿಸಲಾಗಿದೆ. ಯಾರು ಕಾಲವನ್ನು ಬ್ರಹ್ಮನೆಂದು ಆರಾಧಿಸುವರೋ ಅವನಿಂದ ಕಾಲವು ದೂರ ಸರಿಯು

ತ್ತದೆ. ಆದ್ದರಿಂದ ಹೀಗೆ ಹೇಳಲ್ಪಟ್ಟಿದೆ. ಸಮಸ್ತ ಭೂತಗಳೂ ಕಾಲನಿಂದ ಹರಿಯಲ್ಪಡುತ್ತವೆ, ಕಾಲದಿಂದ ಬುದ್ಧಿಯೂ ಬೆಳೆಯುತ್ತಾ ಹೋಗುತ್ತದೆ. ಕಾಲ ದಲ್ಲಿ ಕೆಲವರು ವಿಶ್ರಾಂತಿಯನ್ನು ಪಡೆಯುತ್ತಾರೆ. ಕಾಲವು ಮೂರ್ತಿಯಾಗಿಯೂ, ಅಮೂರ್ತಿಯಾಗಿಯೂ ಇದೆ.

ದ್ವೇವಾವಬ್ರಹ್ಮಣೋರೂಪೇಕಾಲಶ್ಚಾ ಕಾಲಶ್ಚ । ಅಥಯಃ ಪ್ರಾಗಾದಿತ್ಯಾನ್ ಸೋऽಕಾಲೋऽಕಲಃ । ಅಥಯ ಆದಿತ್ಯಾದ್ಯಃ ಸಕಾಲ ಸಕಲಃ । ಸಕಲಸ್ಯ ವಾಏತದ್ರೂಪಂಯತ್ಸಂವತ್ಸರಾಃ । ಸಂವತ್ಸರಾತ್ ಖಲ್ವೇವೇಮಾಃ ಪ್ರಜಾಃ ಪ್ರಜಾಯನ್ತೇ । ಸಂವತ್ಸರೇಣೇಹವೈಜಾತಾ ವಿವರ್ಧನ್ತೇ । ಸಂವತ್ಸರೇ ಪ್ರತ್ಯಸ್ತಂಯನ್ತಿ । ತಸ್ಮಾತ್ಸಂವತ್ಸರೋವೈಪ್ರಜಾಪತಿಃ । ಕಾಲೋऽನ್ನಂ ಬ್ರಹ್ಮನೀಡ ಮಾತ್ಮಾಚ । ಇತ್ಯೇವಂಹ್ಯಾಹಕಾಲಃಪಚತಿಭೂತಾನಿ ಸರ್ವಾಣ್ಯೇ ವಮಹಾತ್ಮನಿ । ಯಸ್ಮಿಂಸ್ತುಪಚ್ಯತೇಕಾಲೋಯಸ್ತಂವೇದಸವೇದವಿತ್ ॥೫॥

ಕಾಲ, ಅಕಾಲ ಎಂಬ ಇವೆರಡೂ ಬ್ರಹ್ಮನ ರೂಪಗಳೇ. ಸೂರ್ಯನಿಗೆ ಪೂರ್ವ ದಲ್ಲಿಯೇ ಇದ್ದು ಯಾವ ಭಾಗಗಳನ್ನೂ ಹೊಂದಿಲ್ಲದೆ ಇರುವುದು ಅಕಾಲ, ಆದರೆ ಸೂರ್ಯನಿಂದ ಪ್ರಾರಂಭಿಸಿದುದು ಕಾಲ. ಇದಕ್ಕೆ ಸಂವತ್ಸರಗಳಿರುವ ಭಾಗದ ರೂಪಗಳೇ ಇದಕ್ಕೂ ಭಾಗಗಳು. ಸಂವತ್ಸರಗಳಿಂದಲೇ ಎಲ್ಲಾ ಜೀವಗಳೂ ಉತ್ಪನವಾಗಿವೆ. ಹೀಗೆ ಉತ್ಪನ್ನವಾದ ತರುವಾಯ ಅವು ಸಂವತ್ಸರದಲ್ಲೇ ಬೆಳೆಯು ತ್ತವೆ. ಮತ್ತು ಸಂವತ್ಸರದಲ್ಲೇ ಲಯವೂ ಆಗುತ್ತದೆ. ಆದ್ದರಿಂದ ಸಂವತ್ಸರವೂ ಪ್ರಜಾಪತಿಯೇ, ಈ ಪ್ರಜಾಪತಿಯು ಕಾಲನೂ ಹೌದು, ಅನ್ನವೂ ಹೌದು, ಬ್ರಹ್ಮನ ನಿವಾಸವೂ ಹೌದು, ಆತ್ಮನೂ ಹೌದು. ಆದ್ದರಿಂದ ಹೀಗೆ ಹೇಳಲಾಗಿದೆ. ಕಾಲವು ಭೂತಗಳನ್ನು ಪಚನಮಾಡುತ್ತದೆ, ಸರ್ವಭೂತಗಳೂ ಆ ಮಹಾತ್ಮನಲ್ಲಿ ಲೀನವಾ ಗಿದೆ. ಯಾರು ಎಷ್ಟು ಕಾಲದಲ್ಲಿ ಇವು ಪಚನವಾಗುವುದೆಂದು ತಿಳಿಯುವರೋ ಅವರೇ ವೇದಗಳನ್ನು ಬಲ್ಲವರು.

ವಿಗ್ರಹವಾನೇಷಕಾಲಃ ಸಿಂಧುರಾಜಃ ಪ್ರಜಾನಾಂ ಏಷತತ್ಸ್ಥಃ ಸವಿತಾಖ್ಯಃ ಯಸ್ಮಾದೇವೇಮೇ ಚಂದ್ರರ್ಕ್ಷಗ್ರಹ ಸಂವತ್ಸರಾದಯಃ ಸೂಯನ್ತೇ । ಅಥೈ ಭ್ಯಃ ಸರ್ವಮಿದಂ । ಅತ್ರ ವಾಯತ್ಕಿಂಚಿಚ್ಛುಭಾಶುಭಂದೃಶ್ಯತೇಹಲೋಕೇತದೇ ತೇಭ್ಯಃ । ತಸ್ಮಾದಾದಿತ್ಯಾತ್ಮಾಬ್ರಹ್ಮಾ । ಅಥಕಾಲ ಸಂಜ್ಞಮಾದಿತ್ಯ ಮುಪಾಸೀತಆದಿತ್ಯೋಬ್ರಹ್ಮೇತ್ಯೇಕೇ । ಅಥೈವಂಹ್ಯಾಹ–ಹೋತಾಭೋಕ್ತಾ

ಹವಿರ್ಮಂತ್ರೋಯಜ್ಞೋವಿಷ್ಣುಃಪ್ರಜಾಪತಿಃ| ಸರ್ವಃಕಶ್ಚಿತ್ಪ್ರಭುಃಸಾಕ್ಷಿಯೋಽ ಮುಷ್ಮಿನ್ ಭಾತಿಮಂಡಲೇ ||೧೬||

ಈ ವಿಗ್ರಹ ರೂಪಿಯಾದ ಕಾಲವು ಜೀವರಾಶಿಗಳ ಮಹಾಸಾಗರವಾಗಿದೆ. ಇದರಲ್ಲಿ ಸೂರ್ಯನ ಬಿಂಬವಾದ ಸವಿತೃವು ವಾಸಿಸುತ್ತಿದ್ದಾನೆ. ಇವನಲ್ಲಿ ಚಂದ್ರನೂ, ನಕ್ಷತ್ರಗಳೂ, ಗ್ರಹಗಳೂ, ಸಂವತ್ಸರವೂ ವಗೈರೆ ಆಶ್ರಯ ಪಡೆದಿವೆ. ಅವರುಗಳಿಂದ ಈ ಸಮಸ್ಥ ಜಗತ್ತೂ ಇದೆ. ಈ ಜಗತ್ತಿನಲ್ಲೂ ಶುಭಾಶುಭಗಳು ಕಂಡು ಬಂದಿದ್ದು ಅವೆಲ್ಲವೂ ಅವರಿಂದ ಬಂದಿರುವುದೇ ಆಗಿದೆ. ಆದ್ದರಿಂದ ಆದಿತ್ಯನು ಬ್ರಹ್ಮ. ಇವನನ್ನು ಸೂರ್ಯನ ಕಾಲ ಸಂಜ್ಞನೆಂದು ಆರಾಧಿಸಬೇಕು. ಕೆಲವರು ಸೂರ್ಯನೇ ಬ್ರಹ್ಮನೆಂದು ಹೇಳುತ್ತಾರೆ. ಆದ್ದರಿಂದ ಹೀಗೆ ಹೇಳಲಾಗಿದೆ. ಹೋತೃವು, ಭೋಕ್ತೃವು, ಹವಿಸ್ಸು, ಮಂತ್ರ, ಯಜ್ಞ, ವಿಷ್ಣು, ಪ್ರಜಾಪತಿ, ಇವೆಲ್ಲವೂ ಪ್ರಭುವೇ. ಇದಕ್ಕೆ ಸಾಕ್ಷೀಭೂತವಾಗಿರುವುದು ಮೇಲ್ಮಂಡಲದಲ್ಲಿ ಪ್ರಕಾಶಿಸುತ್ತಿರುವ ಸೂರ್ಯನೇ.

ಬ್ರಹ್ಮಹವಾ ಇದಮಗ್ರ ಆಸೀದೇಕೋಽನನ್ತಃಪ್ರಾಗನನ್ತೋ ದಕ್ಷಿಣತೋಽ ನನ್ತಃಪ್ರತೀಚ್ಯೋಽನನ್ತಂಉದೀಚ್ಯೋಽನನ್ತಂಊರ್ಧ್ವಂಚಾವಾಂಚಸರ್ವತೋಽ ನನ್ತಃ | ಸಹ್ಯಸ್ಯಪ್ರಾಚ್ಯಾದಿದಿಶಃಕಲ್ಪನ್ತೇ| ಅಥತಿರ್ಯಗ್ವಾಽವಾಂಥೋರ್ಧ್ವಂ ವಾಽನೂಹ್ಯ ಏಷ ಪರಮಾತ್ಮಾಽಪರಿಮಿತೋಽಜೋಽತರ್ಕ್ಯೋಽಚಿಂತ್ಯಃ | ಏಷ ಆಕಾಶ ಆತ್ಮಾ | ಏವೈಷಕೃತ್ಸ್ನಕ್ಷಯ ಏಕೋ ಜಾಗರ್ತಿ | ಇತ್ಯೇತಸ್ಮಾದಾಕಾಶಾದೇಷಖಲ್ವಿದಂಚೇತಾಮಾತ್ರಂಬೋಧಯತಿ | ಅನೇನೈವಚೇದಂ ಧ್ಯಾಯತೇ| ಅಸ್ಮಿಂಶ್ಚಪ್ರತ್ಯಸ್ತಂಯಾತಿ| ಅಸ್ಯೈತದ್ಭಾಸ್ವರಂರೂಪಂಯದಮುಷ್ಮಿನ್ನಾದಿತ್ಯೇ ತಪತಿ | ಅಗ್ನೌಚಾಧೂಮಕೇಯ ಜ್ಯೋತಿಶ್ಚಿತ್ರತರಂ | ಉದರಸ್ಥೋಽಥವಾಯಃಪಚತ್ಯನ್ನಂ | ಇತ್ಯೇವಂಹ್ಯಾಹ–ಯಶ್ಚೈಷೋಽಗ್ನೌಯಶ್ಚಾಯಂಹೃದಯೇ ಯಶ್ಚಾಸಾದಿತ್ಯೇಸಏಷಏಕಾ ಇತಿ | ಏಕಸ್ಯಹ್ಯೈಕತ್ವಮೇತಿಯ ಏವಂವೇದ ||೧೭||

ಪ್ರಾರಂಭದಲ್ಲಿ ಈ ಪ್ರಪಂಚವೆಲ್ಲಾ ಬ್ರಹ್ಮನೇ ಆಗಿತ್ತು. ಅವನೇ ಅನಂತನಾಗಿದ್ದನು. ಪೂರ್ವದಲ್ಲಿ ಅನಂತ, ದಕ್ಷಿಣದಲ್ಲಿ ಅನಂತ, ಪಶ್ಚಿಮದಲ್ಲಿ ಅನಂತ, ಉತ್ತರದಲ್ಲಿ ಅನಂತ, ಊರ್ಧ್ವ ಮತ್ತು ಅಧರಗಳಲ್ಲೂ ಅನಂತ ಮತ್ತು ಎಲ್ಲ ದಿಕ್ಕುಗಳಲ್ಲೂ ಅನಂತನೇ ಆಗಿದ್ದನು. ಅವನಿಗೆ ಪೂರ್ವ ಮತ್ತು ಇತರ ದಿಕ್ಕುಗಳೂ, ಪಕ್ಕಗಳೂ

ಮೇಲು, ಕೆಳಗುಗಳು ಯಾವುದೂ ಇರಲಿಲ್ಲ. ಈ ಪರಮಾತ್ಮನು ಅಪರಿಮಿತನಾಗಿಯೂ, ಅಜನಾಗಿಯೂ, ಅತರ್ಕ್ಯನಾಗಿಯೂ, ಅಚಿಂತ್ಯನಾಗಿಯೂ, ಆಕಾಶವೇ ಆತ್ಮನಾಗಿಯೂ ಇದ್ದನು. ಪ್ರಳಯ ಕಾಲದಲ್ಲಿ ಇವನೊಬ್ಬನೇ ಎಚ್ಚರವಾಗಿದ್ದನ . ಆ ಆಕಾಶದಿಂದ ಅವನು ಜಗತ್ತನ್ನು ಸೃಷ್ಟಿಸಿದನು. ಅದು ಚೇತಾಮಾತ್ರವಾಗಿತ್ತು. ಅವನಿಂದಲೇ ಇವೆಲ್ಲವೂ ಧ್ಯಾನಿಸಲ್ಪಟ್ಟಿತು. ಮತ್ತು ಅವನಲ್ಲೇ ಲೀನವೂ ಆಯಿತು. ಅವನೇ ಜ್ಯೋತೀರೂಪನಾಗಿ ಮೇಲಿರುವ ಸೂರ್ಯನಲ್ಲಿ ಶಾಖವನ್ನು ಕೊಡುವವನು. ಹೊಟ್ಟೆಯಲ್ಲಿ ಅನ್ನವನ್ನು ಜೀರ್ಣಿಸುವ, ಹೊಗೆ ಇಲ್ಲದ ಅಗ್ನಿಯಲ್ಲಿನ ಆಶ್ಚರ್ಯಕರವಾದ ಜ್ಯೋತಿಯು ಅವನದೇ ಆದ್ದರಿಂದ ಹೀಗೆ ಹೇಳಲಾಗಿದೆ. ಯಾರು ಅಗ್ನಿಯಲ್ಲಿರುವರೋ, ಇಲ್ಲಿ ಹೃದಯದಲ್ಲಿ ಯಾರಿರುವರೋ, ಅಲ್ಲಿ ಮೇಲ್ಗಡೆ ಆದಿತ್ಯನಲ್ಲಿ ಯಾರಿರುವರೋ, ಎಲ್ಲವೂ ಅವನೊಬ್ಬನೇ ಇದನ್ನರಿತವನು ಏಕತ್ವದಲ್ಲಿ ಏಕತ್ವವನ್ನು ಹೊಂದುತ್ತಾನೆ.

ತಥಾತತ್ಪ್ರಯೋಗ ಕಲ್ಪಃ । ಪ್ರಾಣಾಯಾಮಃಪ್ರತ್ಯಾಹಾರೋಧ್ಯಾನಂ ಧಾರಣಾತರ್ಕಃಸಮಾಧಿಃಷಡಂಗ ಇತ್ಯುಚ್ಯತೇ ಯೋಗಃ ಅನೇನ-ಯದಾಪಶ್ಯಸ್ಪಶ್ಯತಿರುಕ್ಮವರ್ಣಂ ಕರ್ತಾರಮೀಶಂಪುರುಷಂಬ್ರಹ್ಮಯೋನಿಂ ತದಾವಿದ್ವಾನ್ಪುಣ್ಯಪಾಪೇ ವಿಹಾಯ ಪರೇಽವ್ಯಯೇ ಸರ್ವಮೇಕೀ ಕರೋತಿ । ಏವಂ ಹ್ಯಾಹ । ಯಥಾಪರ್ವತಮಾದೀಪ್ತಂನಾಽಽಶ್ರಯನ್ತಿ ಮೃಗದ್ವಿಜಾಃ । ತದ್ವದ್ಬ್ರಹ್ಮವಿದೋದೋಷಾನಾಽಽಶ್ರಯನ್ತಿ ಕದಾಚನ ॥೧೮॥

ಏಕತ್ವವನ್ನು ಹೊಂದಲು ಈ ಪ್ರಯೋಗವನ್ನು ಮಾಡಬೇಕು. ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ತರ್ಕ, ಸಮಾಧಿ ಎಂಬ ಷಡಾಂಗ ಯೋಗಗಳನ್ನು ಅಭ್ಯಾಸ ಮಾಡಬೇಕು. ಈ ರೀತಿ ಯೋಗ ಮಾಡಿದಲ್ಲಿ ಸುವರ್ಣ ತೇಜಸ್ಸಿನ ಕರ್ತಾರನನ್ನು ; ಈಶನೂ, ಪುರುಷನೂ, ಬ್ರಹ್ಮಯೋನಿಯೂ, ಆದವನನ್ನು ಕಾಣುತ್ತಾನೆ. ತರುವಾಯ ಯೋಗಿಯು ಪಾಪ ಪುಣ್ಯಗಳನ್ನು ನೀಗಿಕೊಂಡು ಪರ ಮತ್ತು ಅವ್ಯಯ ಸರ್ವಸ್ವವನ್ನ ಏಕೀಕರಿಸಿಕೊಳ್ಳುತ್ತಾನೆ. ಆದ್ದರಿಂದ ಹೀಗೆ ಹೇಳಲಾಗಿದೆ. ಹೇಗೆ ಮೃಗ ಪಕ್ಷಿಗಳು ಜ್ವಲಿಸುತ್ತಿರುವ ಪರ್ವತದ ಕಡೆಗೆ ಹೋಗುವುದಿಲ್ಲವೋ ಹಾಗೆ ಪಾಪಗಳು ಬ್ರಹ್ಮಜ್ಞಾನಿಯಾದವನ ಕಡೆಗೆ ಹೋಗುವುದಿಲ್ಲ.

ಅಥಾನ್ಯತ್ರಾಪ್ಯುಕ್ತಂ-ಯದಾವೈ ಬಹಿರ್ವಿದ್ವಾನ್ ಮನೋನಿಯಮ್ಯೇಂದ್ರಿಯಾರ್ಥಾಂಶ್ಚಪ್ರಾಣೋ ನಿವೇಶಯಿತ್ವಾ ನಿಃಸಂಕಲ್ಪಸ್ತತಸ್ತಿಷ್ಠೇತ್ । ಅಪ್ರಾಣಾ

ದಿಹಯಸ್ಮಾತ್ ಸಂಭೂತಃ ಪ್ರಾಣಸಂಜ್ಞಕೋಜೀವಸ್ತಸ್ಮಾತ್ಪ್ರಾಣೋವೈತುರ್ಯಾಖ್ಯೋಧಾರಯೇತ್ಪ್ರಾಣಂ । ಇತ್ಯೇವಂಹ್ಯಾಹ ||೧೯||

ಈ ರೀತಿಯಾಗಿ ಬೇರೊಂದು ಕಡೆ ಹೇಳಲಾಗಿವೆ. ವಿದ್ವಾಂಸನು ಬಹಿರ್ವ್ಯಾಪಾರಗಳನ್ನು ವೀಕ್ಷಿಸಿದಂತೆ ಮನಸ್ಸನ್ನು ನಿಗ್ರಹಿಸಿಕೊಂಡು, ಪ್ರಾಣವನ್ನು ಸ್ಥಾಯಿಯಲ್ಲಿರಿಸಿ ನಿಃಸಂಕಲ್ಪದಿಂದ ಸ್ವಸ್ಥಚಿತ್ತನಾಗಿ ಯೋಗಾಭ್ಯಾಸ ಮಾಡಬೇಕು. ಜೀವಂತನಾದ ಪುರುಷನಲ್ಲಿ ಪ್ರಾಣನು ಆ ಪ್ರಾಣನಲ್ಲಿ ಉದ್ಭವಿಸಿರುವುದರಿಂದ ಈ ಎರಡೂ ಪ್ರಾಣಗಳೂ ಒಂದರಲ್ಲೊಂದು ಐಕ್ಯವಾಗಲಿ. ಇದನ್ನು ನಾಲ್ಕನೆಯ ಸಾಧನೆ ಎನ್ನುತ್ತಾರೆ. ಆದ್ದರಿಂದ ಹೀಗೆ ಹೇಳಲಾಗಿದೆ.

ಅಚಿತ್ತಂಚಿತ್ತಮಧ್ಯಸ್ಥಮಚಿಂತ್ಯಂಗುಹ್ಯಮುತ್ತಮಂತತ್ರಚಿತ್ತಂನಿಧಾಯೇತತಚ್ಚಲಿಂಗಂ ನಿರಾಶ್ರಯಂ । ಅಥಾನ್ಯತ್ರಾಪ್ಯುಕ್ತಂ । ಅತಃಪರಾಽಸ್ಯಧಾರಣಾ ತಾಲುರಸನಾಗ್ನ ನಿಪೀಡನಾದ್ವಾಂಗ್ಮನಃ ಪ್ರಾಣನಿರೋಧನಾತ್ ಬ್ರಹ್ಮತರ್ಕೇಣ ಪಶ್ಯತಿ । ಯದಾತ್ಮನಾಽಽತ್ಮಾನ ಮಣೋರಣೀಯಾಂ ಸಂದ್ಯೋತಮಾನಂ ಮನಃ ಕ್ಷಯಾತ್ಪಶ್ಯತಿ ತದಾಽಽತ್ಮನಾಽಽತ್ಮಾನಂ ದೃಷ್ಟ್ವಾ ನಿರಾತ್ಮಾ ಭವತಿ । ನಿರಾತ್ಮಕತ್ವಾದಸಂಖ್ಯೋಽಯೋನಿಶ್ಚಿಂತ್ಯಃ । ಮೋಕ್ಷಲಕ್ಷಣಮಿತ್ಯೇತತ್ ಪರಂ ರಹಸ್ಯಂ ಇತ್ಯೇವಂಹ್ಯಾಹ-ಚಿತ್ತಸ್ಯಹಿ ಪ್ರಸಾದೇನ ಹನ್ತಿಕರ್ಮ ಶುಭಾಶುಭಂ । ಪ್ರಸನ್ನಾಽಽತ್ಮಾ ನಿಸ್ಥಿತ್ವಾ ಸುಖಮವ್ಯಯ ಮಶ್ನುತ ಇತಿ ||೨೦||

ಯಾವುದು ಚಿತ್ತವಲ್ಲವೋ ಮತ್ತು ಚಿತ್ತದ ಮಧ್ಯದಲ್ಲಿದ್ದು ಅಚಿಂತ್ಯವಾಗಿದೆಯೋ ಗುಹ್ಯವಾಗಿದ್ದು ಉತ್ತಮವಾಗಿದೆಯೋ ಅಲ್ಲಿ ಮಾನವನು ತನ್ನ ಚಿತ್ತವನ್ನು ಐಕ್ಯಗೊಳಿಸಲಿ. ಆಗ ಈ ಜೀವಕ್ಕೆ ಯಾವ ಆಶ್ರಯವೂ ಇಲ್ಲವಾಗುತ್ತದೆ.

ಬೇರೊಂದು ಕಡೆ ಹೀಗೆ ಹೇಳಲಾಗಿದೆ—ಅವನಿಗೆ ಇದಕ್ಕಿಂತಲೂ ಹೆಚ್ಚಿನ ಧಾರಣೆಯು ಕಾದಿದೆ. ನಾಲಗೆಯ ತುದಿಯನ್ನು ಅಂಗುಳಿನಲ್ಲಿ ಒತ್ತಿ ಹಿಡಿದು ವಾಕ್ಕು, ಮನಸ್ಸು ಮತ್ತು ಪ್ರಾಣವನ್ನು ಬಿಗಿ ಹಿಡಿದು ತರ್ಕ ಮಾಡುವುದರ ಮೂಲಕ ಬ್ರಹ್ಮನನ್ನು ಕಾಣುತ್ತಾನೆ. ಮನಸ್ಸನ್ನು ಬಿಗಿ ಹಿಡಿದಲ್ಲಿ ತನ್ನ ಆತ್ಮನ ಮೂಲಕ ಅಣುಗಳಲ್ಲಿ ಅಣುವಾಗಿರುವ ಜ್ಯೋತಿಸ್ವರೂಪನಾದ ಆತ್ಮನನ್ನು ಕಾಣುತ್ತಾನೆ. ತರುವಾಯ ತನ್ನ ಆತ್ಮನನ್ನು ಆತ್ಮನ ಮೂಲಕ ಪಡೆದುಕೊಂಡು ನಿರಾತ್ಮನಾಗುತ್ತಾನೆ. ನಿರಾತ್ಮಕತ್ವದ ಸಂಖ್ಯೆಯು ಮೂಲವಿಲ್ಲದೆಯೂ, ಎಣಿಸಲಾರದಷ್ಟೂ ಇರುತ್ತದೆ. ಇದು ಮೋಕ್ಷ ಲಕ್ಷಣವೆಂದೂ, ಪರಮ ರಹಸ್ಯವೆಂದೂ, ಭಾವಿಸಲಾಗಿದೆ. ಮತ್ತು ಹೀಗೆ ಹೇಳಲಾಗಿದೆ. ತನ್ನ ಚಿತ್ತದ ಪ್ರಭಾವದಿಂದ ಪಡೆದ

ಶುಭಾಶುಭ ಫಲಗಳನ್ನು ತನ್ನ ಆತ್ಮನು ಪ್ರಶಾನ್ತನಾದ ಮತ್ತು ಸ್ಫಟಿಕವಾದ ಆತ್ಮ ನಲ್ಲಿ ಸೇರುವುದರ ಮೂಲಕ ಕಳೆದುಕೊಳ್ಳುತ್ತಾನೆ. ಆಗ ಅವನು ಶಾಶ್ವತವಾದ ಸುಖವನ್ನು ಪಡೆಯುತ್ತಾನೆ.

ಅಥಾನ್ಯತ್ರಾಪ್ಯುಕ್ತಂ - ಊರ್ಧ್ವಗಾನಾಡೀ ಸುಷುಮ್ನಾಖ್ಯಾಪ್ರಾಣಸಂಚಾರಿಣೀ ತಾಲ್ವನ್ತರ್ವಿಚ್ಛಿನ್ನಾ । ತಯಾಪ್ರಾಣೋಂಕಾರ ಮನೋಯುಕ್ತಯೋರ್ಧ್ವ ಮುತ್ಕ್ರಮೇತ್ತಾಲ್ವಧ್ಯಗ್ರಂಪರಿವರ್ತ್ಯಚೇಂದ್ರಿಯಾಣ್ಯ ಸಂಯೋಜ್ಯಮಹಿಮಾ ಮಹಿಮಾನಂನಿರೀಕ್ಷೇತ । ತತೋ ನಿರಾತ್ಮಕತ್ವಮೇತಿ । ನಿರಾತ್ಮಕತ್ವಾನ್ನ ಸುಖದುಃಖಭಾಗ್ಭವತಿ । ಕೇವಲತ್ವಂಲಭತಾ ಇತ್ಯೇವಂಹ್ಯಾಹ । ಪರಃ ಪೂರ್ವಂ ಪ್ರತಿಷ್ಠಾಪ್ಯ ನಿಗ್ರಹೀತಾನಿಲಂತತಃ । ತೀರ್ತ್ವಾಪಾರಮಪಾರೇಣ ಪಶ್ಚಾದ್ಯುಂಜತಿ ಮೂರ್ಧನಿ ॥೨೧॥

ಬೇರೊಂದು ಕಡೆ ಹೀಗೆ ಹೇಳಲಾಗಿದೆ-ಸುಷುಮ್ನನಾಡಿಎಂಬುದುಊರ್ಧ್ವಗಾಮಿಯಾಗಿ ಪ್ರಾಣ ಸಂಚಾರಕ್ಕೆ ದಾರಿ ಮಾಡಿ ಅಂಗುಳಿನಲ್ಲಿ ವಿಚ್ಛಿನ್ನವಾಗಿದೆ. ಅದರ ಮೂಲಕ ಅದು ಪ್ರಾಣದೊಡನೆ ಸೇರಿದರೆ ಓಂಕಾರವಾಗುತ್ತದೆ. ಮತ್ತು ಮನಸ್ಸಿನಿಂದಲೂ ಊರ್ಧ್ವಗಮನಮಾಡಿ ತನ್ನನಾಲಿಗೆಯ ತುದಿಯನ್ನುಅಂಗುಳಿನ ಮೇಲೆ ಹಿಂದಿರುಗಿಸಿ ಕೊಂಡರೆ ಮತ್ತು ತನ್ನ ಆತ್ಮನನ್ನು ಬಂಧಿಸಿಕೊಂಡರೆ ಮಹಿಮೆಯು ಮಹಿಮೆಯನ್ನು ನಿರೀಕ್ಷಿಸಿದಂತಾಗುತ್ತದೆ. ತರುವಾಯ ಅವನು ಅನಾತ್ಮದ ಕಡೆಗೆ ಹೋಗುತ್ತಾನೆ, ಆ ಅನಾತ್ಮತ್ವದಿಂದಾಗಿ ಸುಖ ದುಃಖಗಳ ಅನುಭವವನ್ನು ಪಡೆಯುತ್ತಾನೆ. ಮತ್ತು ಕೇವಲತ್ವವನ್ನು ಹೊಂದುತ್ತಾನೆ. ಆದ್ದರಿಂದ ಹೀಗೆ ಹೇಳಲಾಗಿದೆ. ಮೊದಲು ನಿಗ್ರಹೀತವಾದ ಪ್ರಾಣನನ್ನು ಪ್ರತಿಷ್ಠಾಪಿಸಿ ತನ್ನ ಮಿತಿಯನ್ನು ಮೀರಿ ತನ್ನ ಶಿರಾಗ್ರದಲ್ಲಿರುವ ಅಪಾರನನ್ನು ಸೇರಲಿ.

ಅಥಾನ್ಯತ್ರಾಪ್ಯುಕ್ತಂ ದ್ವೇವಾಹ ಬ್ರಹ್ಮಣೇ ಅಭಿಧ್ಯೇಯೇ ಶಬ್ದಶ್ಚಾಶಬ್ದಶ್ಚ । ಅಥಶಬ್ದೇನೈವಾ ಶಬ್ದಮಾವಿಷ್ಕ್ರಿಯತೇ ಅಥ ತತ್ರೋಮಿತಿ ಶಬ್ದಃ ಅನೇ ನೋರ್ಧ್ವ ಮುತ್ಕ್ರಾಂತೋಽಶಬ್ದೇ ನಿಧನಮೇತಿ । ಅಥ ಹ್ಯೈಷಾಗತಿಃ । ಏತದ ಮೃತಂ । ಏತತ್ಸಾಯುಜ್ಯತ್ವಂ ನಿರ್ವೃತತ್ವಂ ತಥಾಚೇತಿ । ಅಥಯಥೋರ್ಣ ನಾಭಿಸ್ತನ್ತುನೋರ್ಧ್ವಮುತ್ಕ್ರಾಂತೋಽವಕಾಶಂಲಭತೀತ್ಯೇವಂವಾಹ ಖಲ್ವ ಸಾ ಅಭಿಧ್ಯಾತೋಮಿತ್ಯನೇನೋರ್ಧ್ವ ಮುತ್ಕ್ರಾಂತಃಸ್ವಾತಂತ್ರ್ಯಂ ಲಭತೇ । ಅನ್ಯಥಾಪರೇಶಬ್ದವಾದಿನಃ ಶ್ರವಣಾಂಗುಷ್ಠಯೋಗೇನಾನ್ತರ್ಹೃದಯಾಕಾಶಶಬ್ದ

ಮಾಕರ್ಣ್ಯನ್ತಿ । ಸಪ್ತವಿಧೇಯಂತಸ್ಯೋಪಮ । ಯಥಾನದ್ಯಃಕಿಂಕಿಣೀಕಾಂಸ್ಯ ಚಕ್ರಕಭೇಕವಿಃಕೃನ್ಧಿಕಾವೃಷ್ಟಿರ್ನಿವಾತೇ ವದತೀತಿ । ತಂಪೃಥಗ್ಲಕ್ಷ್ಣ್ಮಣಮತೀ ತ್ಯಪರೇಽಶಬ್ದೇಽವ್ಯಕ್ತೇಬ್ರಹ್ಮಣ್ಯಸ್ತಂಗತಾಃ। ತತ್ರತೇಽಪೃಥಗ್ಧರ್ಮಿಣೋಽಪೃ ಥಗ್ವಿವೇಕ್ಯಾಯಥಾಸಂಪನ್ನಾಮಧುತ್ವಂನಾನಾರಸಾಃ । ಇತ್ಯೇವಂಹ್ಯಾಹ-ದ್ವೇ ಬ್ರಹ್ಮಣೇವೇದಿತವ್ಯೇ ಶಬ್ದಬ್ರಹ್ಮಪರಂಚಯತ್ । ಶಬ್ದ ಬ್ರಹ್ಮಣಿನಿಷ್ಣಾತಃ ಪರಂಬ್ರಹ್ಮಾಧಿಗಚ್ಛತಿ ||೨೨||

ಅದು ಬೇರೊಂದು ಕಡೆ ಹೀಗೆ ಹೇಳಲಾಗಿದೆ. ಎರಡು ಬ್ರಾಹ್ಮಣಗಳಾದ ಶಬ್ದ ಮತ್ತು ಅಶಬ್ದ ಇವುಗಳನ್ನು ಅಭಿದ್ಯಾನ ಮಾಡಬೇಕು. ಶಬ್ದದಿಂದ ಮಾತ್ರ ಆ ಶಬ್ದವು ಹೊರ ಬರುತ್ತದೆ. ಈಗ ಓಂಕಾರ ಶಬ್ದವು ಊರ್ಧ್ವಮುಖವಾಗಿ ಚಲಿ ಸುತ್ತಾ ಆ ಶಬ್ದದಲ್ಲಿ ಸ್ಥಾಯಿಯಾಗುತ್ತದೆ. ಇದೇ ಸರಿಯಾದ ಮಾರ್ಗವೆಂದು ಕೆಲವರು ಹೇಳುತ್ತಾರೆ. ಇದೇ ಅಮೃತತ್ವ. ಇದು ಸಾಯುಜ್ಯತ್ವಕ್ಕೂ ನಿರ್ವೃ ತತ್ವಕ್ಕೂ ಬೆಸುಗೆ ಹೇಗೆ ಜೇಡರ ಹುಳುವು ತಾನು ರಚಿಸಿದ ಬಲೆಯ ಮೂಲಕ ಮೇಲೆ ಹತ್ತುತ್ತಾ ಉತ್ಕ್ರಾಂತಿಯನ್ನು ಲಭಿಸಿಕೊಳ್ಳುತ್ತದೆಯೋ ಹಾಗೆಯೇ ಸಾಧ ಕನೂ ಕೂಡ ಓಂಕಾರದ ಮೂಲಕ ಮೇಲೇರುತ್ತಾ ಕಟ್ಟಕಡೆಗೆ ಸ್ವಾತಂತ್ರ್ಯವನ್ನು ಅನುಭವಿಸುತ್ತಾನೆ. ಶಬ್ದವನ್ನು ಬ್ರಹ್ಮನೆಂದು ತಿಳಿದುಕೊಂಡಿರುವ ಕೆಲವರು ಬೇರೆ ರೀತಿಯಾಗಿಅಭಿಪ್ರಾಯಪಡುತ್ತಾರೆ. ಕಿವಿಗಳನ್ನು ತಮ್ಮ ಬೆರಳಿನಿಂದ ಮುಚ್ಚಿಕೊಳ್ಳುವ ಮೂಲಕ ಅಂತ ಹೃದಯಾಕಾಶದಲ್ಲಿರುವ ಶಬ್ದವನ್ನು ಕೇಳುತ್ತಾರೆ. ಅಲ್ಲಿ ಏಳು ವಿಧವಾದ ಹೋಲಿಕೆಯ ಶಬ್ದಗಳು ಕಂಡು ಬರುತ್ತವೆ. ಅವೆಂದರೆ, ನದಿಗಳು ಘಂಟೆ, ಕಂಚಿನ ಪಾತ್ರೆ, ಚಕ್ರ, ಕಪ್ಪೆಗಳ ಒಟಗುಟ್ಟುವಿಕೆ, ಮಳೆ, ಪ್ರಶಾನ್ತ ಸ್ಥಳ ದಿಂದ ಕೇಳುವ ಮಾನವನ ಮಾತು ಮತ್ತು ಈ ಎಲ್ಲಾ ಸ್ಥಿತಿಗಳನ್ನು ಮೀರಿದಾಗ ಕೇಳುವ ಶಬ್ದ. ಇವೆಲ್ಲವೂ ಪರಾತ್ಪರನಲ್ಲಿ ಸೇರಿ ಆ ಶಬ್ದವು ಬ್ರಹ್ಮನಲ್ಲಿ ಅಸ್ತಂಗತ ವಾಗುತ್ತದೆ. ಅಲ್ಲಿ ಅವು ಜೇನು ತುಪ್ಪವು ಹೇಗೆ ಅನೇಕ ವಿಧವಾದ ರಸಗಳಿಂದ ಕೂಡಿದ್ದು ಅವುಗಳನ್ನು ಪ್ರತ್ಯೇಕವಾಗಿ ಹೇಳಲಾಗುವುದಿಲ್ಲವೋ ಹಾಗೆ ಅದರ ಪ್ರತ್ಯೇಕ ಗುಣ ಮತ್ತು ನಡತೆಗಳನ್ನು ಹೇಳಲಾಗುವುದಿಲ್ಲ. ಆದ್ದರಿಂದ ಅದನ್ನು ಹೀಗೆ ಹೇಳಲಾಗಿದೆ. ಎರಡು ಬ್ರಹ್ಮಗಳಾದ ಶಬ್ದ ಬ್ರಹ್ಮ ಮತ್ತು ಪರಂಬ್ರಹ್ಮ ಗಳನ್ನು ಅರಿಯಬೇಕಾಗಿದೆ. ಯಾರು ಮೊದಲು ಶಬ್ದ ಬ್ರಹ್ಮನನ್ನು ಅರಿಯುವರೋ ಅವರು ಪರಬ್ರಹ್ಮನಲ್ಲಿ ಐಕ್ಯರಾಗುವರು.

ಅಥಾನ್ಯತ್ರಾಪ್ಯುಕ್ತಂ - ಯಃಶಬ್ದಸ್ತದೋಮಿತ್ಯೇತದಕ್ಷರಂ । ಯದಸ್ಯಾಗ್ರಂ

ತಚ್ಛಾಂತ, ಮಶಬ್ದ, ಮಭಯ, ಮಶೋಕ, ಮಾನಂದಂ, ತೃಪ್ತಂ, ಸ್ಥಿರ, ಮಚಲ, ಮಮೃತ, ಮಚ್ಯುತಂ, ಧೃವಂ, ವಿಷ್ಣು ಸಂಜ್ಞಿತಂ । ಸರ್ವಾಪರ ತ್ವಾಯತದೇತಾ ಉಪಾಸೀತ । ಇತ್ಯೇವಂಹ್ಯಾಹ - ಯೋಽಸೌಪರಾಪರೋ ದೇವೋ ಓಂಕಾರೋನಾಮ ನಾಮತಃ । ನಿಃಶಬ್ದಃ ಶೂನ್ಯಃ ಭೂತಸ್ತು ಮೂರ್ಧ್ನಿಸ್ಥಾನೇ ತತೋಽಭ್ಯಸೇತ್ ॥೨೩॥

ಬೇರೊಂದು ಕಡೆ ಹೀಗೆ ಹೇಳಲಾಗಿದೆ. ಶಬ್ದ ಎಂಬುದು ಓಂಕಾರವೇ ಆಗಿದೆ. ಅದರ ಕೊನೆಯು ಶಾಂತವೂ, ಶಬ್ದವಿಲ್ಲದ್ದೂ, ಭಯವಿಲ್ಲದ್ದೂ, ದುಃಖವಿಲ್ಲದ್ದೂ, ಆನಂದವೂ, ತೃಪ್ತಿಯೂ, ಸ್ಥಿರವೂ, ಅಚಲವೂ, ಅಮೃತವೂ, ಅಚ್ಯುತವೂ, ಧೃವವೂ, ವಿಷ್ಣುವೆಂಬ ಸಂಜ್ಞೆಯುಳ್ಳದ್ದೂ ಆಗಿದೆ. ಎಲ್ಲವುದಕ್ಕಿಂತಲೂ ಹೆಚ್ಚಾದ ಪದವಿಯನ್ನು ಪಡೆಯಬೇಕೆಂದಿದ್ದಲ್ಲಿ ಈ ಎರಡು ಎಂದರೆ ಶಬ್ಧ, ಅಶಬ್ಧ ಇವು ಗಳನ್ನು ಆರಾಧಿಸಬೇಕು. ಆದ್ದರಿಂದ ಹೀಗೆ ಹೇಳಲಾಗಿದೆ. ಯಾರು ಪರಾ ಮತ್ತು ಅಪರಾ ಆಗಿರುವರೋ ಅದನ್ನು ಓಂಕಾರ ದೇವತೆಯೇ ಬಲ್ಲದು. ಅದು ನಿಃಶಬ್ದವೂ, ಶೂನ್ಯವೂ, ಆದ ಭೂತವಾಗಿದೆ. ಆದ್ದರಿಂದ ಅದನ್ನು ಶಿರೋಗ್ರ ದಲ್ಲಿ ಅಭ್ಯಸಿಸಬೇಕು.

ಅಥಾನ್ಯತ್ರಾಪ್ಯುಕ್ತಂ—ಧನುಃ ಶರೀರಃ । ಓಮಿತ್ಯೇತಚ್ಛರಃ । ಶಿಖಾಸ್ಯಮನಃ । ತಮೋಲಕ್ಷ್ಯಂ । ಭಿತ್ವಾತಮೋಽತಮಾವಿಷ್ಟಮಾಗಚ್ಛತಿ । ಅಥಾಽಽವಿಷ್ಟಂ ಭಿತ್ವಾ ಅಲಾತ ಚಕ್ರಮಿವಸ್ಫುರಂತಮಾದಿತ್ಯವರ್ಣಭೂರ್ಜಸ್ವಂತಂ ಬ್ರಹ ತಪಸಃ ಚರ್ಯಮಪಶ್ಯತ್ । ಯದಮುಷ್ಮಿನ್ನಾದಿತ್ಯೇಽಥ ಸೋಮೇಽಗ್ನೌ ವಿದ್ಯುತಿ ವಿಭಾತಿ । ಅಥಖಲ್ವೇನಂದೃಷ್ಟ್ವಾಽಮೃತತ್ವಂಗಚ್ಛತಿ । ಇತ್ಯೇವಂ ಹ್ಯಾಹ । ಧ್ಯಾನಮಂತಃ ಪರೇತತ್ವೇಲಕ್ಷ್ಯೇಷುಚನಿಧೀಯತೇ ಅತೋಽವಿಶೇಷ ವಿಜ್ಞಾನಂ ವಿಶೇಷಮುಪಗಚ್ಛತಿ । ಮಾನಸೇಚ ವಿಲೀನೇತುಯತ್ಸುಖಂಚಾಽಽ ತ್ಮಸಾಕ್ಷಿಕಂ । ತದ್ಬ್ರಹ್ಮಚಾಮೃತಂ ಶುಕ್ರಂಸಾಗತಿರ್ಲೋಕ ಏವಸಃ ॥೨೪॥

ಬೇರೊಂದು ಕಡೆ ಹೀಗೆ ಹೇಳಲಾಗಿದೆ. ಈ ದೇಹವೆಂಬುದು ಒಂದು ಬಿಲ್ಲಿನ ಹಾಗೆ. ಓಂಕಾರವೇ ಬಿಲ್ಲು, ಮನಸ್ಸು ಅದರ ಗುರಿ, ಕತ್ತಲು ಅದರ ಲಕ್ಷ್ಯ, ಕತ್ತಲನ್ನು ಬೇಧಿಸಿಕೊಂಡು ಕತ್ತಲಿನಿಂದ ಮುಚ್ಚಲ್ಪಡದಿರುವ ಆವರಣವನ್ನು ಪ್ರವೇಶಿಸುತ್ತಾನೆ. ತರುವಾಯ ಈ ರೀತಿಯಾಗಿ ಸುತ್ತುವರೆದಿರುವ ಸನ್ನಿವೇಶವನ್ನು ಭೇದಿಸಿಕೊಂಡು ಬ್ರಹ್ಮನನ್ನು ಕಾಣುತ್ತಾನೆ. ಅವನು ಬೆಂಕಿಯ ಚಕ್ರದ ಹಾಗೆ ಕಿಡಿಗಳನ್ನು ಹಾರಿಸುತ್ತ

ಆದಿತ್ಯ ವರ್ಣದಿಂದ ಕೂಡಿ, ಶಕ್ತಿ ಪೂರ್ಣವಾಗಿ, ಕತ್ತಲಿನಿಂದಾಚೆಗೆ, ದೂರದಲ್ಲಿರುವ ಚಂದ್ರನಲ್ಲೂ, ಸೂರ್ಯನಲ್ಲೂ, ಅಗ್ನಿಯಲ್ಲೂ, ವಿದ್ಯುತ್ತಿನಲ್ಲೂ, ಕಾಣಿಸಿಕೊಂಡು ಅಮೃತತ್ವದ ಕಡೆಗೆ ನಾಗುತ್ತಾನೆ. ಆದ್ದರಿಂದ ಹೀಗೆ ಹೇಳಲಾಗಿದೆ. ಧ್ಯಾನದ ಲಕ್ಷ್ಯವು ಪರಾತ್ಪರನ ಅಂತಃ ಮತ್ತು ಬಹಿರ್ವ್ಯಾಪಾರಗಳ ಕಡೆಗಿರಬೇಕು. ಆಗ ಅವಿಶೇಷವಾದ ವಿಜ್ಞಾನವು ವಿಶೇಷವಾಗುತ್ತದೆ. ಆದರೆ ಅದು ಮನಸ್ಸಿನಲ್ಲಿ ವಿಲೀನವಾದರೆ ಆ ಸುಖವು ಆತ್ಮಸಾಕ್ಷಿಕವಾಗಿರುತ್ತದೆ. ಅದೇ ಬ್ರಹ್ಮ, ಅಮೃತ, ಶುಕ್ರ, ಅದೇ ಮಾರ್ಗ ಅದೇ ನಿಃಸಂಶಯವಾದ ನಿಜವಾದ ಲೋಕ.

ಅಥಾನ್ಯತ್ರಾಪ್ಯುಕ್ತಂ—ನಿರ್ದೇವಾಸ್ತುರ್ಹಿತೇಂದ್ರಿಯಃ ಶುದ್ಧತಪಯಾಧಿಯಾಸ್ವಪ್ನ ಇವಯಃ ಪಶ್ಯತೀಂದ್ರಿಯ ಬಿಲೇಽವಿವಶಃ ಪ್ರಣವಾಖ್ಯಂ, ಪ್ರಣೇತಾರಂ ಭಾರೂಪಂ, ವಿಗತನಿದ್ರಂ, ವಿಜರಂ, ವಿಮೃತ್ಯುಂ, ವಿಶೋಕಂಚ । ಸೋಽಪಿಪ್ರಣವಾಖ್ಯಃ ಪ್ರಣೇತಾ ಭಾರೂಪೋ ವಿಗತ ನಿದ್ರೋ ವಿಜರೋ ವಿಮೃತ್ಯುರ್ವಿಶೋಕೋಭವತಿ। ಇತ್ಯೇವಂಹ್ಯಾಹಏವಂಪ್ರಾಣಮಥೋಂಕಾರಂಯಸ್ಮಾತ್ ಸರ್ವಮನೇಕಧಾ । ಯುನಕ್ತಿಯಂಜತೇವಾಽಪಿತಸ್ಮಾದ್ಯೋಗಯಿತಿಸ್ಮೃತಃ । ಏಕತ್ವಂ ಪ್ರಾಣಮನಸೋರಿಂದ್ರಿಯಾಣಾಂತಥೈವಚ । ಸರ್ವಭಾವಪರಿತ್ಯಾಗೋ ಯೋಗಂ ಇತ್ಯಭಿದೀಯತೇ ||೩೫||

ಬೇರೊಂದು ಕಡೆ ಹೀಗೆ ಹೇಳಲಾಗಿದೆ. ಯಾರು ನಿದ್ರೆ ಮಾಡುತ್ತಿರುವಂತೆ ತನ್ನ ಇಂದ್ರಿಯಗಳನ್ನು ಅಂತರ್ಹಿತಗೊಳಿಸಿಕೊಂಡು, ತಪಸ್ಸನ್ನಾಚರಿಸುವಂತೆ, ಶುದ್ಧ ಮನಸ್ಕನಾಗಿ, ಅಂತರ್ಗುಹೆಯಲ್ಲಿರುವ ಇಂದ್ರಿಯಗಳ ಅಧೀನವಾಗಿರದೆ, ಪ್ರಣವವನ್ನು ಕಂಡುಕೊಂಡು, ಜ್ಯೋತಿರ್ಮಯನೂ, ನಿದ್ರಾರಹಿತನೂ, ಜರಾರಹಿತನೂ, ಅಮೃತನೂ, ದುಃಖಗಳಿಲ್ಲದವನೂ, ಆದ ಅವನು ತನ್ನನ್ನೇ ಪ್ರಣವನೆಂದು ಹೇಳಿಕೊಂಡು ಜ್ಯೋತಿರ್ಮಯನೂ, ನಿದ್ರಾರಹಿತನೂ, ಜರಾರಹಿತನೂ, ಅಮೃತನೂ, ಮತ್ತು ದುಃಖವಿಲ್ಲದವನೂ ಆಗುತ್ತಾನೆ. ಆದ್ದರಿಂದ ಹೀಗೆ ಹೇಳಿಲಾಗಿದೆ. ಏಕೆಂದರೆ ಅವನೆ ರೀತಿಯಲ್ಲಿ ಅವನು ಪ್ರಾಣನನ್ನು ಸೇರಿ ಓಂಕಾರವೂ ಮತ್ತು ಈ ಲೋಕವೆಲ್ಲವೂ ಅದರ ಅನೇಕತ್ವದೊಡನೆ ಅಥವಾ ಅವೆಲ್ಲವೂ ಸೇರಿ ನಡೆಸುವ ಕಾರ್ಯಕ್ರಮವೇ ತಪಸ್ಸು ಅಥವಾ ಯೋಗ. ಪ್ರಾಣದ ಏಕತ್ವ ಮನಸ್ಸೂ ಅದರ ಹಾಗೆ ಇಂದ್ರಿಯಗಳೂ, ಸರ್ವಕಾಲದಲ್ಲೂ, ಸರ್ವಭಾವಪರಿತ್ಯಾಗದಿಂದಿರುವುದನ್ನೇ ಯೋಗ್ಯವೆಂದು ಕರೆಯಲಾಗುತ್ತದೆ.

ಅಥಾನ್ಯತ್ರಾಪ್ಯುಕ್ತಂ—ಯಥಾವಾಽಪ್ಸುಚಾರಿಣಃ ಶಾಕುನಿಕಃ ಸೂತ್ರಯಂತ್ರೇ ಣೋದ್ಧೃತ್ಯೋದರೇಽಗ್ನೌಜುಹೋತ್ಯೇವಂವಾವಖಲ್ವಿಮಾ ನ್ಪ್ರಾಣೋಓಮಿತ್ಯ ನೇನೋದ್ಧೃತ್ಯಾನಾಮಯೇಽಗ್ನೌಜುಹೋತಿ । ಅತಸ್ತಪ್ತೋರ್ವಿವಸಃ । ಅಥ ಯಥಾತಪ್ತೋರ್ವಿವಸಃ । ಅಥಯಥಾತಪ್ತೋರ್ವಿಸರ್ವಿಸ್ತೃಣ ಕಾಷ್ಠಸಂಸ್ಪರ್ಶೇ ನೋಜ್ವಲತೀತ್ಯೇವಂವಾವಖಲ್ವಸಾವ ಪ್ರಾಣಾಖ್ಯಃ ಪ್ರಾಣಸಂಸ್ಪರ್ಶೇನೋ ಜ್ವಲತಿ । ಅಥಯದುಜ್ವಲತ್ಯೇತದ್ಬ್ರಹ್ಮಣೋರೂಪಂಚ । ಏತದ್ವಿಷ್ಣೋಃ ಪರಮಂಪದಂಚ । ಏತದ್ರುದ್ರಸ್ಯರುದ್ರತ್ವಂ । ಏತತ್ತದ ಪರಿಮಿತಧಾಚಾಽಽತ್ಮಾ ನಂವಿಭಜ್ಯಪೂರಯತೀ ಮಾಲ್ಲೋಕಾ । ಇತ್ಯೇವಂಹ್ಯಾಹ-ವಹ್ನೇಶ್ಚಯದ್ವತ್ ಖಲುವಿಸ್ಫುಲಿಂಗಾಃ ಸೂರ್ಯಾನ್ ಮಾಯೂಖಾಶ್ಚತಥೈವತಸ್ಯ । ಪ್ರಾಣಾದ ಯೋವೈಪುನರೇವತಸ್ಮಾದ್ಽಭ್ಯುಚ್ಚರಂತೀಹ ಯಥಾಕ್ರಮೇಣ ॥೩೬॥

ಬೇರೊಂದು ಕಡೆ ಹೀಗೆ ಹೇಳಲಾಗಿದೆ. ಹೇಗೆ ಬೇಟೆಗಾರನು ನೀರಿನಲ್ಲಿ ವಾಸಿಸುವ ಪ್ರಾಣಿಗಳನ್ನು ತನ್ನ ಬಲೆಯಿಂದ ಹೊರಗೆ ತೆಗೆದು ತನ್ನ ಹೊಟ್ಟೆಯಲ್ಲಿಡಗಿರುವ ಅಗ್ನಿದೇವನಿಗೆ ಆಹುತಿಯಾಗಿ ಕೊಡುವನೋ ಹಾಗೆಯೇ ಓಂಕಾರದಿಂದ ದೇಹದಲ್ಲಿ ರುವ ಪ್ರಾಣಗಳನ್ನು ತೆಗೆದು ಕೆಡುಕಿನಿಂದ ದೂರವಾಗಿರುವ ಅಗ್ನಿಯಲ್ಲಿ ಆಹುತಿ ಯಾಗಿ ಕೊಡುತ್ತಾನೆ. ಆದ್ದರಿಂದ ಅದು ಕಾದ ಪಾತ್ರೆಯಂತಿದೆ. ಹೇಗೆ ಕಾದ ಪಾತ್ರೆಯಲ್ಲಿರುವ ತುಪ್ಪವು ಜ್ವಲಿಸುತ್ತಿರುವ ಹುಲ್ಲು ಅಥವಾ ಕಟ್ಟಿಗೆಯ ಮೂಲಕ ಪ್ರಜ್ವಲಿಸುತ್ತದೆಯೋ ಹಾಗೆ ಅಪ್ರಾಣವೆಂದು ಕರೆಯಲ್ಪಡುವವನು ಪ್ರಾಣಗಳ ಸಂಪರ್ಕದಿಂದ ಜ್ವಲಿಸುತ್ತದೆ. ಈಗ ಯಾವುದು ಬ್ರಹ್ಮನ ರೂಪದಿಂದ ಜ್ವಲಿಸು ತ್ತದೆಯೋ ಅದು ವಿಷ್ಣುವಿನ ಪರಮ ಪದ, ಅದೇ ರುದ್ರನ ರುದ್ರತ್ವ, ಅದು ತನ್ನಷ್ಟಕ್ಕೆ ತಾನೇ ವಿಭಜಿಸಿಕೊಂಡು ಅನಿಯಮಿತವಾದ ಭಾಗಗಳಾಗಿ ಈ ಲೋಕ ಗಳನ್ನು ತುಂಬುತ್ತವೆ. ಆದ್ದರಿಂದ ಹೀಗೆ ಹೇಳಲಾಗಿದೆ. ಹೇಗೆ ಬೆಂಕಿಯಿಂದ ಸಿಡಿದ ಕಿಡಿಗಳು ಸೂರ್ಯನ ಕಿರಣಗಳಂತೆ ಹೊರಬರುತ್ತವೆಯೋ ಹಾಗೆಯೇ ಪ್ರಾಣ ಮತ್ತು ಇತರವುಗಳು ಪುನಃ ಪುನಃ ಈ ಲೋಕದಲ್ಲಿ ಜನಿಸುತ್ತಾ ಯಥಾ ಕ್ರಮವಾಗಿರುತ್ತದೆ.

ಅಥಾನ್ಯತ್ರಾಪ್ಯುಕ್ತಂ—ಬ್ರಹ್ಮಣೋವಾವೈತತ್ತೇಜಃ ಪರಸ್ಯಾಮೃತಸ್ಯಾಶರೀರಸ್ಯ ಯಚ್ಛರೀರ ಸ್ಯೌಷ್ಣ್ಯಮಸ್ಯೈತದ್ಘೃತಂ । ಅಥಾಽಽವಿಃಸನ್ನಭಸಿ ನಿಹಿತಂವಾ । ಏತದ್ವೈಕಾಗ್ರ್ಯೇಣೈವಮನ್ತರ್ಹೃದಯಾ ಕಾಶಂವಿನುದನ್ತಿ ಯತ್ತಸ್ಯಜ್ಯೋತಿರಿವ

ಸಂಪದ್ಯತೀತ್ಯ ತಸ್ತದ್ಸ್ಥಾಪ ಮಚಿರೇಣೈತಿ । ಭೂಮಾವಯಸ್ಪಿಂಡಂ ನಿಹಿತಂ ಯಥಾಽಚಿರೇಣೈತಿ । ಭೂಮಿತ್ವಂ । ಮೃದ್ವತ್ಸಂಸ್ಥಮಯ ಸ್ಪಿಂಡಂ ಯಥಾಽ ಗ್ನ್ಯಯಸ್ಕಾರಾದಯೋನಾಭಿಭವನ್ತಿ । ಪ್ರಣಶ್ಯತಿಚಿತ್ತಂತಥಾಽಽಶ್ರಯೇಣ ಸಹೈವಂ । ಇತ್ಯೇವಂಹ್ಯಾಹ । ಹೃದ್ಯಾಕಾಶಮಯಂ ಕೋಶಮಾನಂದಂ ಪರ ಮಾಲಯಂ । ಸ್ವಂಯೋಗಶ್ಚ ತತೋಽಸ್ಮಾಕಂ ತೇಜಶ್ಚೈವಾಗ್ನಿ ಸೂರ್ಯ ಯೋಃ ||೨೭||

ಬೇರೊಂದು ಕಡೆ ಹೀಗೆ ಹೇಳಲಾಗಿದೆ. ಇದು ಪರಾತ್ಪರನಾದ, ಅಮೃತನಾದ, ದೇಹವಿಲ್ಲದ, ಆ ಬ್ರಹ್ಮನ ಹೃದಯ ದೇಹದಲ್ಲಿರುವ ಶಾಖದಂತಿದೆ. ಏಕೆಂದರೆ ಈ ದೇಹಕ್ಕೆ ಆ ಶಾಖವು ತುಪ್ಪದಂತಿದೆ. ಒಟ್ಟಿನಲ್ಲಿ ಅದು ಸ್ಫುಟವಾಗಿದ್ದು ಹೃದಯಾ ಕಾಶದಲ್ಲಿ ಬಂಧಿತವಾಗಿದೆ. ತರುವಾಯ ಅದು ಹೆಚ್ಚಾದ ಒಗ್ಗೂಡುವಿಕೆಯಿಂದ ಅದು ಹೃದಯಾಕಾಶದಿಂದ ಚಮರಿಸಲ್ಪಟ್ಟು ಆ ಶಾಖದ ಜ್ಯೋತಿಯು ಇದ್ದಕ್ಕಿದ್ದ ಹಾಗೆ ಕಾಣಿಸಿಕೊಳ್ಳುತ್ತದೆ. ಹೇಗೆ ಮಣ್ಣಿನಲ್ಲಿ ಅವಿತುಕೊಂಡಿರುವ ಕಬ್ಬಿಣದ ಉಂಡೆಯು ಜಾಗ್ರತೆಯಾಗಿ ಮಣ್ಣಿನ ರೂಪವನ್ನು ತಳೆಯುತ್ತದೆಯೋ ಹಾಗೆ ಅದು ಒಂದೊಂದಾಗಿ ವೇಗದಿಂದ ಜ್ಯೋತಿಯ ರೂಪವಾಗಿ ಹೊರ ಬೀಳುತ್ತದೆ. ಹೇಗೆ ಬೆಂಕಿ ಅಥವಾ ಕಂಚಿನ ಕೆಲಸಗಾರರು ಮತ್ತು ಇತರರು ಮಣ್ಣಿನಲ್ಲಿ ಹೂತು ಹೋಗಿರುವ ಕಬ್ಬಿಣದ ಉಂಡೆಯನ್ನು ಅದರ ಆ ಸ್ಥಿತಿಯಲ್ಲಿ ಲಕ್ಷಿಸುವುದಿಲ್ಲವೋ ಹಾಗೆಯೇ ಚಿತ್ತವೂ ಕೂಡ ಅದರ ಆಧಾರ ಸಮೇತ ಕಣ್ಮರೆಯಾಗುತ್ತದೆ. ಆದ್ದರಿಂದ ಹೀಗೆ ಹೇಳಲಾಗಿದೆ. ಹೃದಯದಲ್ಲಿ ಆಕಾಶದಿಂದ ತುಂಬಿರುವ ಉಗ್ರಾಣವು ಆನಂದಮಯವಾದ ಪರಮಾಲಯವಾಗಿ ನಮ್ಮದೇ ಆತ್ಮವಾಗಿಯೂ, ನಮ್ಮದೇ ಯೋಗವಾಗಿಯೂ ಇರುವುದು ಅಗ್ನಿಯ ಮತ್ತು ಆದಿತ್ಯನ ಶಾಖವೇ.

ಅಥಾನ್ಯತ್ರಾಪ್ಯುಕ್ತಂ—ಭೂತೇಂದ್ರಿಯಾರ್ಥಾನತಿಕ್ರಮ್ಯತತಃ ಪ್ರವ್ರಾಜ್ಯಂ ಧೃತಿ ದಂಡಂಧನುರ್ಗೃಹೀತ್ವಾಽನಭಿಮಾನಮಯೇನಚೈ ವೇಷುಣಾತಂಬ್ರಹ್ಮದ್ವಾರಪಾ ಲಂನಿಹತ್ಯಾದ್ಯಂಸಮ್ಮೋಹಮೌಲೀತೃಷ್ಣೇರ್ಷ್ಯಾಕುಂಡಲೀತಂದ್ರೀರಾಘವೇತ್ರ್ಯ ಭಿಮಾನಾಧ್ಯಕ್ಷಃ ಕ್ರೋಧಜ್ಯಂ ಪ್ರಲೋಭದಂಡಂ ಧನುರ್ಗೃಹೀತ್ವೇಚ್ಛಾಮ ಯೇನ ಚೈವೇಷುಣೇಮಾನಿ ಖಲುಭೂತಾನಿಹನ್ತಿ । ತಂಹತ್ವೋಂಕಾರಪ್ಲವೇ ನಾನ್ತ ರ್ಹೃದಯಾಕಾಶಸ್ಯಪಾರಂತೀರ್ತ್ವಾಽಽವಿರ್ಭೂತೇಽನ್ತರಾಕಾಶೇನಕ್ಯೈರವ ಟೈವಾವಟಕೃದ್ಧಾತುಕಾಮಃ ಸಂವಿಶತ್ಯೇವಂ ಬ್ರಹ್ಮಶಾಲಾಂ ವಿಶೇತ್ । ತತಃ

ಕ್ಷತುರ್ಜಾಲಂ ಬ್ರಹ್ಮಕೋಶಂ ಪ್ರಣುದೇದ್ಗುರ್ವಾಗಮನೇತಿ । ಅತಃ ಶುದ್ಧಃ ಪೂತಃ ಶೂನ್ಯಃ ಶಾನ್ತೋಽಪ್ರಾಣೋ ನಿರಾತ್ಮಾಽನನ್ತೋಽಕ್ಷಯ್ಯಃ ಸ್ಥಿರಃ ಶಾಶ್ವತೋಽಜಃ ಸ್ವತಂತ್ರಃ ಸ್ವೇಮಹಿಮ್ನಿ ತಿಷ್ಠತಿ । ಅತಃ ಸ್ವೇಮಹಿಮ್ನಿ ತಿಷ್ಠ ಮಾನಂದೃಷ್ಟ್ವಾಽಽವೃತ್ತ ಚಕ್ರಮಿವ ಸಂಸಾರಚಕ್ರ ಮಾಲೋಕಯತಿ । ಇತ್ಯೇವಂಹ್ಯಾಹ—ಷಡ್ಭಿರ್ಮಾಸೈಸ್ತುಯುಕ್ತಸ್ಯ ನಿತ್ಯಮುಕ್ತಸ್ಯದೇಹಿನಃ । ಅನಂತಃ ಪರಮೋಗುಹ್ಯಃ ಸಂಯಗ್ಯೋಗಃ ಪ್ರವರ್ತತೇ । ರಜಸ್ತಮೋಭ್ಯಾಂ ವಿದ್ಧಸ್ಯ ಸುಸಮಿದ್ಧಸ್ಯದೇಹಿನಃ । ಪುತ್ರದಾರಕುಟುಂಬೇಷುಸಕ್ತಸ್ಯನಕದಾಚನ ॥೨೮॥

ಬೇರೊಂದು ಕಡೆ ಹೀಗೆ ಹೇಳಲಾಗಿದೆ. ಭೂತಗಳಿಂದ ದೂರವಾದ ತರುವಾಯ ಇಂದ್ರಿಯಗಳು ಮತ್ತು ಅವುಗಳ ಸೂಕ್ಷ್ಮಾಂಗಗಳು ಬಿಲ್ಲನ್ನು ಎಳೆದುಕೊಂಡು, ತಾಪಸಿಯ ಜೀವವೆಂಬ ಹೆದೆಯನ್ನೇರಿಸಿ, ಧೃಡತೆ ಎಂಬ ಕಟ್ಟಿಗೆಯನ್ನು ಹೊಂದಿದ್ದು, ಆತ್ಮಾಭಿಮಾನದಿಂದ ಮುಕ್ತವಾಗಿರುವ ಬಾಣದಿಂದ ಪ್ರಹಾರ ಮಾಡಿ ಜಿಜ್ಞಾಸೆ ಎಂಬ ಕಿರೀಟವನ್ನು ಧರಿಸಿದ, ಆತ್ಮಾಸೆ ಮತ್ತು ಹೊಟ್ಟೆಕಿಚ್ಚು ಎಂಬ ಕರ್ಣ ಕುಂಡಲಗಳನ್ನು ಧರಿಸಿದ, ಸೋಮಾರಿತನ, ನಿದ್ರೆ ಮತ್ತು ಅಶುಚಿ ಎಂಬ ಸಿಬ್ಬಂದಿಯನ್ನು ಹೊಂದಿರುವ, ಆತ್ಮಾಭಿಮಾನವೆಂಬ ಮಧ್ಯರೇಖೆಯುಳ್ಳ ಕೋಪ ಎಂಬ ಹುರಿಯಿಂದ ಬಿಗಿಸಿರುವ, ದುರಾಸೆ ಎಂಬ ಕಟ್ಟಿಗೆಯುಳ್ಳ, ಅಭಿಮಾನ ಎಂಬ ಗುಣಗಳಿಂದ ಕೂಡಿದ ಬಾಣಗಳಿಂದ ಇಲ್ಲಿರುವ ಜೀವರಾಶಿಗಳನ್ನು ಇರಿಯುವ ರೀತಿಯಲ್ಲಿ ಬ್ರಹ್ಮದ್ವಾರದ ಪ್ರಥಮ ಪೋಷಕನನ್ನು ಇಂದು ಓಂಕಾರವೆಂಬ ಹರಿಗೋಲಿನಿಂದ ಹೃದಯಾಕಾಶದ ಒಂದು ಕಡೆ ಇಂದ ದಾಟಿ ಅಂತರ್ಹೃದಯದಲ್ಲಿ ಪ್ರಜ್ವಲಿಸುತ್ತಿರುವ ತೇಜಸ್ಸಿಗೆ ಪ್ರವೇಶಿಸಿ ಗಣಿಯ ಕೆಲಸಗಾರನು ಅದುರನ್ನು ಹುಡುಕಿಕೊಂಡು ಗಣಿಯೊಳಗೆ ಪ್ರವೇಶಿಸುವಂತೆ ಬ್ರಹ್ಮನ ಅರ್ಧ ಭಾಗಕ್ಕೆ ಪ್ರವೇಶಿಸತಕ್ಕದ್ದು. ತರುವಾಯ ಬ್ರಹ್ಮಜಾಲದ ನಾಲ್ಕು ಕೋಶಗಳನ್ನು ಹೊರ ತೆಗೆದು ಆತ್ಮಜ್ಞಾನವನ್ನು ವಿಕಸಿತ ಮಾಡುವ ಗುರುವನ್ನು ಪಡೆದು ಅವನ ಉಪದೇಶದಂತೆ ನಡೆದು ಶುದ್ಧನೂ, ಪೂತನೂ, ಶೂನ್ಯನೂ, ಶಾಂತನೂ, ಅಪ್ರಾಣನೂ, ನಿರಾತ್ಮನೂ, ಅನಂತನೂ, ಅಕ್ಷಯನೂ, ಸ್ಥಿರನೂ, ಶಾಶ್ವತನೂ, ಅಜನೂ, ಸ್ವತಂತ್ರನೂ, ಆಗಿ ಅವನ ಮಹದ್ಗುಣಗಳಿಂದಲೇ ಸ್ಥಿರಪಡುತ್ತಾನೆ. ಆ ತರುವಾಯ ಅವನ ಮಹದ್ಗುಣಗಳಿಂದಲೇ ಸುತ್ತುವರೆದಿರುವ ಆತ್ಮನನ್ನು ಕಂಡುಕೊಂಡು ಕೆಳಗೆ ತಿರುಗುತ್ತಿರುವ ಸಂಸಾರ ಚಕ್ರಗಳನ್ನು ಹೊಂದಿ ಮುಂದುವರೆಯುತ್ತಿರುವ ರಥದ ಕಡೆಗೆ ನೋಡುತ್ತಾನೆ. ಆದ್ದರಿಂದ ಹೀಗೆ ಹೇಳಲಾಗಿದೆ. ಒಬ್ಬ ಮನುಷ್ಯನು ಆರು ತಿಂಗಳ ಕಾಲ ಯೋಗಾಭ್ಯಾಸ ಮಾಡಿ ಈ ಪ್ರಪಂಚದ ಬಂಧನಗಳಿಂದ ಬಿಡುಗಡೆ ಹೊಂದಿದ

ತರುವಾಯ ಅನಂತನೂ, ಪರಮ ಗುಹ್ಯನೂ, ಸಂಯುಗ್ಯೋಗ ಪುರುಷನೂ, ಆಗ ಬೇಕು. ಆದರೆ ಮನುಷ್ಯನು ಎಷ್ಟೇ ತಿಳುವಳಿಕೆಯುಳ್ಳವನಾದಾಗ್ಯೂ ರಜಸ್ಸು ಮತ್ತು ತಮೋ ಗುಣಗಳ ಪ್ರವರ್ತಕನಾದರೆ ಮತ್ತು ತನ್ನ ಹೆಂಡಿರು ಮಕ್ಕಳ ವ್ಯಾಮೋಹದಿಂದ ಬಂಧಿತನಾದರೆ ಅಂತಹವನಿಗೆ ಯಾವ ಮುಕ್ತಿಯೂ ದೊರೆಯು ಲಾರದು.

ಏವಮುಕ್ತ್ವಾಽನ್ತರ್ಹೃದಯಃ ಶಾಕಾಯನ್ಯಸ್ತಸ್ಮೈನಮಸ್ಕೃತ್ವಾಽನಯಾಬ್ರಹ್ಮ ವಿದ್ಯಯಾರಾಜನ್ ಬ್ರಹ್ಮಣಃ ಪಂಥಾನಮಾರೂಢಃ ಪುತ್ರಾಃ ಪ್ರಜಾಪತೇರಿತಿ | ಸಂತೋಷಂದ್ವಂದ್ವಂ ತಿತಿಕ್ಷಾಂಶಾನ್ತತ್ವಂ ಯೋಗಾಭ್ಯಾಸಾದವಾಪ್ನೋತೀತಿ | ಏತದ್ಗುಹ್ಯತಮಂ ನಾಪುತ್ರಾಯನಾಶಿಷ್ಯಾಯ, ನಾಶಾನ್ತಾಯಕೀರ್ತಯೇದಿತಿ| ಅನನ್ಯಭಕ್ತಾಯ ಸರ್ವಗುಣಸಂಪನ್ನಾಯದದ್ಯಾತ್ ||೨೯||

ಬೃಹದ್ರಥನೊಂದಿಗೆ ಹೀಗೆ ಮಾತನಾಡಿ ಶಾಕಾಯನ್ಯನು ತನ್ನ ಹೃದಯವನ್ನು ಅಂತ ರಾತ್ಮನಲ್ಲಿ ನೆಲೆಗೊಳಿಸಿ ಅವನ ಮುಂದೆ ತಲೆ ಬಾಗಿಸಿ ಹೇಳುತ್ತಾನೆ. "ಈ ಬ್ರಹ್ಮ ಜ್ಞಾನದಿಂದ ಪ್ರಜಾಪತಿಯ ಮಗನು ಬ್ರಹ್ಮ ಮಾರ್ಗವನ್ನು ಏರಿದನೆ ? ಯೋಗಾ ಭ್ಯಾಸದಿಂದ ಮಾನವರು ತೃಪ್ತಿಯನ್ನು ಹೊಂದುತ್ತಾರೆ ; ಸುಖ ದುಃಖಗಳ ದ್ವಂದ್ವ ಗುಣಗಳನ್ನು ಸಹಿಸಿಕೊಳ್ಳುತ್ತಾರೆ ; ಮತ್ತು ಶಾಂತತೆಯನ್ನು ಹೊಂದುತ್ತಾರೆ. ಈ ಅತ್ಯಂತ ರಹಸ್ಯವಾದ ತತ್ವವನ್ನು ಮಗನಲ್ಲದವನಿಗೂ, ಶಿಷ್ಯನಲ್ಲದವನಿಗೂ, ಸ್ಥಿರ ಬುದ್ಧಿ ಇಲ್ಲದವನಿಗೂ, ಉಪದೇಶಿಸತಕ್ಕದ್ದಲ್ಲ. ಯಾರು ತನ್ನ ಗುರುವಿನಲ್ಲಿ ಮಾತ್ರ ಪರಮ ಭಕ್ತಿಯನ್ನಿಟ್ಟುಕೊಂಡಿರುವನೋ ಯಾವನು ಸರ್ವ ಗುಣ ಸಂಪನ್ನನೋ ಅವನಿಗೆ ಮಾತ್ರ ಉಪದೇಶಿಸತಕ್ಕದ್ದು.

ಓಂ ಶುಚೌದೇಶೇಶುಚಿಃ ಸತ್ತ್ವಸ್ಥಃ ಸದಧೀಯಾನಃ ಸದ್ವಾದೀಸದ್ಧ್ಯಾಯೀ ಸದ್ಯಾಜೀಸ್ಯಾದಿತಿ | ಅತಃ ಸದ್ಬ್ರಹ್ಮಣಿಸತ್ಯಾಭಿಲಾಷಿಣೀನಿವೃತ್ತೋಽನ್ಯಸ್ತ ತ್ಫಲಚ್ಛಿನ್ನಪಾಶೋನಿರಾಶಃ ಪರೇಷ್ವಾತ್ಮವದ್ವಿಗತಭಯೋನಿಷ್ಕಾಮೋಽಕ್ಷಯ್ಯ ಮಪರಿಮಿತಂ ಸುಖಮಾಕ್ರಮ್ಯತಿಷ್ಠತಿ | ಪರಮಂವೈಶೇವಧೇರಿವ ಪರಸ್ಯೋದ್ಧ ರಣಂ ಯನ್ನಿಷ್ಕಾಮತ್ವಂ | ಸಹಿ ಸರ್ವಕಾಮಮಯಃ ಪುರುಷೋಽಧ್ಯವಸಾಯ ಸಂಕಲ್ಪಾಭಿಮಾನಲಿಂಗೋಬದ್ಧಃ ಅತಸ್ತದ್ವಿಪರಿತೋಮುಕ್ತಃ | ಅತ್ರೈಕಾ ಆಹುಃ | ಗುಣಃ ಪ್ರಕೃತಿಭೇದವಶಾ ದಧ್ಯವಸಾಯಾತ್ಮಬಂಧಮುಪಾಗತಃ |

ಅಧ್ಯವಸಾಯಸ್ಯದೋಷಕ್ಷಯಾದ್ವಿಮೋಕ್ಷಃ | ಮನಸಾಹ್ಯೇವಪಶ್ಯತಿ ಮನಸಾ ಶೃಣೋತಿ | ಕಾಮಃ ಸಂಕಲ್ಪೋವಿಚಿಕಿತ್ಸಾಶ್ರದ್ಧಾಽಶ್ರದ್ಧಾ ಧೃತಿ ರಧೃತಿ ರ್ಹ್ರೀರ್ಧೀರ್ಭೀರಿತ್ಯೇತತ್ಸರ್ವಂಮನಏವ| ಗುಣಾದ್ಯೈರುಹ್ಯಮಾನಃ ಕಲುಷೀ ಕೃತಶ್ಚಾಸ್ಥಿರಶ್ಚಂಚಲಲೋಲುಪ್ಯಮಾನಃ ಸಸ್ಪೃಹೋವ್ಯಗ್ರಶ್ಚಾಭಿಮಾನಿತ್ವಂ ಪ್ರಯಾತಾಇತಿ | ಅಹಂ ಸೋಮಮೇದ ಮಿತ್ಯೇವಂ ಮನ್ಯಮಾನೋನಿಬಂಧಾ ತ್ಯಾತ್ಮನಾಽಽತ್ಮಾನಂಜಾಲೇನೇವಖಚರಃ | ಅತಃ ಪುರುಷೋಽಧ್ಯವಸಾಯ ಸಂಕಲ್ಪಾಭಿಮಾನ ಲಿಂಗೋಬದ್ಧಃ | ಅತಃ ಸ್ತದ್ವಿಪರೀತೋಮುಕ್ತಃ | ತಸ್ಮಾ ನ್ನಿರಧ್ಯವಸಾಯೋ ನಿಃಸಂಕಲ್ಪೋನಿರಭಿಮಾನಸ್ತಿಷ್ಠೇತ್ | ಏತನ್ಮೋಕ್ಷಲ ಕ್ಷಣಂ | ಏಷಾಽತ್ರಬ್ರಹ್ಮಪದವೀ | ಏಷೋಽತ್ರದ್ವಾರವಿವರಃ | ಅನ್ನೇನಾಸ್ಯ ತಮಸಃ ಪಾರಂಗಮಿಷ್ಯತಿ | ಅತ್ರಹಿಸರ್ವೇಕಾಮಾಃ ಸಮಾಹಿತಾಇತಿ | ಅತ್ರೋದಾಹರನ್ತಿ | ಯದಾಪಂಚಾವತಿಷ್ಠನ್ತೇಜ್ಞಾನಾನಿಮನಸಾಸಹ | ಬುದ್ಧಿ ಶ್ಚನವಿಚೇಷ್ಟತೇತಾಮಾಹುಃ ಪರಮಾಂಗತಿಂ | ಏತದ್ವುಕ್ತ್ವಾಽನ್ತರ್ಹೃದಯಃ ಶಾಕಾಯನ್ಯಸ್ತಸ್ಮೈ ನಮಸ್ಕೃತ್ವಾಯಥಾವದುಪಚಾರೀಕೃತಕೃತ್ಯೋಮರುದು ತ್ತರಾಯಣಂಗತಃ | ನಹ್ಯತ್ರೋದ್ವರ್ತನಾಗತಿಃ | ಏಷೋಽತ್ರಬ್ರಹ್ಮಪಥಃ ಸೌರಂದ್ವಾರಂಭಿತ್ವೋರ್ಧ್ವೇನವಿನಿರ್ಗತಾಇತಿ | ಅತ್ರೋಘೋಹರನ್ತಿ—ಅನಂತಾ ರಶ್ಮಯಸ್ತಸ್ಯದೀಪವದ್ಯಃ ಸ್ಥಿತೋಹೃದಿ | ಸಿತಾಸಿತಾಃ ಕದ್ರುನೀಲಾಃ ಕಪಿಲಾ ಮೃದುಲೋಹಿತಾಃ || ಊರ್ಧ್ವಮೇಕಃ ಸ್ಥಿತಸ್ತೇಷಾಂಯೋಭಿತ್ವಾಸೂರ್ಯ ಮಂಡಲಂ | ಬ್ರಹ್ಮಲೋಕಮತಿಕ್ರಮ್ಯತೇನಯಾಂತಿ ಪರಾಂಗತಿಂ || ಯದಸ್ಯಾ ನ್ಯದ್ರಶ್ಮಿಶತಮೂರ್ಧ್ವಮೇವ ವ್ಯವಸ್ಥಿತಂ | ತೇನದೇವನಿಕಾಯಾನಾಂ ಸ್ವಧಾ ಮಾನಿಪ್ರಪದ್ಯತೇ || ಯೇನೈಕರೂಪಾಶ್ಚಾದಸ್ತಾದ್ರಶ್ಮಯೋಽಸ್ಯಮೃದುಪ್ರ ಭಾಃ | ಇಹಕರ್ಮೋಪಭೋಗಾಯತೈಃ ಸಂಸರತಿಸೋಽವಶಃ | ತಸ್ಮಾತ್ಸರ್ಗ ಸ್ವರ್ಗಾಪವರ್ಗಹೇತುರ್ಭಗವಾನಸಾವಾದಿತ್ಯಇತಿ ||೩೦||

ಓಂ ಮಾನವರು ಶುಚಿಯಾದ ಸ್ಥಳದಲ್ಲಿ ವಾಸಿಸುತ್ತ ಅವರೂ ಶುಚಿಯಾಗಿರಬೇಕು, ಸತ್ವಸ್ಥರಾಗಿರಬೇಕು, ಸರಿಯಾಗಿರುವುದನ್ನು ಅಧ್ಯಯನ ಮಾಡಬೇಕು. ಸತ್ಯ ವಾಕ್ಕನ್ನು ನುಡಿಯುವರಾಗಿರಬೇಕು. ಸದ್ಯೋಗ ನಿರತರಾಗಬೇಕು. ಸದ್ಯಾಗ ನಿರತರಾಗಿರಬೇಕು. ಸದ್ಬ್ರಹ್ಮನಲ್ಲಿ ನಿರತರಾಗಿರಬೇಕು. ಸತ್ಯಾಭಿಲಾಷಿಗಳಾಗಿರ ಬೇಕು. ಇಂತಹವರಿಗೆ ಅವನನ್ನು ಆವರಿಸಿಕೊಂಡಿರುವ ಸರ್ವ ಬಂಧನಗಳೂ ಕಳಚಿ,

ಅಭಿಮಾನರಹಿತನಾಗಿ, ಪರಸ್ಪರ ಭಯದಿಂದ ನಿವೃತ್ತನಾಗಿ, ಅವನಲ್ಲೇ ಅವನಿಗೆ ನಂಬಿಕೆಯುಂಟಾಗಿ, ಆಕಾಂಕ್ಷೆಗಳನ್ನು ತೊರೆದು, ಅಕ್ಷಯವಾದ ಮತ್ತು ಅಪರಿಮಿತ ವಾದ ಸುಖವನ್ನು ಪಡೆಯುವವನಾಗುತ್ತಾನೆ. ಸರ್ವ ವಿಧವಾದ ಕರ್ಮಗಳಿಂದ ಬಂಧಿತನಾದ, ಅಧ್ಯವಸಾಯ ಸಂಕಲ್ಪವನ್ನು ಹೊಂದಿದ್ದರೂ ಕೂಡ ನಿಷ್ಕಾಮತ್ವವು ಲಭಿಸುವುದು. ಅವನಿಗೆ ಅನುಗ್ರಹೀತವಾದ ವರಗಳಲ್ಲಿ ಅತ್ಯಂತ ಶ್ರೇಷ್ಠವಾದ ನಿಧಿ ಗಳ ಪೈಕಿ ಒಂದೆಂದು ಭಾವಿಸಲಾಗಿದೆ. ಇದಕ್ಕೆ ವಿರೋಧವಾದ ಬಿಡುಗಡೆಯನ್ನು ಹೊಂದಿದವರ ವಿಚಾರದಲ್ಲಿ ಸಾಂಖ್ಯರು ಹೇಳುತ್ತಾರೆ. "ಪ್ರಕೃತಿಯ ಭಿನ್ನವಾದ ನಡತೆಗಳ ಒತ್ತಡದಿಂದ ಉಂಟಾಗುವ ಗುಣವು ಆತ್ಮನನ್ನು ಒಂದು ನಿರ್ಧಾರಕ್ಕೆ ಮತ್ತು ತಪ್ಪಾದ ನಿಶ್ಚಯವನ್ನು ವಿನಾಶಪಡಿಸಲಿಕ್ಕೆ, ಆ ಮೂಲಕ ಬಿಡುಗಡೆಯನ್ನು ಹೊಂದಲಿಕ್ಕೆ ಕಾರಣ ಭೂತವಾಗಿದೆ. ಮನಸ್ಸಿನ ಪ್ರೇರಣೆ ಇಂದಲೇ ಮಾನವನು ನೋಡುತ್ತಾನೆ. ಮನಸ್ಸಿನಿಂದಲೇ ಕೇಳುತ್ತಾನೆ. ಕಾಮ, ಸಂಕಲ್ಪ, ಅನುಮಾನ, ನಂಬಿಕೆ, ಅಪನಂಬಿಕೆ, ಅಧೃತಿ, ನಾಚಿಕೆ, ತಪಸ್ಸು, ಭಯ ಇವೆಲ್ಲವೂ ಮನಸ್ಸಿ ನಿಂದಲೇ ಗುಣವೆಂಬ ಪ್ರವಾಹದಲ್ಲಿ ಹರಿಯಲ್ಪಟ್ಟು, ಇಕ್ಕಟ್ಟಾದ, ಗುರಿ ತಪ್ಪಿದ, ಕ್ಷಣಿಕವಾದ, ಲೋಲುಪ್ಯವಾದ, ಕಾಮಪೂರಿತವಾದ, ಉದ್ದಿಶ್ಯರಹಿತವಾದ, ಸ್ಥಿತಿಗೆ ಆತ್ಮಾಭಿಮಾನವು ಕೊಂಡೊಯುತ್ತದೆ. ನಾನೇ ಅವನು, ಇದು ನನ್ನದು, ಎಂದು ಚಿಂತಿಸುವವನು ಪಂಜರದಲ್ಲಿರುವ ಪಕ್ಷಿಯಂತೆ ತನ್ನಿಂದಲೇ ತಾನು ಬಂಧಿಸಲ್ಪಡು ತ್ತಾನೆ. ಆದ್ದರಿಂದ ಯಾರು ಅಧ್ಯವಸಾಯ ಸಂಕಲ್ಪಾಭಿಮಾನಿಗಳಾಗಿರುವರೋ ಅವರು ಬದ್ಧರಾಗಿರುತ್ತಾರೆ. ಇದಕ್ಕೆ ವಿರುದ್ಧವಾಗಿ ಯಾರು ಇರುತ್ತಾರೋ ಅವರು ಮುಕ್ತರಾಗುತ್ತಾರೆ. ಆದ್ದರಿಂದ ಅಭಿಮಾನದಿಂದಲೂ, ಸಂಕಲ್ಪದಿಂದಲೂ, ಆತ್ಮಾಭಿಮಾನದಿಂದಲೂ, ಸ್ವತಂತ್ರರಾಗಿರಬೇಕು. ಇದೇ ಬಿಡುಗಡೆಯ ಗುರ್ತು. ಇದೇ ಈ ಲೋಕದಲ್ಲಿ ಬ್ರಹ್ಮನನ್ನು ಅರಿಯುವ ಮಾರ್ಗ. ಇದೇ ಈ ಲೋಕದಲ್ಲಿ ಬಾಗಿಲನ್ನು ತೆರೆಯುವ ರೀತಿ. ಇದೇ ಬೇರೇ ಕಡೆಯಲ್ಲಿನ ಅಂಧಕಾರವನ್ನು ದಾಟಿ ಹೋಗುವ ಮಾರ್ಗವಾದರೂ ಅಲ್ಲಿ ಸರ್ವ ಕಾಮನೆಗಳೂ ಸಮಾಹಿತವಾಗಿವೆ. ಈ ವಿಚಾರದಲ್ಲಿ ಹೀಗೆ ಹೇಳುತ್ತಾರೆ. "ಯಾರಲ್ಲಿ ಐದು ಬಗೆಯಾದ ಜ್ಞಾನಗಳು ಮನಸ್ಸಿನ ಸಹಿತ ಅಲುಗಾಡದೇ ಇದ್ದು, ಬುದ್ಧಿಯೂ ಕೂಡ ಚಲಿಸದೇ ಇರು ತ್ತದೆಯೋ ಅದನ್ನೇ ಪರಮ ಪದವೆನ್ನುತ್ತಾರೆ". ಹೀಗೆ ಹೇಳಿದ ತರುವಾಯ ಸಾಕ್ಯಾಯನನು ತನ್ನ ಹೃದಯವನ್ನು ಅಂತರಾತ್ಮನಲ್ಲಿ ನಿಲ್ಲಿಸಿದನು. ತರುವಾಯ ಮರುತ್ತನು ಅವನಿಗೆ ನಮಸ್ಕರಿಸಿ, ಸರಿಯಾದ ರೀತಿಯಲ್ಲಿ ಮರ್ಯಾದೆಯನ್ನು ಮಾಡಿ, ಅವನ ಅಂತ್ಯ ಕಾಲವು ಸಮೀಪಿಸಲು, ಉತ್ತರಾಯಣ ಪುಣ್ಯ ಕಾಲದಲ್ಲಿ ಅಂತರ್ಗತನಾದನು. ಏಕೆಂದರೆ ಬೇರೆ ಯಾವ ಕ್ಷುಲ್ಲಕ ಮಾರ್ಗಗಳೂ ಅಲ್ಲಿರಲಿಲ್ಲ. ಈ ಲೋಕದಲ್ಲಿ ಬ್ರಹ್ಮನನ್ನು ಸೇರಲು ಇದೇ ಮಾರ್ಗ. ಸೂರ್ಯನ ಬಾಗಿಲನ್ನು

ನೂಕಿ ತೆಗೆದು ಎತ್ತರಕ್ಕೆ ಹತ್ತಿ ಮುಂದುವರೆದನು. ಈ ವಿಷಯದ ಮೇಲೆ ಅವರು ಹೇಳುತ್ತಾರೆ. ಅವನು ಅನಂತವಾದ ರಶ್ಮಿಗಳನ್ನು ಹೊಂದಿದ್ದು ಒಂದು ದೀಪದ ಹಾಗೆ ಹೃದಯದಲ್ಲಿ ಬಿಳುಪು, ಕಪ್ಪು, ಕಾವಿ, ನೀಲಿ, ಕಪಿಲ, ತೆಳು ಕೆಂಪು ಬಣ್ಣ ಗಳಿಂದ ವಾಸಿಸುತ್ತಿದ್ದಾನೆ. ಅವುಗಳಲ್ಲಿ ಒಂದು ಮೇಲ್ಗಡೆಗೆ ಸೂರ್ಯ ಮಂಡಲ ವನ್ನು ಬೇಧಿಸಿಕೊಂಡು ಹೋಗುತ್ತದೆ. ಮತ್ತು ಬ್ರಹ್ಮ ಲೋಕವನ್ನು ದಾಟಿ ಪರಾಂಗತಿಯನ್ನು ಮುಟ್ಟುತ್ತದೆ. ಮಿಕ್ಕ ನೂರು ರಶ್ಮಿಗಳೂ ಊರ್ದ್ವದ ಕಡೆಗೆ ಹೊರಟು ಅವುಗಳ ಮೂಲಕ ದೇವತೆಗಳು ದೇವಲೋಕಕ್ಕೆ ಸೇರುತ್ತಾರೆ. ಆದರೆ ತೆಳು ಬಣ್ಣದ ರಶ್ಮಿಗಳು ಅನೇಕವಾಗಿ ಕೆಳಗಿನ ಮಾರ್ಗವನ್ನು ಹಿಡಿದು ಅವುಗಳ ಮೂಲಕ ಜೀವರಾಶಿಗಳು ತಮ್ಮ ಕರ್ಮ ಫಲವನ್ನು, ಅನುಭವಿಸಲು ಗತ್ಯಂತರ ವಿಲ್ಲದೆ ತೆರಳುತ್ತವೆ. ಆದ್ದರಿಂದ ಸೂರ್ಯ ಭಗವಾನನು ಪ್ರಜಾ ಸೃಷ್ಟಿಗೂ, ಸ್ವರ್ಗ ಮತ್ತು ಮೋಕ್ಷಗಳಿಗೂ ಕಾರಣ ಕರ್ತೃವಾಗಿದ್ದಾನೆ.

ಕಿಮಾತ್ಮಕಾನಿವಾಏತಾನೀಂದ್ರಿಯಾಣಿಪ್ರಚರನ್ತಿ । ಉದ್ಗನ್ತಾಚೈತೇಷಾಮಿಹ ಕೋನಿಯನ್ತಾವೇತ್ಯಾಹ । ಪ್ರತ್ಯಾಹಾಽಽತ್ಮಾತ್ಮಕಾನೀತಿ । ಆತ್ಮಾಹ್ಯೇಷಾ ಮುದ್ಗನ್ತಾನಿಯನ್ತಾವಾ । ಅಪ್ಸರಸೋಭಾನವೀಯಾಶ್ಚ ಮರೀಚಯೋ ನಾಮ। ಅಥಪಂಚಭೀರಶ್ಮಿಭಿರ್ವಿಷಯಾನತ್ತಿ । ಕತಮಆತ್ಮೇತಿ । ಯೋಽಯಂ ಶುದ್ಧಃ ಪೂತಃ ಶೂನ್ಯಃ ಶಾನ್ತಾದಿಲಕ್ಷಣೋಕ್ತಃ । ಸ್ವಕೈರ್ಲಿಂಗೈರುಪಗುಹ್ಯಃ। ತಸ್ಯೈತಲ್ಲಿಂಗ ಮಲಿಂಗಸ್ಯಾಗ್ನೇರ್ಯದೌಷ್ಣ್ಯಮಾವಿಷ್ಟಂ ಚಾಪಸಯಃ ಶಿವತ ಮೋರಸಇತ್ಯೇಕೇ। ಅಥವಾಕ್ ಶ್ರೋತ್ರಂ ಚಕ್ಷುರ್ಮನಃ ಪ್ರಾಣಇತ್ಯೇಕೇ ಅಥ ಬುದ್ಧಿಧೃತಿಃ ಸ್ಮೃತಿಃ ಪ್ರಜ್ಞಾನಮಿತ್ಯೇಕೇ । ಅಥತಾಏತಸ್ಯೈವಂ ಯಥೈವೇಹ ಬೀಜಸ್ಯಾಂಕುರಾ ಅಥಧೂಮಾರ್ಚಿರ್ವಿಸ್ಫುಲಿಂಗಾ ಇವಾಗ್ನೇಶ್ಚೇತಿ । ಅತ್ರೋ ದಾಹನ್ತಿ—ವಹ್ನೇಶ್ಚಯದ್ವತ್ಖಲುವಿಸ್ಫುಲಿಂಗಾಃ ಸೂರ್ಯಾನ್ಮಯೂ—ಖಾಶ್ಚ ತಥೈವತಸ್ಯ । ಪ್ರಾಣಾದಯೋಽಸ್ಯೈ ಪುನರೇವತಸ್ಮಾದಭ್ಯುಚ್ಚರನ್ತೀಹಯಥಾ ಕ್ರಮೇಣ ॥೩೧॥

ಕೆಲವರು ಕೇಳುತ್ತಾರೆ " ಈ ಇಂದ್ರಿಯಗಳು ಇಲ್ಲಿಂದ ಹೊರಟು ತಮ್ಮ ಗುರಿಯನ್ನು ಮುಟ್ಟುವ ಕ್ರಮ ಯಾವುದು ? ಇಲ್ಲಿಂದ ಅವುಗಳನ್ನು ಹೊರಡಿಸುವ ಮತ್ತು ಅಲ್ಲಿ ನಿಲ್ಲಿಸಿಕೊಳ್ಳುವವರು ಯಾರು ?" ಅವು ಆತ್ಮನ ಗುಣಗಳೇ ಆಗಿವೆ ಎಂದು ಉತ್ತರಿಸ ತ್ತಾರೆ. ಹೇಗೆಂದರೆ ಆತ್ಮನೇ ಅವುಗಳನ್ನು ಕಳುಹಿಸುತ್ತಾನೆ ಮತ್ತು

ನಿಲ್ಲಿಸುತ್ತಾನೆ. ಅಲ್ಲಿ ಈ ಇಂದ್ರಿಯಗಳನ್ನು ಬಲಾತ್ಕರಿಸುವ ಸಾಧನಗಳಿವೆ. ಇವ್ವ ಗಳಿಗೆ ಪ್ರಕಾಶ ಬೀರುವ ಕಿರಣಗಳೆನ್ನುತ್ತಾರೆ. ಈಗ ಐದು ಕಿರಣಗಳು ಆತ್ಮನ ಮೇಲೆ ಆಕ್ರಮಣ ಮಾಡುತ್ತವೆ. ಆ ಆತ್ಮನಾರು ? ಯಾರು ಶುದ್ಧರೂ, ಪೂತರೂ, ಶೂನ್ಯರೂ, ಶಾಂತರೂ, ಆದ ಗು ಣ ಗ ಳು ಳ್ಳ ವ ರೋ ಅವರು ಎಂದು ವಿವರಿಸಲಾಗಿದೆ. ಅವನು ಅವನ ಗುಣಗಳಿಂದಲೇ ಮುಚ್ಚಿಕೊಳ್ಳ ಬೇಕಾಗುತ್ತದೆ. ಕೆಲವರು ಅವನ ಗುರ್ತು ಮತ್ತು ಶಾಖವು ಹೇಗೆ ಗುರ್ತಿಸಲ್ಪಡು ವುದಿಲ್ಲವೋ ಅಂತಹ ಗುರ್ತು ಎಂದೂ, ಬೆಂಕಿಯಸುತ್ತೂ ಹರಡಿಕೊಂಡಿರುವ ಶಾಖ ದಂತಿರುವುದೆಂದೂ, ಅಥವಾ ನೀರಿನಲ್ಲಿರುವ ಹಿತಕರವಾದ ಋಚಿಯಂತಿರುವು ದೆಂದೂ, ತಿಳಿಸುತ್ತಾರೆ. ಕೆಲವರು ಅದು ವಾಕ್ಕು, ಶ್ರೋತ್ರ, ನೋಟ, ಮನಸ್ಸು, ಪ್ರಾಣ ಇವುಗಳೆಂದೂ ಹೇಳುತ್ತಾರೆ, ಕೆಲವರು ಅದು ಬುದ್ಧಿ, ಧೃತಿ, ಸ್ಮೃತಿ, ಪ್ರಜ್ಞಾನಗಳೆಂದೂ ಹೇಳುತ್ತಾರೆ, ಈಗ ಅವುಗಳು ಹೇಗೆ ಮೊಳಕೆಗಳು ಬೀಜದ ಗುರ್ತೋ ; ಹೊಗೆ, ಜ್ವಾಲೆ, ಕಿಡಿಗಳು ಹೇಗೆ ಬೆಂಕಿಯ ಗುರ್ತೋ, ಹಾಗೆ ಅವನ ಗುರ್ತುಗಳಾಗಿವೆ. ಈ ವಿಷಯದ ಮೇಲೆ ಕೆಲವರು ಹೇಳುತ್ತಾರೆ ಅಗ್ನಿಯಿಂದ ಹೇಗೆ ಕಿಡಿಗಳೂ, ಸೂರ್ಯನಿಂದ ಹೇಗೆ ಕಿರಣಗಳೂ ಹೊರಬರುತ್ತದೆಯೋ ಹಾಗೆ ಜೀವರಾಶಿಗಳೂ ಮತ್ತು ಬೇರೆಯವೂ ಕ್ರಮವಾಗಿ ಪುನಃ ಪುನಃ ಈ ಭೂಮಿಯಲ್ಲಿ ಅವನಿಂದಲೇ ಹೊರಟುನಿಲ್ಲುತ್ತವೆ.

ತಸ್ಮಾದ್ವಾವೆತಸ್ಮಾದಾತ್ಮನಃ ಸರ್ವೇಪ್ರಾಣಾಃ ಸರ್ವೇಲೋಕಾಃ ಸರ್ವೇವೇದಾಃ ಸರ್ವೇದೇವಾಃ ಸರ್ವಾಣಿಚಭೂತಾನಿಉಚ್ಚರನ್ತಿ । ತಸ್ಯೋಪನಿಷತು–ಸತ್ಯಸ್ಯ ಸತ್ಯಮಿತಿ । ಅಥಯಥಾಽಽದ್ರೈಧಾಗ್ನೇರಭ್ಯಾಹಿತಸ್ಯ ಪೃಥಗ್ಧೂಮಾನಿಶ್ಚರಂ ತ್ಯೇವಂ ವಾ ಏತಸ್ಯ ಮಹತೋಭೂತಸ್ಯನಿಶ್ವಸಿತಮೇತದ್ಯದೃಗ್ವೇದೋಯಜು ರ್ವೇದಃ ಸಾಮವೇದೋಽಥರ್ವಾಂಗಿರಸ ಇತಿಹಾಸಃ ಪುರಾಣಂ, ವಿದ್ಯಾ, ಉಪ ನಿಷದಃಶ್ಲೋಕಾಃ ಸೂತ್ರಾಣ್ಯನುವ್ಯಾಖ್ಯಾನಾನಿ ವ್ಯಾಖ್ಯಾನಾನ್ಯಸ್ಯೈವೈತಾನಿ ವಿಶ್ವಾಭೂತಾನಿ ||೩೨||

ಅವನಿಂದ ಆತ್ಮವೇ ಆದ ಎಲ್ಲ ಜೀವರಾಶಿಗಳೂ, ಸರ್ವಲೋಕಗಳೂ, ಸರ್ವ ವೇದ ಗಳೂ, ಸರ್ವ ದೇವರುಗಳೂ, ಸರ್ವಭೂತಗಳೂ, ಉದಯಿಸಿದವು. ಇದರ ಉಪ ನಿಷದರ್ಥ ಸತ್ಯಸ್ಯಸತ್ಯವೆಂದಾಗಿದೆ. ಹೇಗೆ ಹಸಿಯ ಕಟ್ಟಿಗೆಯನ್ನು ಉಪಯೋಗಿಸಿದ ಅಗ್ನಿಯಲ್ಲಿ ಮೊದಲು ಹೇಗೆ ಹೊಗೆಯು ಉತ್ಪನ್ನವಾಗುತ್ತದೆಯೋ ಹಾಗೆಯೆ ಈ ಮಹದ್ಭೂತದಿಂದ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಾಂಗಿರಸ, ಇತಿ

ಹಾಸ, ಪುರಾಣ, ವಿದ್ಯೆ, ಉಪನಿಷತ್ತು, ಶ್ಲೋಕ, ಸೂತ್ರಗಳ ವ್ಯಾಖ್ಯಾನ, ಇತರ ಅನೇಕ ವ್ಯಾಖ್ಯಾನಗಳೂ, ಈ ಸಮಸ್ತ ವಿಶ್ವವೂ ಅವನಿಂದಲೇ ಹೊರಬಂದುವು.

ಪಂಚೇಷ್ಟಕೋವಾ ಏಷೋಽಗ್ನಿರ್ಯತ್ಸಂವತ್ಸರಃ । ತಸ್ಯೇಮಾ ಇಷ್ಟಕಾಯೋ ವಸನ್ತೋ ಗ್ರೀಷ್ಮೋ ವರ್ಷಾಃ ಶರದ್ಧೇಮಂತಾಃ । ಸಶಿರಃ ಪಕ್ಷಸೀಪೃಷ್ಠ, ಪುಚ್ಛವಾನೇಷೋಽಗ್ನಿಃ ಪುರುಷವಿದಃ । ಸೇಯಂ ಪೃಥಿವೀಪ್ರಜಾಪತೇಃ ಪ್ರಥಮಾಚಿತಿಃ । ಕರ್ರ್ಯೈರ್ಯಜಮಾನ ಮನ್ತರಿಕ್ಷಮುತ್ಕ್ಷಿಪ್ಯಾವಾಯುವೇಪ್ರಾಯಚ್ಛತ್ । ಪ್ರಾಣೋವೈವಾಯುಃ । ಪ್ರಾಣೋಽಗ್ನಿಃ । ತಸ್ಯೇವಾಇಷ್ಟಕಾಯಃ ಯಃಪ್ರಾಣೋಽಪಾನೋವ್ಯಾನಃ ಸಮಾನ ಉದಾನಃ । ಸಶಿರಃ ಪಕ್ಷಸೀಪೃಷ್ಠ ಪುಚ್ಛವಾನೇಷೋಽಗ್ನಿಃ ಪುರುಷವಿಧಃ । ತದಿದಮನ್ತರಿಕ್ಷಂ ಪ್ರಜಾಪತೇಃ ದ್ವಿತೀಯಾಚಿತಿಃ । ಕರ್ರ್ಯೈರ್ಯಜಮಾನಂ ದಿವಮುತ್ಕ್ಷಿಪ್ತ್ವೇಂ ದ್ರಾಯ ಪ್ರಾಯಚ್ಛತ್ । ಅಸೌವಾ ಆದಿತ್ಯಇಂದ್ರಃ । ಸೈಷೊಅಗ್ನಿಃ । ತಸ್ಯೇಮಾ ಇಷ್ಟಕಾಯ ಋಗ್ಯಜುಃ ಸಾಮಾಥರ್ವಾಂಗಿರಸ ಇತಿಹಾಸಃ ಪುರಾಣಂ । ಸಶಿರಃ ಪಕ್ಷಸೀಪೃಷ್ಠ ಪುಚ್ಛವಾನೇಷೋಽಗ್ನಿಃ ಪುರುಷವಿಧಃ । ಶೈಷಾದ್ಯೌಃ ಪ್ರಜಾಪತೇಸ್ತೃತೀಯಾಚಿತಿಃ । ಕರ್ರ್ಯೈರ್ಯಜಮಾನಸ್ಯಾಽಽತ್ಮವಿದೇಽವದಾನಂ ಕರೋತಿ । ಅಥಾಽಽತ್ಮವಿದುತ್ಕ್ಷಿಪ್ಯ ಬ್ರಹ್ಮಣೇಪ್ರಾಯಚ್ಛತ್ । ತತ್ರಾಽಽನಂದೀ ಮೋದೀ ಭವತಿ ||೩೩||

ಐದು ಇಟ್ಟಿಗೆಗಳಿಂದ ಕೂಡಿದ ಗಾರ್ಹಪತ್ಯಾಗ್ನಿಯು ಸಂವತ್ಸರವಾಗಿರುತ್ತದೆ. ಈ ಇಟ್ಟಿಗೆಗಳು ವಸನ್ತ, ಗ್ರೀಷ್ಮ, ವರ್ಷ, ಶರತ್ ಮತ್ತು ಸಶಿರ ಋತುಗಳು. ಅದಕ್ಕೆ ಒಂದು ತಲೆ. ಎರಡು ರೆಕ್ಕೆಗಳು, ಒಂದು ಬೆನ್ನು, ಮತ್ತು ಒಂದು ಪುಚ್ಛ ಇರುತ್ತವೆ. ಯಾರು ಈ ಅಗ್ನಿಯು ಪೃಥ್ವಿಪ್ರಜಾಪತಿ ಎಂದು ಅರಿತು ; ಇದು ಅವನ ಪ್ರಥಮ ಹೋಮಾಗ್ನಿಯೆಂದು ಭಾವಿಸುವರೋ ಅವರ ಕೈಗಳಿಂದ ಯಜಮಾನನನ್ನು ಅಂತರಿಕ್ಷಕ್ಕೇರಿಸಿ ಅವನನ್ನು ವಾಯುವಿಗೆ ಸಮರ್ಪಿಸುತ್ತಾನೆ. ಆದ್ದರಿಂದ ವಾಯುವೇ ಪ್ರಾಣ, ಪ್ರಾಣವೇ ಅಗ್ನಿ. ದಕ್ಷಿಣಾಗ್ನಿಗೆ ಪ್ರಾಣ, ವ್ಯಾನ, ಅಪಾನ, ಸಮಾನ, ಉದಾನ ಎಂಬ ಪ್ರಾಣಗಳು ಇಟ್ಟಿಗೆಗಳಾಗಿರುತ್ತವೆ. ಆದ್ದರಿಂದ ಅದಕ್ಕೆ ಒಂದು ತಲೆ, ಎರಡು ರೆಕ್ಕೆಗಳು, ಒಂದು ಬೆನ್ನು, ಮತ್ತು ಒಂದು ಪುಚ್ಛವಿರುತ್ತದೆ. ಪುರುಷ ವಿಧವನ್ನು ಕಂಡುಕೊಂಡವರಿಗೆ ಈ ಅಂತರಿಕ್ಷವು ಪ್ರಜಾಪತಿಯ ಎರಡನೆಯದು, ಹೋಮಕುಂಡ ಅದರ ಕೈಗಳಿಂದ ಯಜಮಾನನನ್ನು ಆಕಾಶಕ್ಕೆ ಎತ್ತಿಹಿಡಿದು ಇಂದ್ರ

ನಿಗೆ ಸಮರ್ಪಿಸುತ್ತಾನೆ. ಇಂದ್ರನೇ ಆಚೆಗಿರುವ ಸೂರ್ಯನು. ಅವನು ಮೂರನೆಯದಾದ ಆಹವನೀಯಾಗ್ನಿಯು. ಅದಕ್ಕೆ ಇಟ್ಟಿಗೆಗಳು ಋಗ್ವೇದ, ಯಜುರ್ವೇದ ಸಾಮವೇದ, ಅಥರ್ವಾಂಗಿರಸ, ಇತಿಹಾಸ, ಪುರಾಣ ಇವುಗಳು. ಅದಕ್ಕೆ ಒಂದು ತಲೆ, ಎರಡು ರೆಕ್ಕೆಗಳು, ಒಂದು ಬೆನ್ನು ಮತ್ತು ಒಂದು ಪುಚ್ಛವಿದ್ದು ಈ ಅಗ್ನಿಸಮಾನವಾದ ಪುರುಷನು, ಎಂದರಿಯಬೇಕು. ಈ ಆಕಾಶವು ಪ್ರಜಾಪತಿಯ ಮೂರನೆಯ ಹೋಮಾಗ್ನಿಯಾಗಿದ್ದು ಅದು ತನ್ನ ಕೈಗಳಿಂದ ಯಜಮಾನನನ್ನು ಆತ್ಮವಿದನಿಗೆ ಸಮರ್ಪಿಸುತ್ತದೆ. ತರುವಾಯ ಆ ಆತ್ಮವಿದನು ಅವನನ್ನು ಮೇಲಕ್ಕೆತ್ತಿ ಬ್ರಹ್ಮನಿಗೆ ಸಮರ್ಪಿಸುತ್ತಾನೆ. ಅಲ್ಲಿ ಅವನು ಆನಂದದಿಂದಲೂ, ಸಂತೋಷದಿಂದಲೂ ಇರುತ್ತಾನೆ.

ಪೃಥಿವೀಗಾರ್ಹಪತ್ಯಂ । ಅಂತರಿಕ್ಷಂದಕ್ಷಿಣಾಗ್ನಿಃ । ದ್ಯೌದಾಹವನೀಯಾಯಃ। ತತಏವಪವಮಾನ ಪಾವಕಶುಚಯ ಆವಿಷ್ಕೃತಮೇಕೇನಾಸ್ಯಯಜ್ಞಂ । ಯತಃ ಪವಮಾನಪಾವಕಶುಚಿಸಂಘಾತೋ ಜಾಠರಃ । ತಸ್ಮಾದಗ್ನಿರ್ಯಷ್ಟವ್ಯಶ್ಚೇತವ್ಯಃ । ಸ್ತೋತವ್ಯೋಽಭಿಧ್ಯಾತವ್ಯಃ । ಯಜಮಾನೋಹವಿರ್ಗೃಹೀತ್ವಾದೇವತಾಭಿಧ್ಯಾಮಿಚ್ಛತಿ । ಹಿರಣ್ಯವರ್ಣಃ ಶಕುನೋ ಹೃದ್ಯಾದಿತ್ಯೇ ಪ್ರತಿಷ್ಠಿತಃ । ಮದ್ಗುರ್ಹಂ ಸಸ್ತೇಜೋವೃಕ್ಷಃ । ಸೋಽಸ್ಮಿನ್ನಗ್ನೌಯಜಮಹೇ ॥ ಇತಿಚಾಪಿ ಮಂತ್ರಾರ್ಥಂವಿಚಿನೋತಿ । ತತ್ಸವಿತೃವರೇಣ್ಯಂ ಭರ್ಗೋಽಸ್ಯಾಭಿಧ್ಯೇಯಂ । ಯೋಬುಧ್ಯಂತಸ್ಥೋಧ್ಯಾಯೀಹಮನಃ ಶಾನ್ತಿಪದಮನುಸರತ್ಯಾತ್ಮನ್ಯೇವಧತ್ತೇ । ಅತ್ರೇಮೇಶ್ಲೋಕಾಭವನ್ತಿ—ಯಥಾನಿರಿಂಧನೋ ವಹ್ನಿಃ ಸ್ವಯೋನಾವುಪಶಾಮ್ಯತಿ । ತಥಾವೃತ್ತಿಕ್ಷಯಾಚ್ಚಿತ್ತಂ ಸ್ವಯೋನಾವುಪಶಾಮ್ಯತಿ ॥ ಸ್ವಯೋನಾವುಪಶಾನ್ತಸ್ಯಮನಸಃಸತ್ಯಕಾಮತಃ । ಇಂದ್ರಿಯಾರ್ಥವಿಮೂಢಸ್ಯಾನೃತಾಃ ಕರ್ಮವಶಾನುಗಾಃ ॥ ಚಿತ್ತಮೇವಹಿಸಂಸಾರ ಸ್ತತ್ಪ್ರಯತ್ನೇನ ಶೋಧಯೇತ್ । ಯಚ್ಚಿತ್ತಂ ಸ್ತನ್ಮಯೋಭವತಿ ಗುಹ್ಯಮೇತತ್ಸನಾತನಂ ॥ ಚಿತ್ತಸ್ಯಹಿ ಪ್ರಸಾದೇನ ಹನ್ತಿಕರ್ಮ ಶುಭಾಶುಭಂ । ಪ್ರಸನ್ನಾತ್ಮಾಽಽತ್ಮನಿಸ್ಥಿತ್ವಾ ಸುಖಮವ್ಯಯಮಶ್ನುತೇ ॥ ಸಮಾಸಕ್ತಂ ಯಥಾಚಿತ್ತಂ ಜನ್ತೋರ್ವಿಷಯಗೋಚರೇ । ಯದ್ಯೇವಂಬ್ರಹ್ಮಣಿಸ್ಯಾತ್ ಕೋನಮುಚ್ಯೇತಬಂಧನಾತ್ ॥ ಮನೋಹಿದ್ವಿವಿಧಂ ಪ್ರೋಕ್ತಂಶುದ್ಧಂಚಾ ಶುದ್ಧಮೇವಚ । ಅಶುದ್ಧಂಕಾಮಸಂಪರ್ಕಾಚ್ಛುದ್ಧಂಕಾಮವಿವರ್ಜಿತಂ ॥ ಲಯವಿಕ್ಷೇಪರಹಿತಂಮನಃಕೃತ್ವಾಸು

ನಿಶ್ಚಲಂ । ಯದಾಯಾತ್ಯಮನೀಭಾವಂತದಾತತ್ಪರಮಂಪದಂ ॥ ತಾವನ್ಮನೋ ನಿರೋದ್ಧವ್ಯಂಹೃದಿಯಾತಾಕ್ಷಯಂಗತಂ । ಏತಜ್ಞಾನಂಚ ಮೋಕ್ಷಂಚಶೇಷ ನ್ಯೇಗ್ರಂಥವಿಸ್ತರಃ । ಸಮಾಧಿನಿರ್ಧೂತ ಮಲಸ್ಯಚೇತಸೋನಿವೇಶಿತಸ್ಯಾಽಽತ್ಮ ನಿಯತ್ಸುಖಾಭವೇತ್ । ನ ಶಕ್ಯತೇವರ್ಣಯಿತುಂ ಗಿರಾತದಾಸ್ವಯಂತದಂತಃ ಕರಣೇನಗೃಹ್ಯತೇ ॥ ಅಪಾಮಾಪೋರಗ್ನೌವಾವ್ಯೋ ಮ್ನಿವ್ಯೋಮಲಕ್ಷಯೇ ತತ್ । ಏವಮನ್ತರ್ಗತಂಯಸ್ಯಮನಃ ಸಪರಿಮುಚ್ಯತೇ ॥ ಮನಏವಮನು ಷ್ಯಾಣಾಂಕಾರಣಂ ಬಂಧಮೋಕ್ಷಯೋಃ । ಬಂಧಾಯ ವಿಷಯಾಸಂಗಮೋಕ್ಷೇ ನಿರ್ವಿಷಯಂಸ್ಮೃತಂ ॥ ॥ಇತಿ॥ ಅತೋಽನಗ್ನಿಹೋತ್ರ್ಯನಗ್ನಿ ಚಿದಜ್ಞಾನಭಿ ಧ್ಯಾಯಿನಾಂ । ಬ್ರಹ್ಮಣಃ ಪದವ್ಯೋಮಾನುಸ್ಮರಣಂವಿರುದ್ಧಂ । ತಸ್ಮಾದಗ್ನಿ ರ್ಯಷ್ಟವ್ಯಶ್ಚೇತವ್ಯಃ ಸ್ತೋತವ್ಯೋಽಭಿಧ್ಯಾತವ್ಯಃ ॥೩೪॥

ಪೃಥ್ವಿಯು ಗಾರ್ಹಪತ್ಯಾಗ್ನಿಯಾಗಿದೆ. ಅಂತರಿಕ್ಷವು ದಕ್ಷಿಣಾಗ್ನಿಯಾಗಿದೆ. ಆಕಾಶವು ಆಹವನೀಯಾಗ್ನಿಯಾಗಿದೆ. ಆದ್ದರಿಂದ ಅವು ಸ್ವಚ್ಛವಾದ, ಸ್ವಚ್ಛಮಾಡುವ, ಮತ್ತು ತೇಜಸ್ವಿ ಎಂಬುದಾಗಿ ಕರೆಯಲ್ಪಟ್ಟಿದೆ. ಇದರಿಂದ ಯಜ್ಞವು ಶುಭ್ರವಾಗಿಡ ಲ್ಪಡುತ್ತದೆ. ಜಾಠರಾಗ್ನಿಯು ಪರಿಶುದ್ಧತೆ, ಪರಿಶುದ್ಧಮಾಡುವ, ಮತ್ತು ತೇಜಸ್ಸು ಗಳ ಸಂಯೋಗವಾಗಿರುವುದರಿಂದ ಈ ಅಗ್ನಿಯನ್ನು ಉಪಾಸನೆ ಮಾಡಬೇಕು. ಇಟ್ಟಿಗೆ ಗಳಿಂದ ಹೋಮ ಕುಂಡವನ್ನು ಕಟ್ಟಿ, ಹವಿಸ್ಸನ್ನು ಅರ್ಪಿಸಿ, ಅಗ್ನಿಯ ಸ್ತುತಿಯನ್ನು ಮಾಡಿ, ತಪವನ್ನು ಆಚರಿಸಬೇಕು. ಯಜಮಾನನು ದೇವಕಾರ್ಯವನ್ನು ಮಾಡು ವಾಗ ದೇವತಾಭಿಧ್ಯಾನವನ್ನು ಈ ರೀತಿ ಮಾಡಬೇಕು. ಹಳದಿ ಬಣ್ಣದಪಕ್ಷಿಯು ಹೃದ ಯದಲ್ಲೂ, ಆದಿತ್ಯನಲ್ಲೂ, ಪ್ರತಿಷ್ಠಿತವಾಗಿದೆ. ಇದು ಚುರುಕಾದ ಪಕ್ಷಿಯಾಗಿದ್ದು ಅಪರಿಮಿತವಾದ ತೇಜಸ್ಸನ್ನು ಹೊಂದಿರುವ ಹಂಸವಾಗಿರುತ್ತೆ. ಅವನನ್ನು ಅಗ್ನಿ ಯಲ್ಲಿ ಆವಾಹನೆಮಾಡಿ ಈ ರೀತಿ ಸ್ತುತಿಸಬೇಕು. "ತತ್ಸವಿತ್ಯ ವರೇಣ್ಯಂ ಭರ್ಗೋದೇವ ಸ್ಯ ಧೀಮಹಿ" ಎಂದು ಜಪಿಸಬೇಕು. ಯಾರು ಅವನಲ್ಲಿ ಅಚಲವಾದ ನಂಬಿಕೆಯನ್ನಿಟ್ಟು ಜಪಿಸುವರೋ ಅವರು ಮನಸ್ಸಿಗೆ ಶಾಂತವಾಗಿರುವ ಸ್ಥಳವನ್ನು ಸೇರುತ್ತಾರೆ. ಮತ್ತು ಅದನ್ನು ಆತ್ಮನಲ್ಲಿ ಸ್ಥಾಪಿಸುತ್ತಾನೆ. ಈ ವಿಚಾರದಲ್ಲಿ ಈ ಕೆಳಗೆ ಕಂಡ ಶ್ಲೋಕಗಳಿರು ತ್ತದೆ. ಹೇಗೆ ಅಗ್ನಿಯು ಸಮಿಧೆಗಳನ್ನು ಹಾಕದಿದ್ದಲ್ಲಿ ಅದರ ಸ್ಥಳದಲ್ಲಿಯೇ ಮಾಯ ವಾಗುವುದೋ ಹಾಗೆಯೇ ಮನಸ್ಸೂ ಚಟುವಟಿಕೆಯಿಂದ ಇರದಿದ್ದ ಭಾಗದಲ್ಲಿ ಅದರ ಮೂಲದಲ್ಲೇ ಮಾಯವಾಗಿ ಬಿಡುತ್ತದೆ. ಸತ್ಯವನ್ನೇ ಅರಸುತ್ತಿರುವ ಮನಸ್ಸೂ ಕೂಡ ಅದರ ಮೂಲದಿಂದ ಕೆಳಗಿಳಿದುಹೋದಲ್ಲಿ ಆ ಸ್ಥಳದಲ್ಲಿ ಅಳಿದ ಕರ್ಮಗಳ ಸುಳ್ಳು ಅಂಶಗಳು ಹುಟ್ಟುತ್ತವೆ. ಜ್ಞಾನೇಂದ್ರಿಯಗಳಿಂದ ಮೋಸ

ಹೋದ ಒಬ್ಬನ ಚಿಂತೆಯು ಸಂಸಾರದ ಎಡೆಗೆ ಸಾಗುತ್ತದೆ. ಆಗ ಅವನು ತನ್ನ ಸ್ವಶಕ್ತಿಯಿಂದ ಅರಿತುಕೊಳ್ಳಬೇಕು. ಮಾನವನು ತಾನು ಏನಾಗಬೇಕೆಂದು ಚಿಂತಿಸುವನೋ ಅವರ ಆದಿ ಅಂತ್ಯಗಳನ್ನು ತಿಳಿದುಕೊಳ್ಳಲು ಕಷ್ಟವಾಗುತ್ತದೆ. ಒಬ್ಬನ ಮನಸ್ಸಿನ ಸ್ವಚ್ಛ ಮತ್ತು ಪರಿಶುಭ್ರತೆಯು ತನ್ನ ಆತ್ಮನಲ್ಲಿ ಸ್ಥಿತವಾಗಿರುವ ಒಳ್ಳೆಯ ಅಥವಾ ಪಾಪ ಕರ್ಮಗಳನ್ನೂ ಅಂತ್ಯಗೊಳಿಸುತ್ತದೆ. ಆಗ ಅವನು ಅವಿನಾಶಿಯಾದ ಸೌಖ್ಯವನ್ನು ಅನುಭವಿಸುತ್ತಾನೆ. ಮಾನವನ ಚಿಂತೆಯು ಬ್ರಹ್ಮನಲ್ಲಿ ಕೇಂದ್ರೀಕರಿಸಿದಲ್ಲಿ ಅದು ಈ ಪ್ರಪಂಚದ ಜೀವಿಗಳ ಮೇಲೆ ಇಟ್ಟಂತಾಗಿ ಯಾರು ಬಂಧನದಿಂದ ಬಿಡುಗಡೆಹೊಂದದೆ ಇರುತ್ತಾರೆ? ಮನಸ್ಸು ಶುದ್ಧ ಮತ್ತು ಅಶುದ್ಧ ಎಂಬ ಎರಡು ರೀತಿಗಳನ್ನು ಹೊಂದಿದೆ. ಕಾಮಗಳ ಸಂಬಂಧವನ್ನು ಕಲ್ಪಿಸಿಕೊಳ್ಳುವುದು ಅಶುದ್ಧವೂ ಮತ್ತು ಆಶೆಗಳಿಂದ ಬಿಡುಗಡೆ ಹೊಂದುವುದು ಶುದ್ಧವೂ ಆಗಿದೆ. ಮನಸ್ಸನ್ನು ಸೋಮಾರಿತನ ಮತ್ತು ತೊಡಕುಗಳಿಂದ ಬಿಡುಗಡೆಮಾಡಿ ಅದನ್ನು ಅಚಲವಾಗಿರಿಸಿದಲ್ಲಿ ಅವನು ಮನಸ್ಸಿನಿಂದ ಬಿಡುಗಡೆಹೊಂದಿ ವಿಮನಸ್ಕನಾಗುತ್ತಾನೆ. ಆಗ ಅದೇ ಪರಮಪದವು. ಮನಸ್ಸು ಅದರ ಅಂತ್ಯವನ್ನು ಕಂಡುಕೊಳ್ಳುವ ಪರ್ಯಂತರ ಅದನ್ನು ಹೃದಯದಲ್ಲಿ ಅಧೀನವಾಗಿಟ್ಟುಕೊಳ್ಳಬೇಕು. ಅದೇ ಜ್ಞಾನ; ಅದೇ ಬಿಡುಗಡೆ; ಬಾಕಿ ಎಲ್ಲವೂ ಈ ಸಂಸಾರದಲ್ಲಿ ನಮ್ಮನ್ನು ಬಂಧಿಸುವ ಗಂಟುಗಳ ಸರಣಿ. ತನ್ನ ಕಲ್ಮಷಗಳಿಂದ ಶುದ್ಧಪಡಿಸಿದ ಮನಸ್ಸಿನ ಸಂತೋಷವು ಏಕಾಗ್ರತೆ ಮತ್ತು ಆ ಸಂಬಂಧವಾದ ಮೋಕ್ಷವನ್ನು ಯಾವ ಗ್ರಂಥಗಳಿಂದಲೂ ವಿವರಿಸಲು ಸಾಧ್ಯವಿಲ್ಲ. ಅದನ್ನು ಅಂತರೇಂದ್ರಿಯಗಳ ಮೂಲಕ ಅರಿತುಕೊಳ್ಳಬಹುದು. ಹೇಗೆ ನೀರಿನಿಂದ ನೀರನ್ನು ಬೇರ್ಪಡಿಸಲು, ಅಗ್ನಿಯಿಂದ ಅಗ್ನಿಯನ್ನೂ, ವ್ಯೋಮದಿಂದ ವ್ಯೋಮವನ್ನೂ ಬೇರ್ಪಡಿಸಲು ಸಾಧ್ಯವಿಲ್ಲವೋ ಹಾಗೆ ಮಾನವನ ಮನಸ್ಸು ಒಳಗಡೆ ಪ್ರವೇಶಿಸಿ, ಅವನನ್ನು ಸಂಪೂರ್ಣವಾಗಿ ಬಿಡುಗಡೆಮಾಡುತ್ತದೆ. ಸತ್ಯವಾಗಿಯೂ, ಮನಸ್ಸು ಮನುಷ್ಯನ ಬಂಧ ಮೋಕ್ಷಗಳಿಗೆ ಕಾರಣವಾಗಿರುತ್ತದೆ. ವಿಷಯ ಸಂಗಗಳಿಂದ ಬಂಧನವೂ ನಿರ್ವಿಷಯ ಸ್ಮೃತಿಗಳಿಂದ ಮೋಕ್ಷವೂ ಎಂದು ಹೇಳಲಾಗಿದೆ. ಆದ್ದರಿಂದ ಯಾರು ಅಗ್ನಿ ಹೋತ್ರಾದಿಗಳನ್ನು ಆಚರಿಸುವುದಿಲ್ಲವೋ, ಅಗ್ನಿಯನ್ನೇ ಪ್ರತಿಷ್ಠಿಸದೆ, ಅದರ ಜ್ಞಾನವನ್ನೂ ಪಡೆಯದೆ, ಜಪತಪಾದಿಗಳನ್ನು ಆಚರಿಸದೆ ಇರುವವರಿಗೆ ಸ್ವರ್ಗಲೋಕದಲ್ಲಿನ ಬ್ರಹ್ಮನ ಇರುವಿಕೆಯ ಸ್ಮರಣೆಯೂ ಉಂಟಾಗುವುದಿಲ್ಲ ಆದ್ದರಿಂದ ಇಟ್ಟಿಗೆಗಳಿಂದ ಅಗ್ನಿಕುಂಡವನ್ನು ರಚಿಸಿ ಆ ದೇವನ ಅರ್ಚನೆಯನ್ನು ಮಾಡಿ, ಅವನ ಮೇಲೆ ತಪಸ್ಸನ್ನೂ ಆಚರಿಸಬೇಕು.

ನಮೋಽಗ್ನಯೇಪೃಥಿವೀಕ್ಷಿತೇ ಲೋಕಸ್ಪೃತೇಲೋಕಮಸ್ಮೈ ಯಜಮಾನಾಯ ದೇಹಿ । ನಮೋವಾಯುವೇ ಅಂತರಿಕ್ಷಕ್ಷಿತೇಲೋಕ ಸ್ಪೃತೇಲೋಕಮಸ್ಮೈ

ಯಜಮಾನಾಯದೇಹಿ । ನಮಆದಿತ್ಯಾಯದಿವಿಕ್ಷಿತೇ ಲೋಕಸ್ಪೃತೇ ಲೋಕ ಮಸ್ಮೈಯಜಮಾನಾಯದೇಹಿ । ನಮೋಬ್ರಹ್ಮಣೇಸರ್ವಕ್ಷಿತೇ ಸರ್ವಸ್ಪೃತೇ ಸರ್ವಮಸ್ಮೈಯಜಮಾನಾಯದೇಹಿ । ಹಿರಣ್ಮಯೇನಪಾತ್ರೇಣ ಸತ್ಯಸ್ಯಾಪಿ ಹಿತಂಮುಖಂ । ತತ್ತ್ವಂಪೂಷನ್ನಪಾವೃಣು ಸತ್ಯಧರ್ಮಾಯ ವಿಷ್ಣವೇ ॥ ಯೋಽಸಾವಾದಿತ್ಯೇಪುರುಷಃ ಸೋಽಸಾವಹಮೀತಿ । ಏಷಹವೈಸತ್ಯಧರ್ಮೋ ಯದಾದಿತ್ಯಸ್ಯಾಽಽದಿತ್ಯತ್ವಂ । ತಚ್ಛುಕ್ಲಂಪುರುಷಮಲಿಂಗಂ ನಭಸೋಽನ್ತ ರ್ಗತಸ್ಯತೇಜಸೋಽಂಶಮಾತ್ರಂ ಏತದ್ಯದಾದಿತ್ಯಸ್ಯ ಮಧ್ಯಇವೇತ್ಯಕ್ಷಿಣ್ಯ ಗ್ನೌಚ । ಏತದ್ಬ್ರಹ್ಮ । ಏತದಮೃತಂ । ಏತದ್ಭರ್ಗಃ । ಏತತ್ಸತ್ಯಧರ್ಮೋ ನಭಸೋ ಅಂತರ್ಗತಸ್ಯತೇಜಸೋಽಂಶಮಾತ್ರಮೇತದ್ಯದಾದಿತ್ಯಸ್ಯಮಧ್ಯೇ ಯಜುರ್ದೀಪ್ಯತಿ ॥ ಓಮಾಪೋಜ್ಯೋತಿರಸೋಽಮೃತಂ ಬ್ರಹ್ಮಭೂರ್ಭುವಃ ಸ್ಸುವರೋಂ । ಅಷ್ಟಪಾದಂ ಶುಚಿಂಹಂಸಂ ತ್ರಿಸೂತ್ರಮಣಿಮವ್ಯಯಂ । ದ್ವಿಧ ಮೋನ್ಧಂತೇಜಸೇನ್ಧಂಸರ್ವಂಪಶ್ಯನ್ಪಶ್ಯತಿ ॥ ನಭಸೋಽಂತರ್ಗತಸ್ಯತೇಜಸೋಽ-ಂಶಮಾತ್ರ ಮೇತದ್ಯದಾದಿತ್ಯಸ್ಯ ಮಧ್ಯೇಉದಿತ್ವಾಂ ಮಯೂಖೇಭವತಃ । ಏತತ್ಸಾವತ್ಸತ್ಯಧರ್ಮಃ । ಏತದ್ಯಜುಃ । ಏತತ್ತಪಃ । ಏತದಗ್ನಿಃ । ಏತ ದ್ವಾಯುಃ । ಏತತ್ಪ್ರಾಣಃ । ಏತದಾಪಃ । ಏತಚ್ಚಂದ್ರಮಾಃ । ಏತಚ್ಛುಕ್ರಂ । ಏತದಮೃತಂ । ಏತದ್ಬ್ರಹ್ಮವಿಷಯಂ । ಏತದ್ಭಾನುರರ್ಣವಃ । ತಸ್ಮಿನ್ನೇವ ಯಜಮಾನಾಃ ಸೈಂಧವಇವವಿಲೀಯನ್ತೇ । ಏಷಾವೈಬ್ರಹ್ಮೈಕತಾ । ಅತ್ರ ಹಿಸರ್ವೇಕಾಮಾಃ ಸಮಾಹಿತಾಇತಿ । ಅತ್ರೋದಾಹರನ್ತಿ—ಅಂಶುಧಾರಯಇವಾ ಣುವಾತೇರಿತಃ ಸಂಸ್ಫುರತ್ಯಸಾವನ್ತರ್ಗಃ ಸುರಾಣಾಂ । ಯೋಹ್ಯೇವಂ ವಿತ್ಸ ಸವಿತ್ಸಹ್ವೈತಪಿತ್ರೈಕಧಾಮೇತಃ ಸ್ಯಾತ್ತದಾತ್ಮಕಶ್ಚ ॥ ಯೇಬಿಂದವಇವಾಭ್ಯು ಚ್ಚರನ್ತ್ಯಜಸ್ರಂ ವಿದ್ಯುದಿವಾಭ್ರಾರ್ಚಿಷಃ ಪರಮೇವ್ಯೋಮನ್ । ತೇಅರ್ಚಿ ಷೋವೈಯಶಸ ಆಶ್ರಯವಶಾಜ್ಜಟಾಭಿರೂಪ ಇವಕೃಷ್ಣವರ್ತನಃ ॥ಇತಿ॥

ಭೂಮಿಯಲ್ಲಿ ನೆಲೆಸಿರುವ, ಲೋಕಗಳ ಸ್ಮೃತಿಯಲ್ಲಿರುವ ಹೇ ಅಗ್ನಿಯೇ ನಿನಗೆ ನಮಸ್ಕಾರಗಳು. ಲೋಕಕ್ಕೆ ನನ್ನನ್ನು ಯಜಮಾನನನ್ನಾಗಿ ಮಾಡು. ಅನ್ತರಿಕ್ಷದಲ್ಲಿ ನೆಲೆಸಿರುವ, ಲೋಕಗಳ ಸ್ಮೃತಿಯಲ್ಲಿರುವ ಹೇ ವಾಯುವೇ ನಿನಗೆ ನಮಸ್ಕಾರ ಗಳು, ನನ್ನನ್ನು ಲೋಕಕ್ಕೆ ಯಜಮಾನನನ್ನಾಗಿ ಮಾಡು. ಸ್ವರ್ಗದಲ್ಲಿ ನೆಲೆಸಿರುವ ಮತ್ತು ಲೋಕದ ಸ್ಮೃತಿಯಲ್ಲಿರುವ ಹೇ ಆದಿತ್ಯನೇ ನಿನಗೆ ನಮಸ್ಕಾರಗಳು, ನನ್ನನ್ನು

ಲೋಕಕ್ಕೆ ಯಜಮಾನನನ್ನಾಗಿಮಾಡು. ಸಮಸ್ತರಲ್ಲೂ ನೆಲೆಸಿರುವ, ಸಮಸ್ತರ ಸ್ಮೃತಿಯಲ್ಲೂ ಇರುವ ಹೇ ಬ್ರಹ್ಮನೇ ನಿನಗೆ ನಮಸ್ಕಾರಗಳು. ಎಲ್ಲವನ್ನೂ ನಿನ್ನ ಆರಾಧಕರಿಗೆ ಉಂಟುಮಾಡು. ಓ ಪೂಷನೇ ಈ ಸತ್ಯವೆಂಬ ಬಂಗಾರದ ಪಾತ್ರೆಗೆ ಮುಚ್ಚಳವನ್ನು ಹಾಕಿರುತ್ತೆ. ನಾವು ಸತ್ಯ ಧರ್ಮಗಳ ಮೂಲನಾದ ವಿಷ್ಣುವನ್ನು ಕಾಣುವಂತೆ ಅದರ ಮುಚ್ಚಳವನ್ನು ತೆಗಿ. ಅಲ್ಲಿ ಸೂರ್ಯನಲ್ಲಿರುವ ಪುರುಷನೂ ನಿನ್ನ ಆತ್ಮನೇ ಆಗಿದ್ದಾನೆ. ಆದ್ದರಿಂದ ಸೂರ್ಯನಿಗೆ ಸತ್ಯಧರ್ಮಗಳಿಂದಲೇ ಆದಿತ್ಯತ್ವವು ಲಭಿಸಿದೆ. ಅದು ತೇಜೋಭೂತವಾಗಿದೆ; ಪುರುಷವಾಗಿದೆ; ಲಿಂಗಭೇದವಿಲ್ಲದ್ದಾಗಿದೆ; ಆಕಾಶವೆಲ್ಲಕ್ಕೂ ವ್ಯಾಪಕವಾಗುವ ತೇಜಸ್ಸಿನಿಂದ ಕೂಡಿದೆ. ಸೂರ್ಯನ ಮಧ್ಯದಲ್ಲಿರುವ, ಕಣ್ಣುಗಳಲ್ಲಿರುವ, ಅಗ್ನಿಯಲ್ಲಿರುವ ತೇಜಸ್ಸಿಗೆ ಸಂಬಂಧಿಸಿರುವುದೆಲ್ಲವೂ, ಬ್ರಹ್ಮನಾಗಿದೆ; ಇದೇ ಅಮೃತವಾಗಿದೆ. ಇದೇ ತೇಜಸ್ಸಾಗಿದೆ. ಆಕಾಶದಲ್ಲಿ ಅಂತರ್ಗತವಾದ ತೇಜಸ್ಸಿನಿಂದ ಒಂದು ಅಂಶ ಮಾತ್ರ ಸೂರ್ಯನ ಮಧ್ಯದಲ್ಲಿ ದೀಪ್ತಿಯುಂತಿದ್ದು ಚಂದ್ರನೂ ಮತ್ತು ಎಲ್ಲ ಜೀವರಾಶಿಗಳೂ ಈ ದೀಪ್ತಿಯ ಅಂಶವೇ ಆಗಿರುತ್ತದೆ, ಹೀಗೆಯೇ ಇನ್ನೊಂದು ಅಂಶವು ಯಜುರ್ವೇದ ರೂಪವಾಗಿ ಹೊಳೆಯುತ್ತ ಸೂರ್ಯನ ಮಧ್ಯದಲ್ಲಿಯೆ ಇರುತ್ತದೆ, ಅದೇ ಓಂಕಾರ. ಇದೇ ತಪಸ್ಸು, ಇದೇ ಅಗ್ನಿಯು, ಇದೇ ವಾಯುವು, ಇದೇ ಪ್ರಾಣವು, ಇದೇ ನೀರು, ಇದೇ ಚಂದ್ರನು, ಇದೇ ನಕ್ಷತ್ರಗಳು, ಇದೇ ಅಮೃತವು, ಇದೇ ಬ್ರಹ್ಮಜ್ಞಾನವು, ಇದೇ ಬೆಳಕೆಂಬ ಸಾಗರವು, ಇದರಲ್ಲಿಯೇ ಉಪ್ಪಿನಗಡ್ಡೆಯು ಕರಗುವಂತೆ ಯಜಮಾನನು ಐಕ್ಯವಾಗುತ್ತಾನೆ. ಎಲ್ಲಾ ಕಾಮಗಳನ್ನೂ ಒಳಗೊಂಡ ಬ್ರಹ್ಮನಲ್ಲಿ ಐಕ್ಯವಾಗುತ್ತಾನೆ. ಇದಕ್ಕೆ ಉದಾಹರಣೆಯಾಗಿ ಹೀಗೆ ಹೇಳುತ್ತಾರೆ : ಉರಿಯುತ್ತಿರುವ ದೀಪವು ಹೇಗೆ ಬೀಸುವ ಗಾಳಿಯಿಂದಾಗಿ ಅಲ್ಲಾಡುತ್ತದೆಯೋ ಹಾಗೆ ಇಂದ್ರಿಯಗಳ ನಡುವೆ ಇರುವ ತೇಜಸ್ಸೂ ಆಗಾಗ್ಗೆ ಹೊಳೆಯುತ್ತದೆ. ಇದನ್ನು ಯಾರು ಅರಿಯುವರೋ ಅವರೇ ಜ್ಞಾನಿಗಳು. ಇದರಲ್ಲಿರುವ ಭಿನ್ನತೆಯನ್ನು ಯಾರು ಅರಿತುಕೊಂಡು ಏಕತ್ವವನ್ನು ಪಡೆಯಲು ಬಯಸುವರೋ ಅದು ಅವರಿಗೆ ಲಭಿಸುತ್ತದೆ. ಯಾರು ಸಮುದ್ರದ ನೀರು ಮಳೆಯ ರೂಪದಲ್ಲಿ ನಿರಂತರವೂ ಸುರಿಯುವಂತೆ, ಮೋಡಗಳಲ್ಲಿರುವ ಮಿಂಚಿನಲ್ಲಿ ಅಡಗಿರುವ ಬೆಳಕಿನಂತೆ, ದಿಢೀರನೆ ಕಾಣಿಸಿಕೊಳ್ಳುವರೋ ಅವರು ಯಶಸ್ಸೆಂಬ ಬೆಳಕಿನ ದ್ವಾರಕ್ಕೆ ಬಂದು, ಅಗ್ನಿಗೆ ಜ್ವಾಲೆಯು ಹೇಗೆ ಭೂಷಣವೋ ಹಾಗೆ ಅವರೂ ಭೂಷಿಸುತ್ತಾರೆ.

ದ್ವೇವಾಖಲ್ವೇತೇ ಬ್ರಹ್ಮಜ್ಯೋತಿಷೋರೂಪಕೇ । ಶಾಂತಮೇಕಂ ಸಮೃದ್ಧಂ ಚೈಕಂ । ಅಥಯಚ್ಛಾಂತಂ ತಸ್ಯಾಽಽಧಾರಂಖಂ । ಅಥಯತ್ಸಮೃದ್ಧಮಿದಂತ

ಸ್ಯಾನ್ನಂ । ತಸ್ಮಾನ್ಮಂತ್ರೌಷಧಾಜ್ಯಾಮಿಷ ಪುರೋಡಾಶ ಸ್ಥಾಲೀಪಾಕಾದಿಭಿರ್ಯ ಷ್ಟವ್ಯರ್ಮಂತರ್ವೇದ್ಯಾಂ । ಆಸ್ಯವಾಸಿಷ್ಟೈರಸ್ನಪಾನ್ಯೈಶ್ಚಾಽಽಸ್ಯಮಾಹವನೀ ಯಮಿತಿಮತ್ವಾ । ತೇಜಸಃ ಸಮೃದ್ಧ್ಯೈಪುಣ್ಯಲೋಕವಿಜಿತ್ಯರ್ಥಾಯ । ಅಮೃತ ತ್ವಾಯಚ । ಅತ್ರೋದಾಹರನ್ತಿ । ಅಗ್ನಿಹೋತ್ರಂ ಜುಹುಯಾತ್ಸ್ವರ್ಗ ಕಾಮಃ । ಯಮರಾಜ್ಯಮಗ್ನಿಷ್ಟೋಮೇನಾಭಿಜಯತಿ । ಸೋಮರಾಜ್ಯ ಮುಕ್ಥೇನ । ಸೂರ್ಯರಾಜ್ಯಂಷೋಡಶಿನಾ । ಸ್ವಾರಾಜ್ಯಮತಿರಾತ್ರೇಣ । ಪ್ರಾಜಾಪತ್ಯಮಾಪಹಸ್ರ ಸಂವತ್ಸರಾನ್ತಕ್ರತುನೇತಿ ॥ ವರ್ತ್ಯಾಧಾರ ಸ್ನೇಹ ಯೋಗಾದ್ಯಥಾದೀಪಸ್ಯಸಂಸ್ಥಿತಿಃ । ಅಂತರ್ಯಾಂ ಡೋಪಯೋಗಾದಿ ವನೌ ಸ್ಥಿತಾವಾತ್ಮಾಜೀತಥಾ ॥೩೬॥

ಬ್ರಹ್ಮಜ್ಯೋತಿಯಲ್ಲಿ ಎರಡು ರೂಪಗಳು ಕಂಡುಬರುತ್ತವೆ. ಅವ್ಯಾವುದೆಂದರೆ ಶಾಂತತೆ ಮತ್ತು ಸಮೃದ್ಧತೆ. ಶಾಂತವಾಗಿರುವುದಕ್ಕೆ ಆಧಾರ ಅಂತರಿಕ್ಷ, ಸಮೃದ್ಧ ವಾಗಿರುವುದಕ್ಕೆ ಆಧಾರ ಅನ್ನ. ಆದ್ದರಿಂದ ಯಜ್ಞವೇದಿಕೆಯನ್ನು ಶಾಸ್ತ್ರೀಯವಾಗಿ ರಚಿಸಿ. ವೇದ ಮಂತ್ರಗಳಿಂದಲೂ, ಔಷಧಿಗಳಿಂದಲೂ, ತುಪ್ಪ, ಮಾಂಸ, ರೊಟ್ಟಿ, ಅನ್ನ, ಮೊದಲಾದ ಸ್ಥಾಲೀಪಾಕಗಳಿಂದಲೂ, ಅಗ್ನಿಗೆ ಆಹುತಿಯನ್ನು ಕೊಟ್ಟು ತನ್ನ ಬಾಯಿಯಲ್ಲಿ ಆಹವನೀಯಾಗ್ನಿ ಇರುವುದರಿಂದ ತನಗೆ ತೇಜಸ್ಸು, ಸಮೃದ್ಧಿ, ಪುಣ್ಯಲೋಕ, ಅಮೃತತ್ವ, ಇವುಗಳು ಲಭಿಸುವುದಕ್ಕಾಗಿ ಆಹಾರ ಪಾನೀಯಗಳನು, ಸೇವಿಸಬೇಕು. ಇದಕ್ಕೆ ಉದಾಹರಣೆ ಯಾರಿಗೆ ಸ್ವರ್ಗಲೋಕದ ಕಾಮವಿರು ತ್ತದೆಯೋ ಅವರು ಅಗ್ನಿಹೋತ್ರಾದಿಗಳನ್ನು ಆಚರಿಸಬೇಕು. ಅಗ್ನಿಷ್ಟೋಮದಿಂದ ಯಮನ ರಾಜ್ಯವನ್ನೂ, ಉದ್ಗೀಥದಿಂದ ಸೋಮರಾಜ್ಯವನ್ನೂ ಷೋಡಶಯಾಗ ಕ್ರಮದಿಂದ ಸೂರ್ಯನ ರಾಜ್ಯವನ್ನೂ, ಅತಿರಾತ್ರಯಾಗದಿಂದ ಸ್ವಾರಾಜ್ಯವನ್ನೂ, ಸಾವಿರ ವರ್ಷಗಳ ಪರ್ಯಂತರ ಯಾಗಮಾಡುವುದರಿಂದ ಪ್ರಜಾಪತಿಯ ರಾಜ್ಯವನ್ನೂ ಗೆದ್ದುಕೊಳ್ಳುತ್ತಾರೆ. ಹೇಗೆ ದೀಪವು ಜ್ವಲಿಸುತ್ತಿರುವುದು ಬತ್ತಿಯ ಆಧಾರ ಮತ್ತು ತೈಲದ ಸಂಯುಕ್ತ ಸಹಕಾರದಿಂದಲೋ ಹಾಗೆ ಆತ್ಮ ಮತ್ತು ತೇಜೋವಂತನಾದ ಸೂರ್ಯನು ಬೆಳಗುವುದು ಅಂತರ್ಯಾಮಿಯ ಮತ್ತು ಪ್ರಪಂಚವೆಂಬ ಮೊಟ್ಟೆಯ ಐಕ್ಯದಿಂದ ಎಂಬುದನ್ನು ಅರಿಯಬೇಕು. ಸಾಕ್ಷೀಭೂತ ಮತ್ತು ಅನುಭವಾತ್ಮಗಳೆರಡೂ ಇದ್ದು ಸಾಕ್ಷೀಭೂತದಿಂದ ತೇಜಸ್ಸೂ ಅನುಭವದಿಂದ ಹುಮ್ಮಸ್ಸೂ ಉಂಟಾಗುತ್ತದೆ.

ತಸ್ಮಾದೋಮಿತ್ಯನೇನೈತದುಪಾಸೀತಾ ಪರಿಮಿತಂತೇಜಃ । ತತ್ತ್ರೇಧಾಽಭಿಹಿತ ಮಗ್ನಾವಾದಿತ್ಯೇಪ್ರಾಣೇ । ಅಥೈಷಾನಾಂಗ್ನ ಬಹುಮಿತ್ಯೇಷಾಽಗ್ನೌಹುತಮಾದಿ ತ್ಯಂಗಮಯತಿ । ಅಥಾದಿತ್ಯೇಯೋರಸೋಽಸ್ರವತ್ಸ ಉದ್ಗೀಥಂವರ್ಷತಿ । ತೇನೇಮೇಪ್ರಾಣಾಃ । ಪ್ರಾಣೇಭ್ಯಃಪ್ರಜಾಇತಿ । ಅಕ್ರೋಧಾಹರನ್ತಿಯದ್ಧವಿ ರಿಂಗ್ನೌಹೂಯ ತೇತದಾದಿತ್ಯಂಗಮಯತಿ । ತತ್ಸೂರ್ಯೋರಶ್ಮಿಭಿರ್ವರ್ಷತಿ । ತೇನಽನ್ನಂಭವತಿ । ಅನ್ನಾದ್ಭೂತಾನಾಮುತ್ಪತ್ತಿರಿತಿ । ಏವಂಹ್ಯಾಹ—ಅಗ್ನೌ ಪ್ರಾಸ್ತಾಽಽಹುತಿಃ ಸಮ್ಯಗಾದಿತ್ಯಮುಪತಿಷ್ಠತೇ । ಆದಿತ್ಯಾಜ್ಜಾಯತೇವೃಷ್ಟಿ ರ್ವೃಷ್ಟೇರನ್ನಂತತಃಪ್ರಜಾಃ ॥೩೭॥

ಆದ್ದರಿಂದ ಓಂಕಾರದ ಮೇಲೆ ಉಪಾಸನೆಮಾಡಬೇಕು. ಅದರಿಂದ ಅಪರಿಮಿತವಾದ ತೇಜಸ್ಸು ಹೊರಡುತ್ತದೆ. ಆ ತೇಜಸ್ಸು ಮೂರು ಭಾಗಗಳಾಗಿ ಅಗ್ನಿಯಲ್ಲೂ, ಸೂರ್ಯನಲ್ಲೂ, ಪ್ರಾಣದಲ್ಲೂ ಕವಲೊಡೆಯುತ್ತದೆ. ನಾವು ಅರ್ಪಿಸಿದ ಬಹಳವಾದ ಆಹುತಿಯನ್ನು ಅಗ್ನಿಯಿಂದ ಸೂರ್ಯನವರೆಗೆ ಕೊಂಡೊಯ್ಯುವ ನಾಲೆಯೇ ಇದು. ಸೂರ್ಯನಿಂದ ಸ್ರವಿಸುವ ರಸವು ಉದ್ಗೀಥ ಮಂತ್ರದಿಂದ ಮಳೆಯ ರೂಪದಲ್ಲಿ ಹರಿದುಬರುತ್ತದೆ. ಆದ್ದರಿಂದಲೇ ಅನೇಕ ಪ್ರಾಣಗಳೂ, ಈ ಪ್ರಾಣಗಳಿಂದ ಅನೇಕ ಪ್ರಜೆಗಳೂ, ಉದ್ಭವಿಸುತ್ತಾರೆ. ಈ ವಿಷಯದ ಮೇಲೆ ಉದಾಹರಣೆ—ನಾವು ಅಗ್ನಿಯಲ್ಲಿ ಅರ್ಪಿಸಿದ ಆಹುತಿಯು ಸೂರ್ಯನಿಗೆ ಸಲ್ಲುತ್ತದೆ. ಸೂರ್ಯನು ತನ್ನ ಕಿರಣಗಳ ಮೂಲಕ ಅವನ್ನು ವರ್ಷಿಸುತ್ತಾನೆ. ಆ ಮೂಲಕ ಅನ್ನವು ಉತ್ಪತ್ತಿ ಯಾಗುತ್ತದೆ. ಈ ಅನ್ನದಿಂದ ಭೂತಗಳು ಉತ್ಪತ್ತಿಯಾಗುತ್ತದೆ. ಅದು ಹೇಗೆಂದರೆ ವಿಧಿಪೂರ್ವಕವಾಗಿ ಸಲ್ಲಿಸಿದ ಅಗ್ನಿಯ ಆಹುತಿಯು ಸೂರ್ಯನಿಗೆ ಸೇರು ತ್ತದೆ. ಸೂರ್ಯನಿಂದ ಮಳೆಯೂ, ಮಳೆಯಿಂದ ಅನ್ನವೂ, ಅನ್ನದಿಂದ ಪ್ರಜೆಗಳೂ ಉತ್ಪತ್ತಿಯಾಗುತ್ತಾರೆ.

ಅಗ್ನಿಹೋತ್ರಂಜುಹ್ವಾನೋಲೋಭಜಾಲಂಭಿನತ್ತಿ । ಅತಃಸಮ್ಮೋಹಂ ಛಿತ್ವಾ ನಕ್ರೋಧಾನ್‌ಸ್ತುನ್ವಾನಃ ಕಾಮಮಭಿಧ್ಯಾಯಮಾನ ಸ್ತತಶ್ಚತುರ್ಜಾಲಂ ಬ್ರಹ್ಮಕೋಶಂಭಿನ್ದತಃ ಪರಮಾಕಾಶಮತ್ರಹಿಸೌರ ಸೌಮಾಗ್ನೇಯ ಸಾತ್ತ್ವಿಕಾನಿಮಂಡಲಾನಿಭಿತ್ವಾತತಃ ಶುದ್ಧಃ ಸತ್ವಾಂತರಸ್ಥಮಚಲ ಮಮೃತಮಚ್ಯುತಂಧ್ರುವಂವಿಷ್ಣುಸಂಜ್ಞಿತಂ ಸರ್ವಾಪರಂಧಾಮ ಸತ್ಯಕಾಮಸರ್ವಜ್ಞತ್ವಸಂ ಯುಕ್ತಂ ಸ್ವತಂತ್ರಂ ಚೈತನ್ಯಂ ಸ್ವೇಮಹಿಮ್ನಿತಿಷ್ಠಮಾನಂ ಪಶ್ಯತಿ । ಅತ್ರೋ

ದಾಹನ್ನಿ—ರವಿಮಧ್ಯೇಸ್ಥಿತಃ ಸೋಮಃ ಸೋಮಮಧ್ಯೇಹುತಾಶನಃ । ತೇಜೋಮಧ್ಯೇಸ್ಥಿತಂಸತ್ತ್ವಂ ಸತ್ತ್ವಮಧ್ಯೇಸ್ಥಿತೋಽಚ್ಯುತಃ । ಶರೀರಪ್ರಾದೇಶಾಂಗುಷ್ಠಮಾತ್ರಮಣೋರಪ್ಯಣುಂ ಧ್ಯಾತ್ವಾಽತಃ ಪರಮತಾಂಗಚ್ಛತಿ । ಅತ್ರಹಿ ಸರ್ವೇಕಾಮಾಃ ಸಮಾಹಿತಾಇತಿ । ಅತ್ರೋದಾಹರಸ್ತಿ ಅಂಗುಷ್ಠ ಪ್ರಾದೇಶ ಶರೀರಮಾತ್ರಂ ಪ್ರದೀಪ ಪ್ರತಾಪವದ್ದ್ವಿಸ್ತ್ರಿಧಾಹಿ । ತದ್ ಬ್ರಹ್ಮಾಭಿಷ್ಟೂಯಮಾನಾಂ ಮಹೋದೇವೋಭುವನಾನ್ಯಾವಿವೇಶ ॥ ಓಂನಮೋಬ್ರಹ್ಮಣೇ ನಮಃ ॥೩೮॥

ಯಾರು ಅಗ್ನಿಹೋತ್ರವನ್ನು ಆಚರಿಸುತ್ತಾರೋ ಅವರು ಲೋಭಮೋಹ ಜಾಲವನ್ನು ಹರಿದುಹಾಕುತ್ತಾರೆ. ಹಾಗೆಯೇ ಅವರು ಸಮ್ಮೋಹವೆಂಬುದನ್ನೂ ಕಿತ್ತುಹಾಕಿ ಕೋಪಗ್ರಸ್ತರಾಗುವುದಿಲ್ಲ. ಕಾಮದ ವಿರುದ್ಧವಾಗಿ ಅಭಿಧ್ಯಾನಮಾಡುವುದರಿಂದ ಬ್ರಹ್ಮಕೋಶದ ಚತುರ್ಜಾಲಗಳನ್ನು ಕಿತ್ತೆಸೆಯುತ್ತಾರೆ. ಅಲ್ಲಿಂದ ಪರಮಾಕಾಶಕ್ಕೆ ಹೊರಡುತ್ತಾರೆ. ಅಲ್ಲಿ ಅವರು ಸೌರವ್ಯೂಹವನ್ನೂ, ಚಂದ್ರವ್ಯೂಹವನ್ನೂ, ಅಗ್ನಿ ಮಂಡಲವನ್ನೂ, ಸಾತ್ವಿಕಮಂಡಲವನ್ನೂ ಭೇದಿಸಿ ಅದರಿಂದ ಪರಿಶುದ್ಧರಾಗಿ ಸತ್ವದಲ್ಲಿ, ಅಚಲದಲ್ಲಿ, ಅಮೃತದಲ್ಲಿ, ಅಚ್ಯುತದಲ್ಲಿ, ಧ್ರುವದಲ್ಲಿ, ವಿಷ್ಣುಸಂಜ್ಞಿತದಲ್ಲಿ, ಸರ್ವಪರಂಧಾಮದಲ್ಲಿ, ಸತ್ಯಕಾಮನಲ್ಲಿ, ಸರ್ವಜ್ಞತ್ವನಲ್ಲಿ, ಸಂಯುಕ್ತನೂ, ಚೈತನ್ಯನೂ ಆದವನಲ್ಲಿ, ಅಡಗಿರುವ ಜ್ಞಾನಜ್ಯೋತಿಯನ್ನು ಅರಿತುಕೊಂಡು ಸಂತೃಪ್ತಿ ಪಡುತ್ತಾನೆ. ಅದಕ್ಕೆ ಉದಾಹರಣೆ ಸೂರ್ಯನ ಮಧ್ಯದಲ್ಲಿ ಚಂದ್ರನು ನಿಂತಿದ್ದಾನೆ; ಚಂದ್ರನಮಧ್ಯದಲ್ಲಿ ಅಗ್ನಿಯು ನಿಂತಿದ್ದಾನೆ; ಅಗ್ನಿಯ ಮಧ್ಯದಲ್ಲಿ ಸತ್ವವು ನಿಂತಿದೆ; ಸತ್ವದ ಮಧ್ಯದಲ್ಲಿ ಅಚ್ಯುತನು ನಿಂತಿದ್ದಾನೆ, ನಮ್ಮ ದೇಹದ ಹೃದಯಮಂಡಲದಲ್ಲಿ ವಾಸವಾಗಿರುವ ಒಂದು ಅಂಗುಷ್ಠಮಾತ್ರವಿರುವ ಆ ಪರಮಾತ್ಮನನ್ನು ಆರಾಧಿಸಬೇಕು. ಅವನು ಅಣುವಿಗಿಂತ ಅಣುವಾಗಿರುತ್ತಾನೆ. ಇಂತಹವರಿಗೆ ಪರಮಗತಿ ಯುಂಟಾಗುತ್ತದೆ. ಅಲ್ಲಿ ಎಲ್ಲಾ ಕಾಮಗಳೂ ಸಮಾಹಿತವಾಗಿವೆ. ಇದರ ಮೇಲೆ ಹೀಗೆ ಹೇಳುತ್ತಾರೆ. ಅಂಗುಷ್ಠಮಾತ್ರದ ಆಕೃತಿಯ ಪ್ರಮಾಣವುಳ್ಳ ಈ ದೇಹವೆಂಬ ಆವರಣದಲ್ಲಿ ಒಂದು ದೀಪದ ಜ್ವಾಲೆಯಂತೆ ಎರಡು ಅಥವಾ ಮೂರು ಪಟ್ಟು ತೇಜಸ್ಸಿನಿಂದ ಬೆಳಗುತ್ತ ವಾಸಿಸುತ್ತಿರುವ ಎಲ್ಲರಿಂದಲೂ ಸ್ತುತಿಸಲ್ಪಡುತ್ತಿರುವ ಆ ಮಹಾದೇವನು ಅನೇಕ ರೂಪಗಳಿಂದ ಎಲ್ಲೆಲ್ಲಿಯೂ ತುಂಬಿದ್ದಾನೆ. ಓಂ ಬ್ರಹ್ಮನೇ ನಿನಗೆ ನಮಸ್ಕಾರಗಳು. ನಿನಗೆ ನಮಸ್ಕಾರಗಳು.

# ಏಳನೆಯ ಅಧ್ಯಾಯ

ಅಗ್ನಿರ್ಗಾಯತ್ರಂ ತ್ರಿವೃದ್ರಥನ್ತರಂ ವಸನ್ತಃ ಪ್ರಾಣೋನಕ್ಷತ್ರಾಣಿವಸವಃ ಪುರಸ್ತಾದುದ್ಯನ್ತಿ । ತಪನ್ತಿವರ್ಷನ್ತಿಸ್ತುವನ್ತಿ ಪುನರ್ವಿಶನ್ತಿ ಅಂತರ್ವಿವರಣೇಕ್ಷನ್ತಿ । ಅಚಿಂತ್ಯೋಽಮೂರ್ತೋ ಗಭೀರೋಗುಪ್ತೋ ಅನವದ್ಯೋ ಘನೋ ಗಹನೋನಿರ್ಗುಣಃ ಶುದ್ಧೋ ಭಾಸ್ವರೋಗುಣ ಭಗಭಯೋಽನಿರ್ವೃತ್ತಿಯೋಗೀಶ್ವರಃ ಸರ್ವಜ್ಞೋಽನಘೋಽಪ್ರಮೇಯೋಽನಾದ್ಯನ್ತಃ ಶ್ರೀಮಾನಜೋ ಧೀಮಾನ ನಿರ್ದೇಶ್ಯಃ ಸರ್ವಸೃಕ್ಸರ್ವಾಸ್ಯಾಽಽತ್ಮಾ ಸರ್ವಭುಕ್ ಸರ್ವಶ್ಯೇಶಾನಃ ಸರ್ವಸ್ಯಾಽನ್ತರಾನ್ತರಃ ॥೧॥

ಅಗ್ನಿ, ಗಾಯತ್ರಿ, ತ್ರಿವರ್ತಧ್ಯಾನ, ರಥಾಂತರಮಂತ್ರ, ವಸಂತಕಾಲ, ಊರ್ಧ್ವಪ್ರಾಣ, ನಕ್ಷತ್ರಗಳು, ವಸುಗಳು, ಇವುಗಳು ಪೂರ್ವದಿಕ್ಕಿನಲ್ಲಿ ಉದಯಿಸುತ್ತವೆ. ಅವು ತಾಪವನ್ನೂ, ಮಳೆಯನ್ನೂ ಕೊಡುತ್ತವೆ. ಅವು ಸ್ತುತಿಸುತ್ತವೆ. ಅವು ಒಂದು ದ್ವಾರದಿಂದ ಒಳಹೊಕ್ಕು ಇನ್ನೊಂದು ದ್ವಾರದಿಂದ ನೋಡುತ್ತವೆ. ಅವು ಅಚಿಂತ್ಯವೂ, ನಿರಾಕಾರವೂ, ಆಳದಲ್ಲಿ ಅಡಗಿರುವುದೂ, ದೂರಿಲ್ಲದುವೂ, ಘನವೂ, ನಿರ್ಗುಣವೂ, ಶುದ್ಧವೂ, ಭಾಸ್ವರವೂ, ಮೂರು ಗುಣಗಳ ಅನುಭವವುಳ್ಳದ್ದೂ, ಭೀತವೂ, ಭೂತವೂ, ಯೋಗೀಶ್ವರವೂ, ಸರ್ವಜ್ಞನೂ, ಅನಘನೂ, ಅಪ್ರಮೇಯನೂ, ಅನಾದ್ಯಂತನೂ, ಶ್ರೀಮಂತನೂ, ಅವಿಜಾತನೂ, ಅನಿರ್ದೇಶ್ಯನೂ, ಸರ್ವಸೃಷ್ಟಿಕರ್ತನೂ, ಸರ್ವಸ್ವನೂ, ಸರ್ವಾತ್ಮನೂ, ಸರ್ವಾನುಭವಿಯೂ, ಸರ್ವೇಶ್ವರನೂ ಆಗಿದ್ದು, ಸರ್ವಾಂತರ್ಯಾಮಿಯಾಗಿರುತ್ತಾನೆ.

ಇಂದ್ರಸ್ತ್ರಿಷ್ಟುಪ್ ಪಂಚದಶೋ ಬೃಹದ್ಗ್ರೀಷ್ಮೋವ್ಯಾನಃ ಸೋಮೋರುದ್ರಾ ದಕ್ಷಿಣತ ಉದ್ಯನ್ತಿ । ತಪನ್ತಿವರ್ಷನ್ತಿಸ್ತುವನ್ತಿಪುನರ್ವಿಶನ್ತ್ಯನ್ತರ್ವಿವರಣೇಕ್ಷನ್ತಿ । ಅನಾದ್ಯನ್ತೋಽ ಪರಿಮಿತೋಽ ಪರಿಚ್ಛಿನ್ನೋಽಪರಪ್ರಯೋಜ್ಯಃ ಸ್ವತಂತ್ರೋಽಲಿಂಗೋಽಮೂರ್ತೋಽನನ್ತಶಕ್ತಿರ್ಧಾತಾಭಾಸ್ಕರಃ ॥೨॥

ಇಂದ್ರ, ತ್ರಿಷ್ಟುಪ್‌ಛಂದಸ್ಸು, ಪಂಚದಶಸ್ತೋತ್ರಗಳು, ಬೃಹನ್ಮಂತ್ರ, ಬೇಸಿಗೆಯ ಕಾಲ, ವ್ಯಾನಪ್ರಾಣ, ಚಂದ್ರ, ರುದ್ರಾದಿದೇವತೆಗಳು ದಕ್ಷಿಣದಲ್ಲಿ ಹುಟ್ಟುತ್ತವೆ. ಅವೂ ಶಾಖವನ್ನು ಕೊಡುತ್ತವೆ, ಮಳೆಯನ್ನು ಸುರಿಸುತ್ತವೆ, ಸ್ತುತಿಸುತ್ತವೆ. ಅವು ಒಳಗಿನಿಂದ ಪ್ರವೇಶಿಸಿ ಇನ್ನೊಂದು ದ್ವಾರದಿಂದ ನೋಡುತ್ತವೆ. ಅವನು ಅನಾದಿಯೂ, ಅನಂತನೂ, ಅಪರಿಮಿತನೂ, ಅಪರಿಚ್ಛಿನ್ನನೂ, ಸ್ವತಂತ್ರನೂ,

ಲಿಂಗಭೇದಯಿಲ್ಲದವನೂ, ರೂಪವಿಲ್ಲದವನೂ, ಅನಂತಶಕ್ತಿಯುಳ್ಳವನೂ, ಆಗಿದ್ದು ಬೆಳಕನ್ನು ಉಂಟುಮಾಡುವ ಭಾಸ್ಕರನಾಗಿದ್ದಾನೆ.

ಮರುತೋ ಜಗತೀ ಸಪ್ತದಶೋ ವೈರೂಪಂ ವರ್ಷಾಅಪಾನಃ ಶುಕ್ರ ಆದಿತ್ಯಾಃ ಪಶ್ಚಾದುದ್ಯನ್ತಿ । ತಪನ್ತಿ, ವರ್ಷನ್ತಿಸ್ತುವನ್ತಿಪುನರ್ವಿಶನ್ತ್ಯನ್ತರ್ವಿವರಣೇಕ್ಷನ್ತಿ । ತಚ್ಛಾನ್ತಮಶಬ್ದಮಭಯ ಮಶೋಕಮಾನನ್ದಂ ತೃಪ್ತಾಂಸ್ಥಿರಂ ಅಚಲಮಮೃತ ಮಚ್ಯುತಂ ಧ್ರುವಂ ವಿಷ್ಣುಸಂಜ್ಞಿತಂ ಸರ್ವಾಪರಂಧಾಮ ॥೩॥

ಮರುತ್ತುಗಳು, ಜಗತೀಛಂದಸ್ಸು, ಸಪ್ತದಶಸ್ತೋತ್ರಗಳು, ವಿರೂಪ ಮಂತ್ರಗಳು, ಮಳೆಗಾಲ, ಅಪಾನಪ್ರಾಣ, ಗ್ರಹಗಳು, ಶುಕ್ರನು ಆದಿತ್ಯದೇವತೆಗಳು ಇವು ಪಶ್ಚಿಮದಲ್ಲಿ ಉದ್ಭವಿಸುತ್ತವೆ. ಅವೂ ತಾಪವನ್ನು ಕೊಡುತ್ತವೆ, ಮಳೆಯನ್ನು ಸುರಿಸುತ್ತವೆ. ಹೊಗಳುತ್ತವೆ. ಅವೂ ಪುನಃ ಒಳಗಿನಿಂದ ಪ್ರವೇಶಿಸಿ ಬೇರೊಂದುದ್ವಾರದಿಂದ ನೋಡುತ್ತವೆ. ಅದು ಶಾನ್ತವೂ, ಶಬ್ದವಿಲ್ಲದ್ದೂ, ಭಯವಿಲ್ಲದ್ದೂ, ದುಃಖವಿಲ್ಲದ್ದೂ, ಆನಂದವಿಲ್ಲದ್ದೂ, ತೃಪ್ತಿಯುಳ್ಳದ್ದೂ, ಸ್ಥಿರವುಳ್ಳದ್ದೂ, ಚಲಿಸದಿರುವುದೂ. ಅಮೃತವೂ, ಅಚ್ಯುತವೂ, ಧ್ರುವವೂ, ವಿಷ್ಣುಸಂಜ್ಞಿತವೂ ಆಗಿದ್ದು ಸರ್ವಪರಂಧಾಮವಾಗಿದೆ.

ವಿಶ್ವೇದೇವಾಅನುಷ್ಟುವೇಕಾವಿಂಶೋವೈರಾಜಃ ಶರತ್ಸಮಾನೋವರುಣಃ ಸಾಧ್ಯಾ ಉತ್ತರತ ಉದ್ಯನ್ತಿ । ತಪನ್ತಿ, ವರ್ಷನ್ತಿ, ಸ್ತುವನ್ತಿ, ಪುನರ್ವಿಶನ್ತ್ಯನ್ತರ್ವಿವರೇಕ್ಷನ್ತಿ । ಅತಃ ಶುದ್ಧಃ ಪೂತಃ ಶೂನ್ಯಃ ಶಾನ್ತೋಽಪ್ರಾಣೋನಿರಾತ್ಮಾಽನನ್ತಃ ॥೪॥

ವಿಶ್ವೇದೇವರು, ಅನುಷ್ಟುಪ್‌ಛಂದಸ್ಸು, ಏಕವಿಂಶಸ್ತೋತ್ರಗಳು, ವೈರಾಜಮಂತ್ರ, ಸಮಾನಪ್ರಾಣ, ವರುಣ, ಸಾಧ್ಯಾದಿದೇವತೆಗಳು ಇವು ಉತ್ತರದಿಕ್ಕಿನಲ್ಲಿ ಜನಿಸುತ್ತವೆ. ಅವು ತಾಪವನ್ನು ಕೊಡುತ್ತವೆ, ಮಳೆಯನ್ನು ಸುರಿಸುತ್ತವೆ, ಸ್ತುತಿಸುತ್ತವೆ. ಪುನಃ ಅವು ಒಳಗಡೆಗೆ ಪ್ರವೇಶಿಸಿ ಬೇರೊಂದು ದ್ವಾರದ ಮೂಲಕ ಹೊರಗೆ ನೋಡುತ್ತವೆ. ಅವನು ಶುದ್ಧನು, ಪೂತನು, ಶೂನ್ಯನು, ಶಾಂತನು, ಪ್ರಾಣವಿಲ್ಲದವನು, ನಿರಾತ್ಮನು ಮತ್ತು ಅನಂತನು.

ಮಿತ್ರಾವರುಣೌಪಂಙ್ಕ್ತಿಸ್ತ್ರಿಣವತ್ರಯಸ್ತ್ರಿಂಶೌಶಾಕ್ವರರೈವತೇ ಹೇಮನ್ತಶಿಶಿರಾಉದಾನೋಽಂಗೀರಸಶ್ಚಂದ್ರಮಾ ಊರ್ಧ್ವಾ ಉದ್ಯನ್ತಿ । ತಪನ್ತಿವರ್ಷನ್ತಿ

ಸ್ತುವನ್ತಿ ಪುನರ್ವಿಶನ್ತ್ಯಸ್ತ್ರವಿವರೇಣೇಕ್ಷನ್ತಿ । ಪ್ರಣವಾಖ್ಯಂ ಪ್ರಣೇತಾರಂ ಭಾರೂಪಂ ವಿಗತನಿದ್ರಂ ವಿಜರಂ ವಿಮೃತ್ಯುಂ ವಿಶೋಕಂ ||೫||

ಮಿತ್ರ ಮತ್ತು ವರುಣ, ಪಂಕ್ತಿಛಂದಸ್ಸು, ತ್ರಿಣವ ಮತ್ತು ಮುವ್ವತ್ತಮೂರು ಸ್ತೋತ್ರಗಳು, ಶಾಕ್ವರ ಮತ್ತು ರೈವತ ಮಂತ್ರಗಳು, ಹಿಮ ಮತ್ತು ಶಿಶಿರಋತು ಗಳು, ಉದಾನಪ್ರಾಣ ಅಂಗಿರಸ, ಚಂದ್ರ ಇವುಗಳು ಮೇಲಿನಿಂದ ಹುಟ್ಟುತ್ತವೆ. ಅವೂ ಶಾಖವನ್ನು ಕೊಡುತ್ತವೆ. ಮಳೆಯನ್ನು ಸುರಿಸುತ್ತದೆ, ಸ್ತುತಿಸುತ್ತದೆ. ಅವು ಪುನಃ ದೇಹದೊಳಗೆ ಪ್ರವೇಶಿಸಿ ಬೇರೊಂದು ದ್ವಾರದಿಂದ ಹೊರನೋಡುತ್ತದೆ. ಪ್ರಣವವೆಂದು ಕರೆಯಲ್ಪಡುವವನೂ ಪ್ರಣೇತಾರನೂ, ತೇಜೋರೂಪನೂ, ನಿದ್ರೆ ಯಿಲ್ಲದವನೂ, ವಿಜರನೂ, ಅಮೃತನೂ, ವಿಶೋಕನೂ, ಆಗಿರುತ್ತಾನೆ.

ಶನಿ ರಾಹು ಕೇತೂರಗರಕ್ಷೋ ಯಕ್ಷನರಾವಿಹಗಶರಭೇಭಾದಯೋಽಧಸ್ತಾದು ದ್ಯನ್ತಿ । ತಪನ್ತಿ ವರ್ಷನ್ತಿ ಸ್ತುವನ್ತಿ ಪುನರ್ವಿಶನ್ತ್ಯಸ್ತ್ರವಿವರೇಣೇಕ್ಷನ್ತಿ । ಯಃಪ್ರಾಜ್ಞೋಽವಿಧರಣಾಃ ಸರ್ವಾನ್ತರೋಽಕ್ಷರಃ ಶುದ್ಧಃ ಪೂತೋಭಾನ್ತಃ ಕ್ಷಾನ್ತಃ ಶಾನ್ತಃ ||೬||

ಶನಿ, ರಾಹು, ಕೇತು, ಸರ್ಪ, ರಾಕ್ಷಸರು, ಯಕ್ಷರು, ಮನುಷ್ಯರು, ಪಕ್ಷಿಗಳು, ಜಿಂಕೆ, ಆನೆ, ಮೊದಲಾದುವುಗಳು ಕೆಳಗಿನಿಂದ ಉದ್ಭವಿಸುತ್ತವೆ. ಅವೂ ಶಾಖವನ್ನು ಕೊಡುತ್ತವೆ, ಮಳೆಯನ್ನು ಸುರಿಸುತ್ತವೆ, ಸ್ತುತಿಸುತ್ತವೆ. ಅವು ಪುನಃ ದೇಹದ ಒಳಗಡೆ ಪ್ರವೇಶಿಸಿ ಬೇರೊಂದು ದ್ವಾರದಿಂದ ಹೊರ ನೋಡುತ್ತವೆ. ಯಾರು ಪ್ರಾಜ್ಞರೋ, ಅಧಿಕಾರಮಾಡುವರೋ, ಓಂಕಾರದ ಮಂಡಲದಲ್ಲಿರುವರೋ ಶುದ್ಧರೂ, ಪೂತರೂ, ಪ್ರಕಾಶಿನುವರೂ, ಶಾನ್ತರು, ದಾನ್ತರು, ಆಗಿರುವರೋ ಅವರಾಗಿರುತ್ತಾರೆ.

ಏಷಹಿಖಲ್ವಾತ್ಮಾಽನ್ತರ್ಹೃದಯೇಽಣೀಯಾನಿದ್ಧೋಽಗ್ನಿರಿವ ವಿಶ್ವರೂಪಃ । ಅಸ್ಯೈವಾನ್ನಮಿದಂಸರ್ವಂ । ಅಸ್ಮಿನ್ನೋತಾಇಮಾಃ ಪ್ರಜಾಃ । ಏಷಆತ್ಮಾಽಪಹತಪಾಪ್ಮಾವಿಜರೋವಿಮೃತ್ಯುರ್ವಿಂಶೋಕೋಽವಿಚಿಕಿತ್ಸೋಽವಿಪಾಶಃ ಸತ್ಯ ಸಂಕಲ್ಪಃ ಸತ್ಯಕಾಮಃ ಏಷಪರಮೇಶ್ವರಃ । ಏಷಭೂತಾಧಿಪತಿಃ । ಏಷಭೂತ ಪಾಲಃ । ಏಷಸೇತುರ್ವಿಧರಣಃ । ಏಷಹಿಖಲ್ವಾತ್ಮೇಶಾನಃಶಂಭು, ರ್ಭವೋ, ರುದ್ರಃ ಪ್ರಜಾಪತಿರ್ವಿಶ್ವಸೃಗ್ ಹಿರಣ್ಯಗರ್ಭಃ । ಸತ್ಯಂಪ್ರಾಣೋಹಂಸಃ ಶಾಸ್ತಾ

ಚ್ಯುತೋ ವಿಷ್ಣುರ್ನಾರಾಯಣಃ । ಯಶ್ಚೈಷೋ ಅಗ್ನಿಃ ಯಶ್ಚಾಯಂಹೃದ ಯೇಯಶ್ಚಾಸಾವಾದಿತ್ಯೇಸಏಷ ಏಕಃ । ತಸ್ಮೈತೇವಿಶ್ವರೂಪಾಯ ಸತ್ಯೇನಭಸಿ ಹಿತಾಯನಮಃ ॥೭॥

ಅವನೇ ಹೃದಯಾಂತರ್ಗತವಾದ ಆತ್ಮ. ಅವನು ಬಹಳ ಸೂಕ್ಷ್ಮನೂ, ಅಗ್ನಿಯಂತೆ ಪ್ರಜ್ವಲಿಸುವವನೂ, ನಾನಾ ಆಕಾರಗಳನ್ನು ಹೊಂದಿರುವನೂ, ಆಗಿದ್ದು ಅವನಿಗೆ ಈ ಸರ್ವಸ್ವವೂ ಅನ್ನವಾಗಿದೆ. ಅವನಲ್ಲಿಯೇ ಸಮಸ್ತ ಜೀವರಾಶಿಗಳೂ ನೇಯಲ್ಪಟ್ಟಿವೆ. ಈ ಆತ್ಮನು ಎಲ್ಲ ಪಾಪಗಳಿಂದಲೂ ವಿಮುಕ್ತಿಪಡೆದವನಾಗಿದ್ದಾನೆ. ಅವನು ಅಜರನೂ, ಅಮೃತನೂ, ಶಂಕೆಯಿಲ್ಲದವನೂ, ಚಿಕಿತ್ಸೆಯಿಲ್ಲದವನೂ, ಕಟ್ಟುಪಾಡಿಲ್ಲದಿರುವನೂ, ಸತ್ಯ ಮತ್ತು ಸತ್ಯಸಂಕಲ್ಪವುಳ್ಳವನೂ, ಸತ್ಯಕಾಮನೂ, ಆಗಿದ್ದಾನೆ. ಇವನೇ ಪರಮೇಶ್ವರನು. ಇವನೇ ಸರ್ವಭೂತಗಳಿಗೂ ಅಧಿಪತಿ, ಇವನೇ ಸರ್ವ ಭೂತಗಳನ್ನೂ ಕಾಪಾಡುವವನು. ಅವನೇ ನಿರ್ಧರಿಸುವ ಸೇತುವೆ, ಈ ಆತ್ಮನೇ ಈಶಾನನು, ಶಂಭುವು, ಈಗಿರುವವನು. ರುದ್ರನು, ಪ್ರಜಾಪತಿಯು ಪ್ರಪಂಚವನ್ನು ಅಡಗಿಸಿಕೊಂಡಿರುವ ಹಿರಣ್ಯಗರ್ಭನು, ಸತ್ಯನು, ಪ್ರಾಣನು, ಹಂಸನು, ಶಾಂತನು, ಅಚ್ಯುತನು, ವಿಷ್ಣು, ನಾರಾಯಣನೂ ಆಗಿರುತ್ತಾನೆ. ಯಾರು ಅಗ್ನಿಯೋ, ಯಾರು ಹೃದಯದಲ್ಲಿರುವರೋ, ಯಾರು ಆದಿತ್ಯನಲ್ಲಿರುವರೋ, ಅವರೆಲ್ಲಾ ಇವನೊಬ್ಬನೇ. ಈ ಅನೇಕ ರೂಪಗಳಾದ ವಿಶ್ವವನ್ನು ಆಕಾಶದಲ್ಲಿ ಅಡಗಿಸಿಟ್ಟುಕೊಂಡಿರುವ ಹೇ ಪರಮಾತ್ಮನೇ ನಿನಗೆ ನಮಸ್ಕಾರಗಳು.

ಅಥೇದಾನೀಂ ಜ್ಞಾನೋಪಸರ್ಗಾಃ – ರಾಜನ್ಮೋಹಜಾಲಸ್ಯೈಷವೈಯೋನಿರ್ಯದಸ್ವರ್ಗ್ಯೈಃ ಸಹಸ್ವರ್ಗ್ಯಸ್ಯ । ಏಷವಾಟ್ಯೇಪುರಸ್ತಾದುಕ್ತೇऽಪ್ಯಧಃ ಸ್ತಂಭೇ ನಾऽऽಸನ್ನಿಷ್ಯನ್ತಿ । ಅಥಯೇಚಾನ್ಯೇಹ ನಿತ್ಯಪ್ರಮುದಿತಾ ನಿತ್ಯಪ್ರಸವಿತಾ ನಿತ್ಯಯಾಚನಿಕಾ ನಿತ್ಯಂಶಿಲ್ಪೋಪಜೀವಿನಃ । ಅಥಯೇಚಾನ್ಯೇಹಪುರುಯಾಚಕಾಅಯಾಜ್ಯಯಾಜಕಾಃ ಶೂದ್ರಶಿಷ್ಯಾಃ ಶೂದ್ರಶ್ಚಶಾಸ್ತ್ರವಿದ್ವಾಂಸಃ । ಅಥಏಚಾನ್ಯೇಹಚ್ಚಾಟಜಟನಟಭಟ ಪ್ರವ್ರಾಜಿತ ರಂಗಾವತಾರಿಣೋ ರಾಜಕರ್ಮಣಿ ಪತಿತಾದಯಃ ಅಥಯೇಚಾನ್ಯೇಹ ಯಕ್ಷರಾಕ್ಷಸಭೂತಗಣ ಪಿಶಾಚೋರಗ ಗ್ರಹಾದೀನಾಮರ್ಥಂ ಪುರಸ್ಕೃತ್ಯಶಮಯಾಮಇತ್ಯೇವಂ ಬ್ರುವಾಣಾಂ । ಅಥಯೇಚಾನ್ಯೇಹವೃಥಾಕಷಾಯಕುಂಡಲೀನಃ ಕಾಪಾಲಿನಃ । ಅಥಯೇಚಾನ್ಯೇಹವೃಥಾತರ್ಕದೃಷ್ಟಾನ್ತಕುಹಕೇಂದ್ರಜಾಲೈಃ ವೈದಿಕೇಷು ಪರಿಸ್ಥಾತುಮಿಚ್ಛನ್ತಿ । ತೈಃ ಸಹನಸಂವಶೇತ್ । ಪ್ರಕಾಶಭೂತಾವೈತೇತಸ್ಕರಾಅಸ್ವರ್ಗ್ಯಾಃ ।

ಇತ್ಯೇವಂಹ್ಯಾಹ ನೈರಾತ್ಮ್ಯವಾದ ಕುಹಕೈರ್ಮಿಥ್ಯಾದೃಷ್ಟಾನ್ತಹೇತುಭಿಃ ।
ಭ್ರಾಮ್ಯಲ್ಲೋಕೋನಜಾನಾತಿ ವೇದವಿದ್ಯಾನ್ತರಂತುಯತ್ ॥೮॥

ಈಗ ಜ್ಞಾನೋಪದೇಶ ಅಡಚಣೆಗಳು-ಓ ರಾಜನೇ ಇದೆಲ್ಲವೂ ಒಂದು ಮೋಹ ಜಾಲದ ಮೂಲವಾಗಿದೆ. ಸ್ವರ್ಗದಲ್ಲಿ ವಾಸಿಸುವುದಕ್ಕೆ ಅರ್ಹರಾದ ಮತ್ತು ಅದಕ್ಕೆ ಅನರ್ಹರಾದವರು ಕಟ್ಟಿರುವ ಸಂಘವಾಗಿದೆ. ಅವರ ಮುಂದೆ ಒಂದು ಪೊದೆ ಇರುವುದು ವ್ಯಕ್ತವಾದರೂ ಅವರು ಅದರ ಒಂದು ಕೆಳಗಿನ ಗುಂಪನ್ನು ಆಶ್ರಯಿಸುತ್ತಾರೆ. ಮತ್ತೆ ಕೆಲವರಲ್ಲಿ ಯಾವಾಗಲೂ ಪರ್ವತಾರೋಹಿಗಳೂ, ಯಾವಾಗಲೂ ವಿದೇಶ ಸಂಚಾರಿಗಳೂ, ಯಾವಾಗಲೂ ಭಿಕ್ಷಾಟನೆ ಮಾಡುವವರೂ, ಯಾವಾಗಲೂ ಕೈಕಸಬಿನಿಂದ ಜೀವಿಸುವವರೂ ಮತ್ತು ಇತರರೂ ಇರುತ್ತಾರೆ. ಪಟ್ಟಣಗಳಲ್ಲಿ ಭಿಕ್ಷುಕರೂ, ಅಪಾತ್ರರಿಗೆ ದಾನ ಮಾಡುವವರೂ, ಶೂದ್ರರ ಸೇವೆ ಮಾಡುವವರೂ, ಶೂದ್ರರಾದರೂ ವೇದಾಧ್ಯಯನ ಮಾಡುವವರೂ ಇರುತ್ತಾರೆ. ಅಲ್ಲಿ ಕ್ರೂರಿಗಳೂ, ತಮ್ಮ ತಲೆಕೂದಲನ್ನು ಗಂಟು ಹಾಕಿಕೊಳ್ಳುವವರೂ, ನರ್ತನಕಾರರೂ, ಸಂಬಳ ಕಾರರೂ, ತಿರುಗಾಡುವ ವೈದ್ಯರೂ, ನಟನಕಾರರೂ, ದೊರೆಯ ಸೇವೆಯಿಂದ ಬಹಿಷ್ಕೃತರಾದವರೂ, ಮತ್ತೆ ಕೆಲವರೂ ಇರುತ್ತಾರೆ. ಕೆಲವರು ಹಣದ ಆಶೆಗೋಸ್ಕರ ತಾವು ಯಕ್ಷರು, ರಾಕ್ಷಸರು. ದೆವ್ವಗಳು, ಭೂತಗಳು, ಸರ್ಪ, ಮಾಯಾವಿಗಳು, ಯಕ್ಷಿಣಿಕಾರರು ಮುಂತಾದವರಿಂದ ಉಂಟಾಗುವ ಬಾಧೆಗಳನ್ನು ನಿವೃತ್ತಿಮಾಡುತ್ತೇವೆಂದು ಹೇಳಿಕೊಳ್ಳುವವರಿರುತ್ತಾರೆ. ಕೆಲವರು ನಟನೆಗೋಸ್ಕರ ಕಾವೀ ಬಟ್ಟೆಗಳನ್ನು ಧರಿಸುವವರೂ, ಕಿವಿಗಳಿಗೆ ಆಭರಣಗಳನ್ನೂ ಅನೇಕ ವಿಧವಾದ ಮೂಳೆಗಳನ್ನೂ ಧರಿಸುವವರಿದ್ದಾರೆ. ಕೆಲವರು ವೇದ ನಿರತರಾದವರನ್ನು ಅವರ ನಂಬಿಕೆಯಿಂದ ಹೊರದೂಡುವವರೂ, ಸುಳ್ಳು ವಾದ ವಿವಾದಗಳನ್ನು ಮಾಡುತ್ತ ಅಲ್ಲಸಲ್ಲದ ದೃಷ್ಟಾಂತಗಳನ್ನು ಕೊಡುತ್ತ ಇರುವ ಇಂತಹವರ ಸಂಗವನ್ನು ಯಾರೂ ಮಾಡಬಾರದು. ಇಂತಹವರು ಸಾಧಾರಣವಾಗಿ ಕಳ್ಳರೂ, ಸ್ವರ್ಗವಾಸಕ್ಕೆ ಅನರ್ಹರೂ ಆಗಿದ್ದಾರೆ. ಅದ್ದರಿಂದ ಹೀಗೆ ಹೇಳಲಾಗಿದೆ–ಸುಳ್ಳು ಉದಾಹರಣೆಗಳ ಮೂಲಕ ಮತ್ತು ದೃಷ್ಟಾಂತಗಳ ಮೂಲಕ ಆತ್ಮನ ಇರುವಿಕೆಯ ಮೇಲೆ ಮಾಡುವ ಮಿಥ್ಯಾರೋಪಗಳಿಂದ ಪ್ರಪಂಚವು ಡೋಲಾಯಮಾನವಾಗುತ್ತದೆಯಲ್ಲದೆ ವೇದ ವಿದ್ಯೆಗಳ ಪಾವಿತ್ರತೆಗೆ ಯಾವ ಭಂಗವನ್ನುಂಟುಮಾಡಲಾರದು.

ಬೃಹಸ್ಪತಿರ್ವೈಶುಕ್ರೋಭೂತ್ವೇಂದ್ರಸ್ಯಾಭಯಾಯಾಸುರೇಭ್ಯಃ ಕ್ಷಯಾಯೇಮಾಮವಿದ್ಯಾಮಸೃಜತ್ । ತಯಾಶಿವಮಶಿವಮಿತ್ಯುದ್ದಿಶಂತಿ । ಅಶಿವಂಶಿವ ಮಿತಿವೇದಾದಿಶಾಸ್ತ್ರಹಿಂಸಃಧರ್ಮಾಭಿಧ್ಯಾನ ಮಸ್ತ್ವಿತಿವದಂತಿ । ಅತೋನ್ಯೈನಾ

ಮುಪಧೀಯೇತ । ಅಸ್ಯೈಶ್ವರ್ಯಾಸಂಪ್ರಾಪ್ತ್ಯೈವೈಷಾಂತಿಮಾತ್ರಂ ಫಲಮಸ್ಯಾವೃತ್ತ
ಜ್ಯುತಸ್ಯೇವನಾಽಽರಂಭಣೀಯಾ । ಇತ್ಯೇವಂಹ್ಯಾಹ –
ದ್ವಾರಮೇತೇವಿಪರೀತೇವಿಷೂಚೀಅವಿದ್ಯಾಯಾಚವಿದ್ಯೇತಿಜ್ಞಾತಾ । ವಿದ್ಯಾಭೀ
ಪ್ಸಿತಂ ನಚಿಕೇತಸಂ ಮನ್ಯೇನತ್ವಾಕಾಮಾಬಹವೋಲೋಲುಪನ್ತೇ ॥
ವಿದ್ಯಾಂಚಾವಿದ್ಯಾಂಚ ಯಸ್ತದ್ವೇದೋಭಯಂಸಹ । ಅವಿದ್ಯಯಾಮೃತ್ಯುಂ
ತೀರ್ತ್ವಾವಿದ್ಯಯಾಮೃತಮಶ್ನುತೇ । ಅವಿದ್ಯಾಯಾಮಂತರೇವರ್ತಮಾನಾಃ
ಸ್ವಯಂಧೀರಾಃ । ಪಂಡಿತಂಮನ್ಯಮಾನಾಃ । ದಂದ್ರಮ್ಯಮಾಣಾಃ ಪರಿಯನ್ತಿ
ಮೂಢಾಅಂಧೇನೈವನೀಯಮಾನಾ ಯಥಾಂಧಾಃ ॥೯॥

ದೇವತೆಗಳ ಗುರುವಾದ ಬೃಹಸ್ಪತಿಯು ರಾಕ್ಷಸರ ಗುರುವಾದ ಶುಕ್ರಾಚಾರ್ಯರಾಗಿ ದೇವೇಂದ್ರನ ರಕ್ಷಣೆಗೂ, ರಾಕ್ಷಸರ ದಮನಕ್ಕಾಗಿಯೂ, ಅಜ್ಞಾನವನ್ನು ಸೃಷ್ಟಿಸಿದನು. ಇದರ ಮೂಲಕ ಪ್ರಶಸ್ತವಾದುದನ್ನು ಅಪ್ರಶಸ್ತವೆಂದೂ, ಅಪ್ರಶಸ್ತವನ್ನು ಪ್ರಶಸ್ತವೆಂದೂ ಹೇಳುತ್ತ ಬಂದರು. ವೇದೋಪನಿಷತ್ತುಗಳ ಉಪದೇಶವು ವಿನಾಶಕಾರಿ ಎಂದು ಸಾರುತ್ತ ಈ ಹೊಸ ತತ್ವಕ್ಕೆ ಎಲ್ಲರೂ ಗಮನ ಕೊಡಬೇಕೆಂದು ಸಾರುತ್ತ ಹೋದರು. ಯಾರೂ ಇಂತಹ ಶಿಕ್ಷಣಗಳಿಗೆ ಪ್ರೋತ್ಸಾಹ ಕೊಡಕೂಡದು, ಅವೆಲ್ಲವೂ ಶುದ್ಧ ಸುಳ್ಳು ಅವು ಬಂಜೆಯಾದ ಹೆಂಗಸಿನಂತೆ, ಹೀಗೆ ಮಾಡುವುದರಿಂದ ಇಹದಲ್ಲಿ ಸುಖೋಪಭೋಗಗಳನ್ನು ಹೊಂದಬಹುದು, ಇವುಗಳಿಂದ ವಂಚಿತರಾಗಿ ಪಾತಾಳಕ್ಕೆ ಬೀಳಬಾರದು ಎಂಬುದಾಗಿ ಪ್ರಚಾರ ಮಾಡುತ್ತ ಹೋದರು. ಇವೇ ಒಂದೊಂದಕ್ಕೂ ಭಿನ್ನವಾಗಿರುವ ಅಂಶಗಳೆಂದು ಹೇಳಲಾಗಿದೆ. ಇವೇ ಅವಿದ್ಯ ಮತ್ತು ವಿದ್ಯ ಎಂಬ ಎರಡು ತತ್ವಗಳು. ಯಮನು ಹೇಳುವ "ನಚಿಕೇತ ನೀನು ಈ ವಿದ್ಯೆಯನ್ನು ಅರಿತು ಕೊಂಡು ಬಹಳವಾದ ಕಾಮಗಳಿಂದ ಎಳೆಯಲ್ಪಡಲಿಲ್ಲ" ಎಂಬುದೇ ವಿದ್ಯೆ. ಯಾರು ವಿದ್ಯೆ ಮತ್ತು ಅವಿದ್ಯೆ ಎಂಬ ಎರಡರ ಪೈಕಿ ಅವಿದ್ಯೆಯು ಜನನ ಮರಣಕ್ಕೆ ದಾರಿ ಮಾಡಿಕೊಡುವುದೆಂದು ಅರಿತುಅದನ್ನು ದಾಟಿಕೊಂಡು ಅಮೃತತ್ವವನ್ನು ಪಡೆಯುವ ವಿದ್ಯೆಯನ್ನು ಅರಿಯುವವರೇ ಧನ್ಯರು. ಅವಿದ್ಯೆಯಿಂದ ಎಲ್ಲ ರೀತಿಯಲ್ಲೂ ಬಂಧಿಸಲ್ಪಟ್ಟವರು. ತಾವು ಮಹಾಜ್ಞಾನಿಗಳೆಂದೂ, ಬುದ್ಧಿವಂತರೆಂದೂ, ಭಾವಿಸಿಕೊಂಡು ತಿರುಗಾಡುತ್ತ ಕಷ್ಟಕಾರ್ಪಣ್ಯಗಳನ್ನೂ ಅನುಭವಿಸುತ್ತ ಕುರುಡನು ಇನ್ನೊಬ್ಬ ಕುರುಡನನ್ನು ಹಿಂಬಾಲಿಸುವಂತೆ ತೊಳಲಾಡುತ್ತಾರೆ.

ದೇವಾಸುರಾಹವೈಯ . ಆತ್ಮಕಾಮಾಬ್ರಹ್ಮಣೋಽನ್ತಿಕಂಪ್ರಯಾತಾಸ್ತಸ್ಮೈ
ನಮಸ್ಕೃತ್ವೋಚುಃ । ಭಗವನ್ವಯಮಾತ್ಮಕಾಮಾಃ । ಸತ್ವಂನೋಬ್ರೂಹಿ ।

ಇತ್ಯತಶ್ಛಿರಂಧ್ಯಾತ್ವಾಽಮನ್ಯತ | ಅನ್ಯತಾತ್ಮಾನೋಽಪ್ಯೈತೇಽಸುರಾಃ | ಅತೋ ಅನ್ಯತಮಮೇತೇಷಾಮುಕ್ತಂ | ತದಿಮೇಮೂಢಾ ಉಪಜೀವನ್ತ್ಯಭಿಷ್ಟಂಗಿಣ ಸ್ತ್ವಯಾಭಿಘಾತಿನೋಽನೃತಾಭಿಶಂಸಿನಃ | ಸತ್ಯಮಿವಾನೃತಂ ಪಶ್ಯನ್ತಿ ಇಂದ್ರ ಜಾಲವದಿತಿ | ಅತೋಽಯದ್ವೇದೇಷ್ವಭಿಹಿತಂ ತತ್ಸತ್ಯಂ | ಯದ್ವೇದೇಷೂಕ್ತಂ ತದ್ವಿದ್ವಾಂಸ ಉಪಜೀವನ್ತಿ ತಸ್ಮಾದ್ಬ್ರಹ್ಮಣೋನಾವೈದಿಕಮಧೀಯೀತ | ಅಯ ಮರ್ಥ್ಯಃ ಸಾದಿತಿ ||೧೦||

ದೇವತೆಗಳೂ ರಾಕ್ಷಸರೂ ಆತ್ಮನನ್ನು ತಿಳಿದುಕೊಳ್ಳುವ ಉದ್ದಿಶ್ಯದಿಂದ ಬ್ರಹ್ಮನ ಬಳಿಗೆ ಹೋದರು. ಅಲ್ಲಿ ಅವರು ಬ್ರಹ್ಮನಿಗೆ ವಂದಿಸಿ "ಮಹಾತ್ಮಾ ನಾವು ಆತ್ಮನ ವಿಚಾರವನ್ನು ಅರಿಯಲು ಕುತೂಹಲದಿಂದಿದ್ದೇವೆ. ನಮಗೆ ಅದನ್ನು ತಿಳಿಸಿರಿ" ಎಂದರು. ಆಗ ಬ್ರಹ್ಮನು ದೀರ್ಘಾಲೋಚನೆ ಮಾಡಿ ಈ ರಾಕ್ಷಸರು ಆತ್ಮನ ವಿಚಾರ ದಲ್ಲಿ ನೈಜವಾಗಿರುವುದಕ್ಕಿಂತ ಬೇರೆಯಾದ ರೀತಿ ಅರಿತುಕೊಳ್ಳಲು ಕಾತುರರಾಗಿದ್ದಾ ರೆಂದು ಊಹಿಸಿ ಆ ಬೇರೆಯಾದ ತತ್ವವನ್ನು ಬೋಧಿಸಿದನು. ಅದರ ಪ್ರಕಾರ ರಾಕ್ಷಸರು ತಮ್ಮ ಸಂಸಾರಗಳಲ್ಲಿ ಅತ್ಯಾಸಕ್ತಿಯನ್ನು ತೋರುತ್ತ ಮುಕ್ತಿ ಮಾರ್ಗ ಗಳನ್ನು ಕತ್ತರಿಸುತ್ತ, ಸುಳ್ಳನ್ನೇ ಸ್ತೋತ್ರ ಮಾಡುತ್ತ ಜೀವಿಸಲಾರಂಭಿಸಿದರು. ಅವರು ಅನೈಜವಾದುದನ್ನು ನೈಜವೆಂದು ತಿಳಿಯುತ್ತಿದ್ದರು (ಇಂದ್ರಜಾಲದಂತೆ) ಆದ್ದರಿಂದ ಯಾವುದು ವೇದಗಳಲ್ಲಿ ತಿಳಿಸಲಾಗಿದೆಯೋ ಅದೇ ಸತ್ಯ ಮತ್ತು ಸತ್ಯ ವನ್ನೇ ವೇದವು ಸಾರುತ್ತದೆ. ಅದರಂತೆಯೇ ಜ್ಞಾನಿಗಳು ಜೀವಿಸುತ್ತಾರೆ. ಆದ್ದ ರಿಂದ ಬ್ರಾಹ್ಮಣರು ವೇದವಲ್ಲದ್ದನ್ನು ಕಲಿಯಬಾರದು. ಇದೇ ಅವರ ಧ್ಯೇಯ ವಾಗಿರಬೇಕು.

ಏತದ್ವಾವತತ್ಸ್ವರೂಪಂ ನಭಸಃ ಖೇಽನ್ತರ್ಭೂತಸ್ಯಯತ್ಪರಂ ತೇಜಃ ತತ್ತ್ರೇ ಧಾಽಭಿಹಿತಮಗ್ನಾ ಆದಿತ್ಯೇಪ್ರಾಣೋ | ಏತದ್ವಾವ ತತ್ಸ್ವರೂಪಂ ನಭಸಃ ಖೇನ್ತರ್ಭೂತಸ್ಯಯದೋಮಿತ್ಯೇತದಕ್ಷರಂ | ಅನೇನೈವತದುದ್ಬುಧ್ಯತ್ಯುದಯ ತ್ಯುಚ್ಛ್ವಸಿತಿ | ಅಜಸ್ರಂ ಬ್ರಹ್ಮಧೀಯಾಲಭಂ ವಾಽತ್ರೈವ | ಏತತ್ಸಮೀರ ಣೇಪ್ರಕಾಶಪಕ್ಷೇಪಕೌಷ್ಣ್ಯ ಸ್ಥಾನೀಯಮೇತದ್ಧೂಮಸ್ಯೇವಸಮೀರಣೇನಭಸಿ ಪ್ರಶಾಖಯೈವೋತ್ಕ್ರಮಸ್ಕಂದಾತ್ ಸ್ಕಂದಮನುಸರತಿ | ಅಪ್ಸುಪ್ರಕ್ಷೇಪಕೋ ಲವಣಸ್ಯೇವ | ಘೃತಸ್ಯಚೌಷ್ಣ್ಯಮಿವ ಅಭಿಧ್ಯಾತುರ್ವಿಸ್ತೃತೀರಿವ | ಏತದಿತ್ಯ ತ್ರೋದಾಹರನ್ತಿ | ಅಥಕಸ್ಮಾದುಚ್ಯತೇ ವೈದ್ಯುತಃ | ಯಸ್ಮಾದುಚ್ಚಾರಿತ

ಮಾತ್ರಯೇವಸರ್ವಂ ಶರೀರಂ ವಿಪ್ಯೋತಇತಿ । ತಸ್ಮಾದೋಮಿತ್ಯನೇನೈತದು ಪಾಸೀತಾಪರಿಮಿತಂ ತೇಜಃ ॥

ಪುರುಷಶ್ಚಾಕ್ಷುಷೋಯೋಽಯಂದಕ್ಷಿಣೇಽಕ್ಷಿಣ್ಯವಸ್ಥಿತಃ ।
ಇಂದ್ರೋಽಯಮಸ್ಯಜಾಯೇಯಂ ಸವ್ಯೇಚಾಕ್ಷಿಣ್ಯವಸ್ಥಿತಾ ॥
ಸಮಾಗಮಸ್ತಯೋರೇವ ಹೃದಯಾಂತರ್ಗತೇ ಸಕ್ಷೌ ।
ತೇಜಸ್ತಲ್ಲೋಹಿತಸ್ಯಾತ್ರಪಿಂಡ ಏವೋಭಯಸ್ತಯೋಃ ॥
ಹೃದಯಾದಾಯತಾ ನಾಪಚ್ಚಕ್ಷುಷ್ಯಾಸ್ಮಿನ್ ಪ್ರತಿಷ್ಠಿತಾ ।
ಸಾರಣೀಸಾತಯೋರ್ನಾಡೀ ದ್ವಯೋರೇಕಾದ್ವಿಧಾಸತೀ ॥
ಮನಃಕಾಯಾಗ್ನಿಮಾಹಂತ್ತಿ ಸಪ್ರೇರಯತಿ ಮಾರುತಂ ।
ಮಾರುತಸ್ತೂರಸಿಚರ್ರ ಮಂದ್ರಂ ಜನಯತಿಸ್ವರಂ ।
ಖಜಾಗ್ನಿಯೋಗಾದ್ ಧೃದಿ ಸಂಪ್ರಯುಕ್ತ ಮಣೋರ್ಹ್ಯಾಣುದ್ವಿರಣೆಃ ಕಂಠ ದೇಶೇ । ಜಿಹ್ವಾಗ್ರದೇಶೇತ್ರ್ಯಣುಕಂಚವಿದ್ಧಿ ವಿನಿರ್ಗತಂ ಮಾತೃಕಮೇವ ಮಾಹುಃ ॥
ನಪಶ್ಯಂ ಮೃತ್ಯುಂ ಪಶ್ಯತಿ ನರೋಗಂ ನೋತದುಃಖತಾಂ ।
ಸರ್ವಂ ಹಿ ಪಶ್ಯಃ ಪಶ್ಯತಿ ಸರ್ವಮಾಪ್ನೋತಿ ಸರ್ವಶಃ ॥
ಚಾಕ್ಷುಷಃ ಸ್ವಪ್ನಚಾರೀಚ ಸುಪ್ತಃ ಸುಪ್ತಾತ್ಪರಶ್ಚಯಃ ।
ಭೇದಾಶ್ಚೈತೇ ಽಸ್ಯಚತ್ವಾರಸ್ತೇಭ್ಯಃ ಸ್ತುರ್ಯಂ ಮಹತ್ತರ ॥
ತ್ರಿಷ್ಟೇಕ ಪಾಂಚರೇದ್ಬ್ರಹ್ಮ ತ್ರಿಪಾಂಚರತಿ ಚೋತ್ತರೇ ।
ಸತ್ಯಾನೃತೋಪ ಭೋಗಾರ್ಥೋದ್ವೈತಿಭಾವೋ ಮಹಾತ್ಮನ ಇತಿ ॥
ದ್ವೈತಿಭಾವೋಮಹಾತ್ಮನ ಇತಿ ॥೧೧॥

ಹೃದಯಾಕಾಶದಲ್ಲಿ ಅಡಗಿರುವ ನಭಸ್ವರೂಪವು ಆದಿತ್ಯನ ತೇಜಸ್ಸಿನಂತೆಯೇ ಇರುತ್ತದೆ. ಈ ತೇಜಸ್ಸು ಮೂರು ವಿಭಾಗಗಳಾಗಿ ಅಗ್ನಿಯಲ್ಲಿಯೂ, ಸೂರ್ಯ ನಲ್ಲಿಯೂ, ಪ್ರಾಣನಲ್ಲಿಯೂ ಹಂಚಿಕೆಯಾಗಿದೆ. ಹೀಗೆಯೇ ಹೃದಯದಲ್ಲಿ ಅಡಗಿ ರುವ ಆಕಾಶದ ಪ್ರತಿರೂಪವೇ ಓಂಕಾರದಲ್ಲಿಯೂ ಅಡಗಿರುತ್ತದೆ. ಈ ಓಂಕಾರ ದಿಂದಲೇ ಆ ಜ್ಯೋತಿಯು ಹೃದಯಾಂತರಾಳದಿಂದ ಮೇಲೆದ್ದು ಪ್ರಾಣದ ಕಡೆಗೆ ಏರಿ ಹೋಗುತ್ತದೆ. ಆಮೇಲೆ ಅದು ಬ್ರಹ್ಮೋಪಾಸನೆಗೆ ಆಧಾರವಾಗಿ ಶಾಶ್ವತ ವಾಗಿ ನಿಲ್ಲುತ್ತದೆ. ಉಸಿರಾಡುವಾಗ ಆ ದಿವ್ಯ ಜ್ಯೋತಿಯು ಹೃದಯದಲ್ಲಿ ಸ್ಥಾಪನೆ

ವಾಗಿರುತ್ತದೆ ಮತ್ತು ಬೆಳಗುತ್ತಲೂ ಇರುತ್ತದೆ. ಉಸಿರಾಡುವಾಗ ಅದು ಹೊಗೆ ಯಂತೆ ಕಾರ್ಯ ಮಾಡುತ್ತದೆ. ಉಸಿರಾಡುತ್ತಿರುವಾಗ ಹೊಗೆಯು ಆಕಾಶಕ್ಕೆ ಏರಿ ಬಂದ ತರುವಾಯ ಮತ್ತೊಂದು ಉಸಿರು ಹೊರಡುತ್ತಲೇ ಇರುತ್ತದೆ. ಇದು ಉಪ್ಪನ್ನು ನೀರಿಗೆ ಹಾಕಿದಂತೆ, ಕರಗಿದ ಬೆಣ್ಣೆಯಲ್ಲಿನ ಶಾಖದಂತೆ, ಅಭಿಧ್ಯಾತೃವಿನ ವಿಸ್ಮೃತಿಯಂತೆ, ಇರುತ್ತದೆ. ಇದರ ಮೇಲೆ ಹೀಗೆಂದು ಹೇಳುತ್ತಾರೆ-ಎಲ್ಲರೂ ಮಿಂಚುತ್ತದೆ ಎನ್ನುತ್ತಾರೆ ಏಕೆಂದರೆ ಉಸಿರಾಡದ ಕೂಡಲೇ ಅದು ದೇಹದಲ್ಲೆಲ್ಲಾ ಜ್ವಲಿಸುತ್ತದೆ. ಆದ್ದರಿಂದ ತಿಳಿದವರು ಜ್ಯೋತೀ ರೂಪವಾದ ಓಂಕಾರವನ್ನು ಉಪಾಸನೆ ಮಾಡಬೇಕು. ಕಣ್ಣಿನಲ್ಲಿರುವ ಮತ್ತು ಬಲಗಣ್ಣಿನಲ್ಲಿ ವ್ಯವಸ್ಥಿತನಾಗಿರುವ ಪುರುಷನು ಇಂದ್ರನಾಗಿದ್ದು ಎಡಗಣ್ಣಿನಲ್ಲಿ ಅವನ ಪತ್ನಿಯು ಸ್ಥಾಪಿತವಾಗಿದ್ದಾರೆ. ಇವರಿಬ್ಬರ ಸೇರುವಿಕೆಯು (ಸಮಾಗಮವು) ಹೃದಯಾಂತರ್ಗತ ಸ್ಥಳದಲ್ಲಿ ಮತ್ತು ಅವೆರಡರ ಪ್ರಾಣಾಧಾರವಾದ ಅನ್ನದ ಉಂಡೆ ಇರುವ ಹೃದಯದ ಸ್ಥಳವಾಗಿರು ತ್ತದೆ. ಈ ಹೃದಯದಿಂದ ಕಣ್ಣಿನವರೆಗೆ ಒಂದು ನಾಳವಿದ್ದು ಅದು ಅಲ್ಲೇ ಸ್ಥಿರ ಗೊಂಡಿರುತ್ತದೆ. ಆ ನಾಳವು ಒಂದೊಂದೂ ಎರಡು ಕವಲುಗಳಾಗಿ ಅವರಿಬ್ಬರನ್ನೂ ಸೇವಿಸುತ್ತದೆ. ಮನಸ್ಸು ದೇಹದಲ್ಲಿರುವ ಅಗ್ನಿಯನ್ನು ಚಲಿಸುವಂತೆ ಮಾಡುತ್ತದೆ. ತರುವಾಯ ಆ ಗಾಳಿಯು ಎದೆಯ ಮೂಲಕ ಚಲಿಸುತ್ತ ಕ್ಷೀಣವಾದ ಶಬ್ದವನ್ನು ಮಾಡುತ್ತದೆ. ಹೃದಯದಿಂದ ಉದ್ಭವವಾದ ಅದು ಯೋಗಾಗ್ನಿಯಿಂದ ಸಂಯೋಜಿಸಲ್ಪಟ್ಟು ಅಣುವಿಗಿಂತ ಅಣುವಾಗಿರುತ್ತದೆ. ಇದು ಗಂಟಲಿನಲ್ಲಿ ಎರಡ ರಷ್ಟು ಕಡಿಮೆಯ ಅಣುವಾಗಿ ನಾಲಿಗೆಯ ಕೊನೆಯಲ್ಲಿ ಮೂರರಷ್ಟಾಗಿ ಹೊರಗಡೆ ಬರುವಾಗ ಅಕ್ಷರವೆಂದು ಕರೆಯಲ್ಪಡುತ್ತದೆ. ನೋಟಕನು ಮೃತ್ಯುವನ್ನು ನೋಡ ಲಾಗುವುದಿಲ್ಲ. ಈತಿಬಾಧೆಗಳನ್ನೂ ನೋಡಲಾಗುವುದಿಲ್ಲ. ದುಃಖಾತಿರೇಕಗಳನ್ನೂ ನೋಡಲಾಗುವುದಿಲ್ಲ. ಅವನು ಎಲ್ಲವನ್ನೂ ನೋಡುತ್ತಾನೆ; ಎಲ್ಲವನ್ನೂ ಎಲ್ಲೆಲ್ಲೂ ಆಗುತ್ತಾನೆ. ಕಣ್ಣಿನಿಂದ ನೋಡುವವನು, ಸ್ವಪ್ನಲೋಕದಲ್ಲಿ ಚಲಿಸುವವನು, ನಿದ್ರಾವಸ್ಥೆಯಲ್ಲಿರುವವನು ಮತ್ತು ಯಾವನು ಕಣ್ಣಿನಿಂದ ನೋಡುತ್ತಾನೋ, ಸ್ವಪ್ನದಲ್ಲಿ ಚಲಿಸುತ್ತಾನೋ, ನಿದ್ರಾವಸ್ಥೆಯಲ್ಲಿರುತ್ತಾನೋ, ಯಾರು ನಿದ್ರಾವಸ್ಥೆ ಯಲ್ಲಿರುವವನಿಗೂ ಉನ್ನತವಾಗಿರುತ್ತಾನೋ ಅವನು ಚತುರ್ಗುಣಗಳಿಂದ ಕೂಡಿದ ಮಹತ್ಪುರುಷನಾಗಿರುತ್ತಾನೆ. ಬ್ರಹ್ಮನು ತನ್ನ ಕಾಲುಭಾಗದಿಂದ ಮುಕ್ಕಾಲು ಭಾಗದ ಕಡೆಗೆ ಚಲಿಸಿ ಆ ಮುಕ್ಕಾಲು ಭಾಗದಿಂದ ಕಡೆಯ ಭಾಗಕ್ಕೆ ಸತ್ಯ, ಅನೃತ ಗಳನ್ನು ಭೋಗಿಸುವುದಕ್ಕೆ ತೆರಳುತ್ತಾನೆ. ಆ ಮಹಾತ್ಮನಿಗೆ ಈ ಅದ್ವೈತ ಭಾಗವು ಹೊಂದಿರುತ್ತದೆ. ಆ ಮಹಾತ್ಮನೇ ಅದ್ವೈತವಾಗಿರುತ್ತಾನೆ.

ಓಂ ಆಪ್ಯಾಯನ್ತು ಮಮಾಂಗಾನಿವಾಕ್ ಪ್ರಾಣಶ್ಚಕ್ಷು
ಶ್ರೋತ್ರ ಮಥೋಬಲ ಮಿಂದ್ರಿಯಾಣಿಚ ಸರ್ವಾಣಿ
ಸರ್ವಂ ಬ್ರಹ್ಮೌಪನಿಷದಂ ಮಾಹಂ ಬ್ರಹ್ಮನಿರಾಕುರ್ಯಾಂ
ಮಾಮಾಬ್ರಹ್ಮನಿರಾಕರೋತ್ ಅನಿರಾಕರಣಮಸ್ತು
ಅ ನಿರಾಕರಣಂಮೇ ಅಸ್ತು ತದಾತ್ಮನಿನಿರತೇಯ
ಉಪನಿಷತ್ಸು ಧರ್ಮಾಸ್ತೇ ಮಯಿಸಂತುತೇಮಯಿಸಂತು

**ಸಂಪೂರ್ಣಂ**



# ಶುದ್ಧಾಶುದ್ಧ ಪರಿವಿಡಿ

| ಪುಟದ ಸಂಖ್ಯೆ | ಮಂತ್ರದ ಸಂಖ್ಯೆ | ಪಂಜ್ತಿಯ ಸಂಖ್ಯೆ | ಇರುವುದು | ಇರಬೇಕಾದ್ದು | ಹೊಸದಾಗಿ ಸೇರಿಸಿದ್ದು |
|---|---|---|---|---|---|
| ಪೀಠಿಕೆ | | 18 | ಬರ | ಬರೆ | |
| 16 | 17 | 5 | ಔಷಧಿ. | ಓಷಧಿ. | |
| 19 | 11 | 2 | ಸ್ಮಸ್ತ್ರಸ್ಮಾ | ಸ್ತ್ರ ಸ್ಮಾ | |
| 24 | 10 | 4 | ನಯ | ವಯ. | |
| ,, | ,, | 7 | ಆವನವನ | ಆವನ | |
| 25 | 15 | 15 | ಳಲ್ಲ | ಳಲ್ಲಿ | |
| 31 | 1 | 3 | ವೆಂಮ | ವೆಂಡು | |
| 31 | 3 | 4 | ಸೂಕ್ಷ್ಮತಿಃ | ಸೂಕ್ಷ್ಮೈಃ | |
| 34 | 13 | 1 | ಶ್ಪೇತ | ಶ್ಬೇತ | |
| 36 | 17 | 4 | ಏರು | ವಿರು | |
| 40 | 4 | 3 | ಏಕ್ಸೈ | ಏತ್ಸೈ | |
| 41 | 5 | 21 | ವಗಿ | ಮುಗಿ | |
| 49 | 4 | 14 | ಬ್ರಹ್ಮನು | ಬ್ರಹ್ಮನ | |
| 50 | 5 | 4 | ರೌಪತೌ | ಚಾಪರೌ | |
| 51 | 6 | 3 | ಮೂತ್ಮಾ | ಮಾತ್ಮಾ | |
| 52 | 7 | 21 | ಜನಾ | ಜನನಾ | |
| 56 | 4 | 16 | ರಕ್ಷೆಕೆ | ರಕ್ಷೆ | |
| 56 | 5 | 7 | ವಿದಾಂ | ವಿದ್ವಾಂ | |
| 57 | 6 | 2 | ರ್ಜನ್ಮೇ | ರ್ಜನ್ತೇ | |
| 59 | 8 | 8 | ಪ್ಯಾಯೂ | ಪ್ಯಾಯಾ | |

| ಪುಟದ ಸಂಖ್ಯೆ | ಮಂತ್ರದ ಸಂಖ್ಯೆ | ಪಂಜಕ್ತಿಯ ಸಂಖ್ಯೆ | ಇರುವುದು | ಇರಬೇಕಾದ್ದು | ಹೊಸದಾಗಿ ಸೇರಿಸಿದ್ದು |
|---|---|---|---|---|---|
| 60 | 9 | 3 | ಕೇನ | ತೇನ | |
| 62 | 12 | 12 | ವತ | ಏತ | |
| 66 | 15 | 14 | ಹೊಡೆ | ಹೊದಿ | |
| 68 | 1 | 1 | ದೇವೋ | ದೈವೋ | |
| ,, | ,, | 6 | ಬಲ್ಪಿ | ಖಲ್ವಿ | |
| 69 | 2 | 6 | ಆವ್ಯೋ | ಆಪ್ಯೋ | |
| 70 | 3 | 1a | — | — | ಅಂಧರ್ಾಹಿಪಶ್ಯಾಮಃ । ಜೀವತಿ ಶ್ರೋತಪೇತಃ । |
| 70 | ,, | 3 | ವನಿ | ವತಿ | |
| ,, | ,, | 6 | ವಸ್ಮಿ | ವಸ್ಮಿ | |
| ,, | ,, | 10 | ಮನ | ಮನಃ | |
| 71 | ,, | 8 | ಹ್ಯೇತಿ | ಪ್ಯೇತಿ | |
| 72 | 4 | 5 | ನ್ನಬಾರ್ದ | ನ್ನಬಾರ್ದ | |
| 79 | 3 | 4 | ಽನ್ನ | ಽನ್ನಂಸ್ಯ | |
| ,, | 2 | 3 | ರಡ | ಡರ | |
| 80 | 4 | 2 | ಜಾಶ | ಜಾತಶ | |
| 80 | 6 | 3 | ಹ್ಯೈತ್ | ಹ್ಯೈತ | |
| 81 | 8 | 5 | ನನು | ನನ್ನು | |
| ,, | ,, | 8 | ತ್ವಾನೆ | ತ್ರೀನೆ | |
| 84 | 15 | 7 | ಸವ | ಸುವ | |
| 85 | 18 | 1 | ಜಾಶ | ಜಾತ | |
| ,, | ,, | 3 | ಬ್ರಹ್ನ | ಬ್ರಹ್ಮ | |
| 89 | 1 | 3 | ಭಿದ್ಯೇ | ಭಿದ್ಯೇ | |
| ,, | 2 | 5 | ಕ್ಯಾಯನಃ | ಕಾಯನ್ಯಃ | |

| ಪುಟದ ಸಂಖ್ಯೆ | ಮಂತ್ರದ ಸಂಖ್ಯೆ | ಪಂಕ್ತಿಯ ಸಂಖ್ಯೆ | ಇರುವುದು | ಇರಬೇಕಾದ್ದು | ಹೊಸದಾಗಿ ಸೇರಿಸಿದ್ದು |
|---|---|---|---|---|---|
| 89 | 2 | 5 | ಷೇತ್ರಿ | ಷ್ವೇತಿ | |
| 91 | 4 | 11 | ರಜ್ಜೋ | ರಜ್ಜೊ | |
| 92 | 4 | 1 | ನಿರ್ಮೂ | ನಿರ್ಮೂಲ | |
| ,, | 1 | 5 | ಶಾಕ್ಯಾ | ಶಾಕಾ | |
| ,, | ,, | 1 | ದಾಜಾ | ದ್ರಾಜಾ | |
| 93 | 2 | 1 | ನಿಷ್ಟ | ನಿಷ್ಪ | |
| ,, | 3 | 10 | ಖಿಟ್ಯೈ | ಖಿಲ್ಯೈ | |
| 95 | 6 | 9 | ಪಾವ | ವಾವ | |
| ,, | ,, | 15 | ಪು್ರ್ಯಕ್ತಂ | ಪ್ಯೃಕ್ತಂ | |
| 97 | ,, | 5 | ಸುತ | ಸುತ್ತ | |
| ,, | 7 | 3 | ಕತ್ರೇ | ಕರ್ತ್ರೇ | |
| ,, | ,, | ,, | ಜ್ಛ್ವಾನ | ಜ್ಚ್ವಾಸ | |
| ,, | ,, | 4 | ಲಶ್ಬ್ವಾ | ಲಶ್ಚ್ವಾ | |
| ,, | ,, | 5 | ಸ್ಥಶ್ವ | ಸ್ಥಶ್ಚ | |
| 98 | 1 | 9 | ಉರ್ಧ್ವ | ಊರ್ಧ್ವ | |
| 99 | ,, | 18 | Do | Do | |
| 102 | 2 | 1 | ವಿರ್ಯೆ | ವಿರ್ಯು | |
| 105 | 6 | 4 | ಹೈವೋ | ಹೈವ್ರೋ | |
| 108 | 2 | 1 | ಹೃ | ಹ್ಯ | |
| 110 | 5 | 8 | ತ್ಯೇಷಾ | ತ್ಯೇಷಾ | |
| 111 | 6 | 3 | ತ್ಯಸ್ವಾಃ | ತ್ಯಸ್ಯಾಃ | |
| 112 | 7 | ಕಡೇ | ಳನು | ಳನ್ನು | |
| 113 | 8 | 2 | ಶಾಸ್ತ್ರಾ | ಶಾಸ್ತಾ | |
| ,, | ,, | 3 | ಇಂದ | ಇಂದು | |

| ಪುಟದ ಸಂಖ್ಯೆ | ಮಂತ್ರದ ಸಂಖ್ಯೆ | ಪಂಕ್ತಿಯ ಸಂಖ್ಯೆ | ಇರುವುದು | ಇರಬೇಕಾದ್ದು | ಹೊಸದಾಗಿ ಸೇರಿಸಿದ್ದು |
|---|---|---|---|---|---|
| 124 | 20 | 4 | ವಶ್ಯ | ಪಶ್ಯ | |
| 129 | 26 | 9 | ಮಾಯೂ | ಮಯೂ | |
| ,, | 27 | 26 | ದ್ಘಳ | ಢ್ಘಳ | |
| 131 | 28 | 17 | ಇಂದು | ಇರಿದು | |
| 132 | 30 | 25 | ಪರಿ | ಪರೀ | |
| 133 | ,, | 12 | ದ್ವ್ಯಕ್ತಾ | ದುಕ್ವಾ | |
| ,, | ,, | 26 | ಸದ್ರ | ಸದ್ | |
| 138 | 34 | 15 | ಸಸ್ತಿ | ಸಸ್ತೀ | |
| 142 | 36 | 28 | ವಾಖ | ವಾವಖ | |
| 143 | ,, | 7 | ಪಹೆ | ಸಹೆ | |
| ,, | ,, | 9 | ತ್ಮಾಚೀ | ತ್ಮಶುಚೀ | |
| 144 | 37 | 1 | ನೀತಾ | ಸೀತಾ | |
| ,, | ,, | 2 | ಗಾ | ಗ್ನಾ | |
| ,, | ,, | 3 | ಅಥ್ಯಾ | ಅಥಾ | |
| ,, | ,, | 5 | ರಿಂಗಾ | ರಗಾ | |
| ,, | ,, | 24 | ಬ್ರಬ್ಮ | ಬ್ರಹ್ಮ | |



ಲೇಖಕ

**ಎಂ. ಸಿ. ರಾಮರಾವ್**

ಪಂಡಿತರ ಮನೆ

ರಾಮಮೂರ್ತಿ ನಗರ

ಬೆಂಗಳೂರು-560 016